# ಆಳ್ವಾರುಗಳು ಕಂಡ
# ತಿರುವೇಂಗಡ

ಎಂ. ಆರ್. ನರಸಿಂಹನ್

ಶ್ರೀ

# ಆಳ್ವಾರುಗಳು ಕಂಡ
# ತಿರುವೇಂಗಡ

ವೇಂಗಡಮೇ ಯಾಂವಿರುಂಬುಮ್ ವೆಱ್ಪು

(ಪೂದತ್ತಾಳ್ವಾರ್)

ವೇಂಗಡವೇ ನಾವು ಅಪೇಕ್ಷಿಸುವ ಪರ್ವತ

ಪುನವೇಂಗೈ ನಾಱುಂ ಪೊರುಪ್ಪು (ಪೇಯಾಳ್ವಾರ್)

ಶಿರೀಷ ಪುಷ್ಪಗಳ ಪರಿಮಳದಿಂದ ಗಮಗಮಿಸುವ ಪರ್ವತ

ವೆಱ್ಪು ಎನ್ಱು ವೇಂಗಡಂಪಾಡಿನೇನ್ ವೀಡುಆಕ್ಕಿ

ನಿಱ್ಕಿನ್ಱೇನ್........(ತಿರುಮಳಿಶೈ ಆಳ್ವಾರ್)

ಪರ್ವತವೆಂದು ವೇಂಗಡವನ್ನು ಹಾಡಿದೆನು. ಈ

ನಾಮೋಚ್ಚಾರಣೆ ಮಾತ್ರದಿಂದಲೇ ಮೋಕ್ಷವೆಂದು

ಅರಿತು ನಿಂತಿದ್ದೇನೆ.

ಎಂ. ಆರ್. ನರಸಿಂಹನ್

ALWARUGALU KANDA THIRUVENGADA. A Thesis by M. R. Narasimhan 5/1 'Thiruvengadam', Mahanth's Layout, Bull Temple Road, Bangalore - 560 019.



First Edition 1993
No. of Copies Printed 1000

**Published with the Financial Assistance of Thirumala Tirupati Devasthanams under their Scheme 'Aid to Publish Religious Works'.**



**Price : Rs. 28**
ಬೆಲೆ : 28 ರೂಪಾಯಿಗಳು

ಪ್ರಕಾಶಕರು :

ಎಂ. ಆರ್. ನರಸಿಂಹನ್
'ತಿರುವೇಂಗಡಂ'
5/1 ಮಹಂತ್ಸ್ ಲೇಔಟ್
ಬುಲ್ ಟೆಂಪಲ್ ರಸ್ತೆ
ಬೆಂಗಳೂರು - ೫೬೦ ೦೧೯

ಮುದ್ರಕರು :

ರಾಷ್ಟ್ರೋತ್ಥಾನ ಮುದ್ರಣಾಲಯ
ಗವೀಪುರಂ ಗುಟ್ಟಹಳ್ಳಿ ರಸ್ತೆ
ಕೆಂಪೇಗೌಡನಗರ, ಬೆಂಗಳೂರು – ೫೬೦ ೦೧೯

ಶ್ರೀ

# ನಿವೇದನೆ

ಆಳ್ವಾರುಗಳ ತಮಿಳು ದಿವ್ಯ ಪ್ರಬಂಧಗಳಲ್ಲಿರುವ ತಿರುಪತಿಯ ವಿಷಯಗಳನ್ನು ಕನ್ನಡ ಕುಲಬಾಂಧವರು ಅರಿತು ಆನಂದಿಸಲೆಂಬ ಉದ್ದೇಶದಿಂದ ಈ ಪುಸ್ತಕವನ್ನು ಬರೆದಿದ್ದೇನೆ. ನಮ್ಮೆಲ್ಲರಿಗೂ ಆದಿದೈವ ತಿರುಮಲೆಯ ಒಡೆಯ; ಪಂಚದ್ರಾವಿಡ ಭಾಷೆಗಳಲ್ಲಿ ತಮಿಳೂ ಒಂದು. ಆ ನಾಡಿನ ಸಂತ ಶ್ರೇಷ್ಠರು ಭಕ್ತಿಭಾವದಿಂದ ಸಲ್ಲಿಸಿರುವ ಸ್ತುತಿ ಸೇವೆಯೇ ಕನ್ನಡದಲ್ಲಿ ಮೂಡಿರುವ ಈ ಪುಸ್ತಕ. ಕನ್ನಡ ಬಂಧುಗಳು ಈ ಪುಸ್ತಕದಲ್ಲಿನ ರಸಾಸ್ವಾದನೆ ಮಾಡಿ ಸಂತೋಷಿಸಿದಲ್ಲಿ ಅದೇ ನನ್ನ ಸಾಹಿತ್ಯಕ್ಕೆ ಶ್ರೀರಕ್ಷೆ.

ಕನ್ನಡದಲ್ಲಿ ಈಗಾಗಲೇ ತಿರುಪತಿ, ತಿಮ್ಮಪ್ಪ—ವಿಚಾರಗಳನ್ನು ಕುರಿತು ಕೆಲವು ಪುಸ್ತಕಗಳು ಹೊರಬಂದಿವೆ. ತಿರುಮಲೆಯ ಮೇಲೆ ಹಾಡಿರುವ ಆಳ್ವಾರ್ ಪಾಶುರಗಳು ಅರ್ಥಸಹಿತವಾಗಿ ಪ್ರಕಟಗೊಂಡಿದೆ. ಆದರೆ ತಿರುಮಲೆಯನ್ನು ಕುರಿತ ಜಿಜ್ಞಾಸೆ, ಆಳ್ವಾರ್ ಪಾಶುರಗಳಲ್ಲಿ ಅಲ್ಲಲ್ಲಿ ಮಿಂಚುವ, ಪ್ರಾಕೃತಿಕ, ಸಾಮಾಜಿಕ, ಪೌರಾಣಿಕ, ಐತಿಹಾಸಿಕ, ಸಾಂಸ್ಕೃತಿಕ, ರಾಜಕೀಯ ಇತ್ಯಾದಿ ಅನೇಕ ವಿಷಯಗಳು ಇದರಲ್ಲಿ ಚರ್ಚಿಸಲ್ಪಟ್ಟಿವೆ. ಈ ಕೃತಿರಚನೆಗೆ ಹಲವಾರು ಗ್ರಂಥಾಧ್ಯಯನ ನಡೆಸಿ ಜ್ಞಾನಾರ್ಜನೆ ಮಾಡುವ ಅವಕಾಶ ನನಗೆ ದೊರೆತದ್ದಕ್ಕಾಗಿ ಆ ಹಿರಿಯ ಗ್ರಂಥಕರ್ತರಿಗೆಲ್ಲಾ ನನ್ನ ಕೃತಜ್ಞತೆಗಳು. ಈ ಗ್ರಂಥ ರಚನೆಗೆ ಹಲವು ಕೃತಿಗಳ ನೆರವು ಒದಗಿರುತ್ತೆ, ಅದಕ್ಕಾಗಿಯೂ ಆ ಎಲ್ಲಾ ಲೇಖಕರಿಗೆ ಚಿರಋಣಿಯಾಗಿದ್ದೇನೆ.

ಈ ಪುಸ್ತಕ ಪ್ರಕಟನೆಯ ಕಾರ್ಯದಲ್ಲಿ ಮೇಲುಕೋಟೆಯ 'ಸಂಸ್ಕೃತ ಸಂಶೋಧನ ಸಂಸತ್'ನ ನಿರ್ದೇಶಕರಾದ ಪ್ರೊಫೆಸರ್ ಎಂ. ಎ. ಲಕ್ಷ್ಮೀ ತಾತಾಚಾರ್, ಎಂ.ಎ., ಅವರು ನನ್ನ ಜ್ಞಾನವಿಕಾಸನಕ್ಕೆ ಸಹಾಯ ಮಾಡಿ ಪ್ರೋತ್ಸಾಹಿಸಿದ್ದಾರೆ. ಅವರಿಗೆ ನನ್ನ ಆದ್ಯ ನಮನಗಳು. ಈ ಗ್ರಂಥ ರಚನೆಗೆ ಪ್ರೇರಕಶಕ್ತಿ ನನ್ನ ಮಾತೃಶ್ರೀ ಅವರು. ಈ ಪುಸ್ತಕ ಪ್ರಕಟನೆಗೆ ದ್ರವ್ಯ ಸಹಾಯ ನೀಡಿ ಪ್ರೋತ್ಸಾಹಿಸಿದವರು ತಿರುಮಲೆ ತಿರುಪತಿ ದೇವಸ್ಥಾನದ ಆಡಳಿತ

ವರ್ಗದವರು, ಮದರಾಸಿನ ಸುಂದರಂ ಛಾರಿಟೀಸ್‌ನ ಸಂಚಾಲಕರು ಮತ್ತು ಶ್ರೀಮತಿ ಡಾ॥ ಅಲಮೇಲ ವೆಂಕಟರಾಮನ್ ಮುಂತಾದವರು. ತಿರುಮಲೆ ತಿರುಪತಿ ದೇವಸ್ಥಾನದ ನೆರವು ದೊರೆತದ್ದು ನಮ್ಮ ಕುಲದೈವವಾದ ಶ್ರೀನಿವಾಸನ ಅನನ್ಯ ಕೃಪೆಯೇ ಲಭ್ಯವಾದಂತೆ ಭಾವಿಸುತ್ತೇನೆ. ಅತ್ಯಲ್ಪ ಕಾಲದಲ್ಲಿ ಅಂದವಾಗಿ ಈ ಪುಸ್ತಕವನ್ನು ಮುದ್ರಿಸಿಕೊಟ್ಟವರು ಬೆಂಗಳೂರಿನ ರಾಷ್ಟ್ರೋತ್ಥಾನ ಮುದ್ರಣಾಲಯದ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು.

ಈ ಎಲ್ಲಾ ಉದಾರಚರಿತರಿಗೂ ನನ್ನ ಅನಂತಾನಂತ ವಂದನೆಗಳು.

ದಿನಾಂಕ : 9-9-1993 | ಇತಿ,
ಬೆಂಗಳೂರು | ಎಂ. ಆರ್. ನರಸಿಂಹನ್

ಶ್ರೀ

'ಆಳ್ವಾರುಗಳು ಕಂಡ ತಿರುವೇಂಗಡ'ವನ್ನು ಬರೆದು ಮುಗಿಸಿದ ತರುಣದಲ್ಲಿಯೇ ತಿರುಮಲೆಯನ್ನು ದರ್ಶಿಸುವ ಸೌಭಾಗ್ಯ ದೊರಕಿತು. ಇದು ಶ್ರೀನಿವಾಸನು ಕೃತಿಯನ್ನು ಒಪ್ಪಿಕೊಂಡಿರುವ ಸಂಕೇತವೇನೋ ಎಂದು ಭಾವಿಸಲು ಸಾಧ್ಯವಾಗಿದೆ. ತಿರುಮಲೆಯನ್ನು ಸಂದರ್ಶಿಸಿದಾಗ ನನಗುಂಟಾದ ಭಾವಪರವಶತೆ, ನನಗೂ ಅರಿಯದಂತೆ ತಮಿಳಿನ ಲಘುಪರಿಚಯವನ್ನು ಹೊಂದಿದ್ದ ನನ್ನಿಂದ 'ತಿರುಮಲೆಯಿನ್ ಮಂಗಳಾಶಾಸನಂ' ಕವನವನ್ನು ಹೊರಹೊಮ್ಮಿಸಿತು. ಇದೂ ಆ ದೇವನ ಪ್ರೇರಣೆ ಎಂಬುದಾಗಿ ಭಾವಿಸಿ ಅದನ್ನು ಇಲ್ಲಿ ಸೇರಿಸಿದ್ದೇನೆ. ಅದರ ಕನ್ನಡ ಅನುವಾದ ವನ್ನೂ ವಾಚಕರ ಅವಗಾಹನೆಗೆ ನೀಡಿರುತ್ತೇನೆ. ಈ ಕವನದಲ್ಲಿನ ತಪ್ಪುಗಳನ್ನು ಸರಿಪಡಿಸಿ, ಕೆಲವೆಡೆ ಮಾರ್ಪಾಡುಗಳನ್ನೂ ಮಾಡಿಕೊಟ್ಟವರು ಆತ್ಮೀಯರು ಶ್ರೀ ವಿ. ಎಸ್. ವಿಜಯರಾಘವನ್ ಅವರು. ಅವರಿಗೆ ನನ್ನ ಕೃತಜ್ಞತೆಗಳು.

## ತಿರುಮಲೆಯಿನ್ ಮಂಗಳಾಶಾಸನಂ

ತಿರುಮಾಲಿನ್ ಶೇವಡಿಯೈ
ಶಿರಂಧರಿತ್ತಾನ್ ವಾೞಿಯೇ

ತಿರುಅರವಿನ್ ಉರವೇಟ್ರ
ತಿರುಕ್ಕುನ್ಱಂ ವಾೞಿಯೇ

ಪತ್ತರ್‌ಗಳ್ ತಂ ವಿನೈತೀರ್ಕುಂ
ತಿರುಮಲೈಯೇ ವಾೞಿಯೇ

ವಿಣ್ಣವರುಂ, ಮಣ್ಣವರುಂ ಮಡ್ತೈ
ವೆೞ್ಪೇ ನೀ ವಾೞಿಯೇ

ಎಂಗೆಂಗುಂ ವೇಂಗೈವಣಂ
ನಾರು ಮಲೈ ವಾೞಿಯೇ

ಆೞ್ವಾರ್‌ಗಳ್ ಪಾವಣಾಲೈ —
ಯಣಿಯುಮಲೈ ವಾೞಿಯೇ

ಮಹಾಮುನಿವರೆೞುಂದರುೞಿ
ಪುಹೞ್‌ನ್ದ ಮಲೈವಾೞಿಯೇ

ಅರುಮಱೈಗಳ್ ಶೇನ್ದ್ರುದಿತ್ತ
ಪುನಿದ ಮಲೈ ವಾೞಿಯೇ

ಅಡಿಯೋಂಗಳಿಪ್ಪೊೞುದುಂ
ವಣಂಗು ಮಲೈ ವಾೞಿಯೇ

ಮಣ್ ಉಲಗಿನ್ ವೈಗುಂದಂ
ಪಲ್ಲಾಂಡ್ ವಾೞಿಯೇ ।

---

# ತಿರುಮಲೆಯ ಮಂಗಳಾಶಾಸನ

## (ಕನ್ನಡಾನುವಾದ)

ಸಿರಿಧರನ ತಳಿರಡಿಯು
　　ಶಿರದಿ ತಳೆದವ ಬಾಳ್ಗೆ

ಉರಗೇಂದ್ರನೊಡಲೆನಿಪ
　　ಭೂಧರಂ ಬಾಳ್ಗೆ

ನತಜನರ ದುಹಿತಗಳ
　　ನೊತ್ತರಿಪಗಿರಿ ಬಾಳ್ಗೆ

ಬಾನವರ್ ಮಾನವರ್
　　ಆಶ್ರಯಿಪ ಮಲೆ ಬಾಳ್ಗೆ

ಶಿರೀಷ ಸುಮಗಂಧ
　　ಮೊರೆವದ್ರಿ ಬಾಳ್ಗೆ

ಆಳ್ವಾರ್ಗಳ್ ತುತಿಮಾಲೆ
　　ಯಣಿದ ನಗಬಾಳ್ಗೆ

ಮಾಮುನಿಗಳೈತಂದು
　　ಪೊಗಳ್ದಶೈಲಂ ಬಾಳ್ಗೆ

ವೇದಗಳ್ ಸೇರ್ದ್ದದಿಸ —
　　ಲಾದ ಅಚಲಂಬಾಳ್ಗೆ

ದಾಸರಾಮೋಗಳುಂ
　　ನಮಿಪ ಗೋತ್ರಂ ಬಾಳ್ಗೆ

ಭೂಲೋಕ ವೈಕುಂಠ
　　ಮನವರತ ಬಾಳ್ಗೆ

---

ಶ್ರೀ

# ಆಳ್ವಾರುಗಳು ಕಂಡ ತಿರುವೇಂಗಡ

## ೧

ಆಳ್ವಾರುಗಳು ಹನ್ನೆರಡು ಮಂದಿ. ಆಳ್ವಾರ್ ಎಂದರೆ ಮುಳುಗಿದವರು ಎಂದರ್ಥ. ಅತಿಶಯವಾದ ಭಗವದ್ಭಕ್ತಿಯಲ್ಲಿ ಮುಳುಗಿದ್ದರಿಂದಲೇ ಈ ಹೆಸರು ಬಂದಿತೆಂದು ಹೇಳುತ್ತಾರೆ.

ಇವರೆಲ್ಲಾ ವಿಷ್ಣುವಿನ ದಿವ್ಯಲೀಲಾ ಗುಣಗಳನ್ನೇ ಹಾಡಿ, ಅವನನ್ನೇ ಪರದೈವವೆಂದು ನಂಬಿ, ಅವನಲ್ಲಿ ಭಕ್ತಿ ಮಾಡಿದರು ; ಅವನನ್ನು ಅನುಭವಿಸಿದರು. ಇವರು ತಮಿಳುನಾಡಿನ ಸಂತ ಶ್ರೇಷ್ಠರು. ಇವರಲ್ಲಿ ಕುಲಶೇಖರಾಳ್ವಾರ್ ಎನ್ನುವವರು ಮಾತ್ರ ಈಗಿನ ಕೇರಳ ಪ್ರಾಂತ್ಯದವರು. ಈ ಆಳ್ವಾರ್‌ಗಳಿಂದ ಆರಂಭಗೊಂಡ ಭಕ್ತಿಪಂಥವನ್ನು ಮುಂದೆ ಆಚಾರ್ಯ ರಾಮಾನುಜರು ಶ್ರೀವೈಷ್ಣವ ಪಂಥವೆಂದು ಕರೆದು, ಈ ಮಾರ್ಗಕ್ಕೆ ಒಂದು ರೂಪುರೇಷೆಯನ್ನು ನೀಡಿ ವಿಶಿಷ್ಟಾದ್ವೈತ ಸಿದ್ಧಾಂತವೆಂಬುದಾಗಿ ಸಾರಿದರು. ಅವರು ಸ್ಥಾಪಿಸಿದ ದರ್ಶನವನ್ನು "ಎಂಬೆರುಮಾನಾರ್ ದರ್ಶನಂ" (ಎಂಬೆರುಮಾನಾರ್ ಎಂದರೆ ರಾಮಾನುಜಾಚಾರ್ಯರ ಮತ್ತೊಂದು ನಾಮಧೇಯ) ಎಂದು ಸಾಕ್ಷಾತ್ ಶ್ರೀ ರಂಗನಾಥನೇ ನಾಮಕರಣ ಮಾಡಿದನೆಂದು ಪ್ರತೀತಿ !

ಆಳ್ವಾರುಗಳ ವಿಷ್ಣುಸ್ತುತಿಗಳ ಭಾಷೆ ತಮಿಳು. ಇವು ಭಕ್ತಿಮಯ ವಾಗಿಯೂ, ಕಾವ್ಯಮಯವಾಗಿಯೂ, ಗೇಯ ಪ್ರಕಾರವುಳ್ಳದ್ದಾಗಿಯೂ ಇರುವುದ ರಿಂದ ಇವನ್ನು "ಪಾಶುರ"ಗಳೆಂದು ಕರೆದರು. ರಾಗ, ಹಾಡುಗಳ ರಚನೆಗಳನ್ನುಳ್ಳ ಇವು ; ಶ್ರೇಷ್ಠವಾದ ಪದ್ಯಗಳೆಂಬುದಾಗಿ ಅಥವಾ ಪಾ (ಹಾಡಿನ ಧಾತುರೂಪ) ಮಾಲೆಗಳೆಂದು ಪುರಸ್ಕರಿಸಿದರು. ಈ ಪಾಶುರ (ಶ್ಲೋಕ)ಗಳಿಂದ ಒಡಗೂಡಿಡ ಶ್ಲೋಕ ಸಮುಚ್ಚಯ ಅಥವಾ ಸ್ತೋತ್ರ ಕಾವ್ಯಕ್ಕೆ ಪ್ರಬಂಧವೆಂದು ಹೆಸರಿಟ್ಟರು. ಇವು ದೈವ ವಿಷಯಗಳನ್ನು ಒಳಗೊಂಡಿದ್ದರಿಂದ ಶ್ರೇಷ್ಠ ಪ್ರಬಂಧಗಳೆಂಬ ಕಾರಣ

ಡಿಂದ "ದಿವ್ಯ ಪ್ರಬಂಧ"ಗಳೆಂದೇ ಪ್ರಸಿದ್ಧಗೊಂಡವು. ಹನ್ನೆರಡು ಆಳ್ವಾರ್‌ಗಳಿಂದ ರಚಿಸಲ್ಪಟ್ಟ ಒಟ್ಟು ಪಾಶುರಗಳ ಸಂಖ್ಯೆ ನಾಲ್ಕು ಸಾವಿರವಾದ್ದರಿಂದ ಈ ದಿವ್ಯ ಪ್ರಬಂಧಗಳನ್ನು "ನಾಲ್ಕು ಸಾವಿರ ದಿವ್ಯ ಪ್ರಬಂಧಗಳು" ಅಥವಾ ತಮಿಳಿನಲ್ಲೇ ಹೇಳಬೇಕೆಂದರೆ "ನಾಲಾಯಿರ ದಿವ್ಯ ಪ್ರಬಂಧಂ" ಎಂದು ಕರೆಯುತ್ತಾರೆ.

ಈ ಪ್ರಬಂಧಗಳಲ್ಲೆಲ್ಲಾ ಪರಮಾತ್ಮನಾದ ನಾರಾಯಣನ ಶ್ರೇಷ್ಠತ್ವ, ಪಾರಮ್ಯ, ದಿವ್ಯಲೀಲೆ, ಗುಣ ವಿಭವೈಶ್ವರ್ಯಾದಿಗಳು, ತತ್ವಗಳು ತುಂಬಿರುವುವು. ಒಟ್ಟಿನಲ್ಲಿ ವೇದದಲ್ಲಿ ಯಾವ ಅಂಶಗಳು ಪ್ರತಿಪಾದಿತವಾಗಿರುವುವೋ, ಆ ವೇದ ಪುರುಷ ವಿಷ್ಣುವಿನ ಸಗುಣನಿರ್ಗುಣತ್ವಾದಿಗಳು ಇವುಗಳಲ್ಲಿಯೂ ನಿರೂಪಣ ಗೊಂಡಿರುವುದರಿಂದಲೇ ಇವನ್ನು "ತಮಿಳುವೇದ"ಗಳೆಂದು ವಿದ್ವಾಂಸರು ಕರೆದರು. ಸಂಸ್ಕೃತ ವೇದಕ್ಕೆ ಸರಿಯೋ, ಮಿಗಿಲೋ ಎಂಬುದಾಗಿ ತಮಿಳುನಾಡಿನ ಉತ್ಕಟಭಾಷಾವಾದಿಗಳು ನಿರ್ಣಯಿಸಿದ್ದಾರೆ. ತಮಿಳು ಪ್ರಾಚೀನ ಭಾಷೆಯೆಂದು ವಾದಿಸುವ ದ್ರಾವಿಡರೂ ಇದಕ್ಕೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿದರು. ಇದನ್ನು ಅನುಸಂಧಾನ ಮಾಡುತ್ತ ಬಂದು ದ್ರಾವಿಡ ವೇದವೆಂದೂ ಕರೆದರು. ಹೀಗೆ ಆಳ್ವಾರುಗಳಿಂದ ಪ್ರಾರಂಭಗೊಂಡ ಈ ಪ್ರಬಂಧಗಳು ಬಾಯಿಂದ ಬಾಯಿಗೆ ಪಾಠವಾಗಿ ಸಾಗಿಬಂದು 'ಶ್ರುತಿ' ಎನ್ನುವ ಸಮಾನಾರ್ಥಗೊಂಡ ಸಂಸ್ಕೃತ ವೇದಕ್ಕೆ ಈ ರೀತಿಯಿಂದಲೂ ಸಮನೆನಿಸಿಕೊಂಡು ಮೆರೆದುವು.

ಆಚಾರ್ಯ ರಾಮಾನುಜರು ಈ ಪ್ರಬಂಧಗಳನ್ನು ಆಧಾರವನ್ನಾಗಿ ಇಟ್ಟುಕೊಂಡೇ ತಮ್ಮ ಸಿದ್ಧಾಂತ ಸ್ಥಾಪಿಸಿದರು. ಈ ಸಿದ್ಧಾಂತವನ್ನು ಭಾರತಾದ್ಯಂತ ಮಾನ್ಯ ಮಾಡಲು, ಅದನ್ನು ಪ್ರತಿಪಾದಿಸಲೋಸುಗ ಸಂಸ್ಕೃತ ಭಾಷೆಯಿಂದಲೇ ಬಹುಪಾಲು ತುಂಬಿದ್ದ ಭಾರತವನ್ನು ಸಂಚಾರ ಮಾಡಿ ಆ ಜನರ ಮೇಲೆ ಪರಿಣಾಮ ಬೀರುವಂತೆ ಸಂಸ್ಕೃತ ವೇದ ವಾಙ್ಮಯ, ಪುರಾಣೋಪನಿಷತ್ ಗಳಲ್ಲಿನ ಸಮಾನ ತತ್ವಗಳನ್ನು ಪ್ರಮಾಣವಾಗಿ ತೋರಿಸಿಕೊಟ್ಟರು. ತಮ್ಮ ಮಾರ್ಗದ ಅನುಸಾರವಾಗಿ ಪ್ರಸ್ಥಾನತ್ರಯಗಳಿಗೆ ಭಾಷ್ಯವನ್ನು ಬರೆದರು. ಇದರ ನಿರೂಪಣೆಗೆಂದು ಇವರು ಒಂಭತ್ತು ಸಂಸ್ಕೃತ ಗ್ರಂಥಗಳನ್ನು ರಚಿಸಿ ತಮ್ಮ ಸಿದ್ಧಾಂತವು ಕೇವಲ ಪ್ರಬಂಧಗಳ ಮೇಲೆಯೇ ಆಧಾರಿತವಾಗಿಲ್ಲ; ಅದಕ್ಕೆ ವೇದದ ಪ್ರಾಚೀನತೆಯೂ ದೃವ್ಯಪನ್ನೊದಗಿಸಿದೆ ಎನ್ನುವುದನ್ನು ಪ್ರಮಾಣಗೊಳಿಸಿದರು. ಅವರು ತಮಿಳುನಾಡಿಗೇ ಸೀಮಿತಗೊಂಡಿದ್ದ ತಮಿಳು ಪ್ರಬಂಧಗಳನ್ನು ಉದಹರಿಸಿ ತಮ್ಮ ಮತತತ್ವ ವಿವರಣೆ ನೀಡಿದ್ದರೆ ಅವು ಭಾರತದ ಮುಕ್ಕಾಲು ಪಾಲು ಜನರಿಗೆ ತಿಳಿಯದೇಹೋಗಿ, ಅವರ ಮತ ಪ್ರಸಾರಣದ ಉದ್ದೇಶಕ್ಕೆ ಭಂಗ ಮಾತ್ರ ಆಗದೆ, ಈಗ ವಿಶ್ವಮಾನ್ಯಗೊಂಡಿರುವ ವಿಶಿಷ್ಟಾದ್ವೈತ ಸಿದ್ಧಾಂತ ಕೇವಲ ಒಂದು ಪ್ರಾಂತ್ಯಕ್ಕೆ ಸೀಮಿತಗೊಳ್ಳುತ್ತಿತ್ತು. ಆದರ ತತ್ವ ವಿಚಾರಗಳು ಭಾರತದ ಆಗಿನ

ಪ್ರಸಿದ್ಧ ಮತಗಳನ್ನು ಸ್ಪರ್ಧಿಸಿ ಸೋಲಿಸಲು ಅಸಮರ್ಥವಾಗಿಬಿಡುವ ಸಂಭವವಿದ್ದಿತು.

ಇದನ್ನು ಯೋಚಿಸಿಯೇ ಆಚಾರ್ಯ ರಾಮಾನುಜರು ಈ ದಿಟ್ಟ ಹಂಚಿಕೆಯನ್ನು ಹಾಕಿಕೊಂಡು, ತಮ್ಮ ಪ್ರಯತ್ನವನ್ನು ಪ್ರಾಮಾಣಿಕತೆಯಿಂದ ನಿರ್ವಹಿಸಿ ಫಲಿತಾಂಶವನ್ನು ಪ್ರಶಂಸಿಸುವ ರೀತಿಯಲ್ಲಿ ಪಡೆದರು. ಇದರಿಂದಲೇ ಇವರ ಸಿದ್ಧಾಂತವನ್ನು "ಉಭಯ ವೇದಾಂತ"ವೆಂದು ಕರೆಯಲಾಯಿತು. ದ್ರಾವಿಡ ವೇದ ಎಂದು ಕರೆಯಲ್ಪಡುವ ಪ್ರಬಂಧ ವಾಙ್ಮಯ ಒಂದು ಕಡೆ ಈ ಸಿದ್ಧಾಂತದ ನದಿಗೆ ಚೈತನ್ಯ ಧಾರೆಯನ್ನೆರೆದರೆ, ಸಂಸ್ಕೃತ ವೇದೋಪನಿಷತ್ ಪುರಾಣಾದಿಗಳು ಇದಕ್ಕೆ ಜೀವ ಜಲವನ್ನು ಮತ್ತೊಂದು ಕಡೆಯಿಂದ ಎರೆದುವು ಎಂದರೆ ತಪ್ಪಾಗಲಾರದು.

ಅವರು ತಮ್ಮ ಗ್ರಂಥಗಳಲ್ಲಿ ಪ್ರಬಂಧಗಳನ್ನು ಉದಾಹರಿಸದಿರುವುದರಿಂದಲೂ ಅವರು ಸಂಸ್ಕೃತದಲ್ಲೇ ತಮ್ಮ ಗ್ರಂಥಗಳನ್ನು ರಚಿಸಿರುವುದರಿಂದಲೂ ಕೆಲವು ಕುತ್ಸಿತವಾದಿಗಳು ಬೇರೊಂದು ರೀತಿ ಅರ್ಥಮಾಡಿ ರಾಮಾನುಜರಿಗೆ ಪ್ರಬಂಧಗಳ ಮೇಲೆಯೂ, ಆಳ್ವಾರುಗಳ ಮೇಲೆಯೂ ಸಂಸ್ಕೃತ ವಾಙ್ಮಯದಷ್ಟು ಒಲವು ಇರಲಿಲ್ಲವೆಂದು ವಾದಿಸುತ್ತಾರೆ !

ವಿದ್ಯಾಲಂಕಾರ ಪ್ರೊ॥ ಎಸ್. ಕೆ. ರಾಮಚಂದ್ರರಾಯರಂತಹವರು ತಮ್ಮ 'ತಿರುಪತಿ ತಿಮ್ಮಪ್ಪ' "ಆಳ್ವಾರರ ನುಡಿಮುತ್ತುಗಳು" ಎನ್ನುವ ಪುಸ್ತಕಗಳಲ್ಲಿ ಶ್ರೀ ರಾಮಾನುಜರ ಮೇಲೆ ವಿಚಿತ್ರ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ಗೊಂದಲಕ್ಕೆಡೆ ಮಾಡಿದ್ದಾರೆ. ಅದಕ್ಕಾಗಿ ಈ ವಿವರಣೆ ಬರೆಯಬೇಕಾಯಿತು.

ಅವರ ವಿವರಣೆ ಇಂತಿದೆ :

"ಆಚಾರ್ಯ ಮೂವರಲ್ಲಿ (ನಾಥಮುನಿ, ಯಾಮುನಾಚಾರ್ಯ, ರಾಮಾನುಜಾಚಾರ್ಯ) ಯಾರೂ ತಮಿಳು ಪ್ರಬಂಧದ ಪರಿಚಯವನ್ನು ಅಷ್ಟು ಚೆನ್ನಾಗಿ ಪಡೆದಿದ್ದಿರಲಾರರು. ತಮ್ಮ ವೈದಿಕ ಸಂಪ್ರದಾಯದ ನಿಲುವನ್ನು ಪ್ರಬಂಧಗಳಿಂದ ಪುರಸ್ಕರಿಸುವ ಕುತೂಹಲವೂ ಅವರಿಗಿದ್ದಿರಲಾರದು.........ಇವರನ್ನೆಲ್ಲಾ (ಆಳ್ವಾರುಗಳನ್ನು) ಒಂದೆಡೆ ಕಲೆಹಾಕುವ ಸಾಹಸ ಯಾವಾಗ ನಡೆಯಿತೋ, ಯಾರು ಮಾಡಿದರೋ ತಿಳಿಯದು. ರಾಮಾನುಜರ ನಂತರ ನಡೆಯಿತೆಂದು ತಿಳಿಯುತ್ತದೆ. ನಾಥಮುನಿಗಳು, ಯಾಮುನರು, ರಾಮಾನುಜರು ಈ ಮೂವರೂ ವೈದಿಕ ಸಂಪ್ರದಾಯವನ್ನು ಎತ್ತಿ ಹಿಡಿದು ಸಂಸ್ಕೃತದಲ್ಲಿ ಗ್ರಂಥ ರಚಿಸಿದ್ದಾರೆ. ಇಲ್ಲೆಲ್ಲಿಯೂ ಯಾವ ಆಳ್ವಾರುಗಳ ಅಥವಾ ಯಾವ ಪ್ರಬಂಧದ ಪ್ರಸ್ತಾಪವೂ ಕಾಣಸಿಗುವುದಿಲ್ಲ. (ತಿರುಪತಿ ತಿಮ್ಮಪ್ಪ)....... ನಮ್ಮಾಳ್ವಾರರೂ, ಅವರ ತಿರುವಾಯ್ಮೊಳಿಯೂ ಶ್ರೀವೈಷ್ಣವ ಸಂಪ್ರದಾಯದಲ್ಲಿ ಮೊದಲು ಸೇರಿಕೊಂಡವು. ಉಳಿದ ಆಳ್ವಾರರ ಅಥವಾ ಅವರ ಪ್ರಬಂದಗಳ ಪರಿಚಯ ನಾಥಮುನಿಗಳಿಗಾಗಲೀ,

ಯಾಮುನಮುನಿಗಳಿಗಾಗಲೀ, ರಾಮಾನುಜಾಚಾರ್ಯರಿಗಾಗಲೀ ಇದ್ದಿತೆನ್ನುವುದಕ್ಕೆ ಆಧಾರವಿಲ್ಲ. ಹಾಗೆ ನೋಡಿದರೆ ರಾಮಾನುಜರು ತಮ್ಮ ಯಾವ ಗ್ರಂಥದಲ್ಲಿಯೂ ನಮ್ಮಾಳ್ವಾರರನ್ನಾಗಲೀ, ತಿರುವಾಯ್ಮೊಳಿಯನ್ನಾಗಲೀ ಉಲ್ಲೇಖಿಸಿಲ್ಲ. ಆ ಆಳ್ವಾರುಗಳ ಪರಿಚಯ ತಮಗಿದ್ದಿತೆನ್ನುವುದನ್ನೂ ಸೂಚಿಸಿಯೂ ಇಲ್ಲ. ಇನ್ನು ಉಳಿದ ಆಳ್ವಾರುಗಳ ಪಾಡೇನು ? (ಆಳ್ವಾರುಗಳ ನುಡಿಮುತ್ತು).

ಇನ್ನೊಂದು ಜಾಗದಲ್ಲಿ "ಇಡೀ ನಾಲಾಯಿರ ಪ್ರಬಂಧದ (ನಾಲ್ಕು ಸಾವಿರ ಪಾಶುರಗಳ) ಕಲ್ಪನೆ ಕಾಣುವುದು ಇದೇ ಮೊದಲು. (ಪೆರಿಯವಾಚ್ಚಾನ್ ಪಿಳ್ಳೈ ಕ್ರಿ. ಶ. ೧೨೨೮) ಅಲ್ಲಿಯವರೆಗೂ ಪ್ರಬಂಧಗಳೆಂದರೆ ನಮ್ಮಾಳ್ವಾರರ ತಿರುವಾಯ್ಮೊಳಿಯಷ್ಟೇ. ಹೀಗೆ ಪ್ರಬಂಧ ವಾಙ್ಮಯದ ಹರವು ಹಿಗ್ಗಿದುದು ಗೋವಿಂದಭಟ್ಟರ ಪರಂಪರೆಯಲ್ಲಿ (ಎಂಬಾರ್), ರಾಮಾನುಜರ ಪರಂಪರೆಯಲ್ಲಲ್ಲ ಎಂಬುದನ್ನು ಗಮನಿಸಬೇಕು. ಗೋವಿಂದಭಟ್ಟರ ಪರಂಪರೆಯಲ್ಲಿ ಬಂದ ಪೆರಿಯವಾಚ್ಚಾನ್ ಪಿಳ್ಳೈ ತೊಂಭತ್ತು ವರ್ಷ ಕಾಲ ಬದುಕಿದ್ದು ಪ್ರಭಾವಶಾಲಿಗಳಾಗಿದ್ದವರು. ಆವರಿಂದಲೇ ಶ್ರೀವೈಷ್ಣವ ಸಂಪ್ರದಾಯಕ್ಕೂ ಆಳ್ವಾರರಿಗೂ ನಿಕಟವಾದ ಸಂಬಂಧ ಬೆಳೆದಿರಬಹುದು" ಎಂದು ಎಸ್. ಕೆ. ರಾಮಚಂದ್ರರಾಯರು ಹೇಳುತ್ತಾರೆ (ಆಳ್ವಾರರ ನುಡಿಮುತ್ತು).

ಆದರೆ ಶ್ರೀ ರಾಮಾನುಜರು ಪ್ರಬಂಧ ವಾಙ್ಮಯವನ್ನು ಸಂಪೂರ್ಣ ಅರಿತು ನುರಿತು ಪಾರಂಗತರಾಗಿದ್ದರು. ಅವುಗಳ ಬಗೆಗೆ ಆದರ ತಳೆದಿದ್ದರು. ಆಳ್ವಾರ್‌ಗಳೆಂದರೆ ಅಂತರಂಗದಿಂದ ಗೌರವಿಸುತ್ತಿದ್ದರು. ರಾಯರು ತಿಳಿದಿರುವಂತೆ ನಾಥಮುನಿ, ಯಾಮುನರು ಮತ್ತು ರಾಮಾನುಜರ ಕಾಲಕ್ಕೆ ಕೇವಲ ನಮ್ಮಾಳ್ವಾರ್ ಅವರ ತಿರುವಾಯ್ಮೊಳಿ ಮಾತ್ರವೇ ತಿಳಿದಿದ್ದಿತು ಎನ್ನುವ ವಾದ ಕೇವಲ ಕಲ್ಪನೆ. ಏತಕ್ಕೆಂದರೆ ಆ ವೇಳೆಗೆ ಆಳ್ವಾರ್‌ಗಳೆಲ್ಲ ಆವಿಷ್ಕರಿಸಲ್ಪಟ್ಟು ಅವರ ಪ್ರಬಂಧಗಳೆಲ್ಲಾ ಇವು ಇಂತು, ಇಷ್ಟು ಎಂದು ಹೇಳುವಷ್ಟು ಸ್ಪಷ್ಟವಾಗಿ ತಿಳಿದಿದ್ದಿತು. ಈ ದಿಸೆಯಲ್ಲಿ ಆಚಾರ್ಯ ನಾಥಮುನಿಗಳೇ ಹೆಚ್ಚಿನ ದುಡಿಮೆ ಮಾಡಿ ಈ ಜ್ಞಾನಭಂಡಾರವನ್ನು ಹೊರಕ್ಕೆ ತೆಗೆದರು. ಪೆರಿಯವಾಚ್ಚಾನ್ ಪಿಳ್ಳೈ ಎನ್ನುವವರು ಎಲ್ಲಾ ಪ್ರಬಂಧಗಳಿಗೂ ವ್ಯಾಖ್ಯಾನವನ್ನು ಅಪೂರ್ವ ರೀತಿಯಲ್ಲಿ ಬರೆದು ವ್ಯಾಖ್ಯಾನ ಚಕ್ರವರ್ತಿಗಳೆಂಬ ಕೀರ್ತಿಗೆ ಭಾಜನರಾದರು. ಆದರೆ ಪ್ರಬಂಧಗಳಿಗೆ ವ್ಯಾಖ್ಯಾನ ಬರೆಯುವ ಆವಶ್ಯಕತೆ ರಾಮಾನುಜರ ಕಾಲಕ್ಕೆ ಇನ್ನೂ ತೋರಿಬಂದಿರಲಿಲ್ಲ. ಇದನ್ನು ರಾಮಾನುಜರೇ ಮೊದಲಿಗೇ ಆರಂಭಿಸಿದರು. ಶಿಷ್ಯರಿಗೆಲ್ಲಾ ಉಪದೇಶ (ಕಾಲಕ್ಷೇಪ)ವನ್ನು ರಾಮಾನುಜರು ಪ್ರಬಂಧಗಳ ಉದಾಹರಣೆಗಳಿಂದಲೇ ವಿವರಿಸುತ್ತಿದ್ದ ಉಲ್ಲೇಖ ಕೂಡ "ಗುರುಪರಂಪರಾಪ್ರಭಾವಂ" ಎನ್ನುವ ಪ್ರಮಾಣ ಗ್ರಂಥದಲ್ಲಿ ದೊರೆಯುತ್ತದೆ. ಇವರ ಕಾಲಕ್ಷೇಪಗಳೂ ಸಹ ಶಿಷ್ಯರನ್ನು ಮಂತ್ರ-

ಮುಗ್ಧರನ್ನಾಗಿ ಮಾಡಿಬಿಡುತ್ತಿದ್ದ ಸಂದರ್ಭಗಳೂ ವಿವರಿತಗೊಂಡಿದೆ. 'ಗುರುಪರಂಪರಾ ಪ್ರಭಾವಂ' ಅನ್ನು ಪ್ರಮಾಣ ಗ್ರಂಥವೆಂದು ಗೌರವಿಸುವವರು ಈ ಮೇಲ್ಕಾಣಿಸಿದ ವಿವರಗಳನ್ನು ಮನಗಾಣಬಹುದಾಗಿದೆ.

ಶ್ರೀ ರಾಮಚಂದ್ರರಾಯರ ವಾದದಂತೆಯೇ ಶ್ರೀ ಕೆ. ಕೆ. ಎ. ವೆಂಕಟಾಚಾರಿ ಎನ್ನುವ ವಿದ್ವಾಂಸರ "Sri Vaishnava Manipravala" ಎನ್ನುವ ಪುಸ್ತಕದಲ್ಲೂ ವಾದ ಪ್ರತಿವಾದಗಳು ಕಂಡುಬರುತ್ತವೆ. ಅವು ಈ ರೀತಿ ಸ್ವಾರಸ್ಯವಾಗಿವೆ.

"While Yamuna does not mention that Dravida Veda directly in his Stotraratna (stanza 5) he does pay homage to the feet of Vakulabharana Nammalwar) whom he called the first Acharya (Adyasyanah Kulapateh Vakulabhiramam Sreemathadhangriyugalam Pranamami Murdhanah). Many of his ideas are parallel to those of Alwars. He includes, for instance, a direct translation from Kulashekhara Alwar in stanza 62 of his Stotraratna (Rushanirastopi Shishustanam-dayoh). Several different sourcs, such as, "Guruparampara Prabhavam" the 24,000 (Iravithnalayirappadi) by Periyavachambillai and Idu of 36,000 (Muppathu-arayirappadi) of Vadakku Thiruveedhi Pillai report that Yamuna taught the "Thiruvoimozhi" to his disciples and one of his disciples Tirumalai Andan instructed Ramanuja in the "Thiruvoimozhi". This tradition tells us that the third wish pronounced by Yamuna at the time of his death was that Hymns of Nammalwar be made popular. Ramanuja, it is said taught Thiruvoimozhi to his disciples and asked Pillan (whose father also was said to be proficient in 4000 (Nalayiram) to write commentary on the Thiruvoimozhi to fulfil Yamuna's wish. There is one thaniyan attributed to Ramanuja which describes Thirumangai Alwar's "Thiru-Velukuthirukkai" as containing the import of Vedas. "I bow down to those feet which are our refuge of the one who has given the entire meaning of Vedas in the form of Thiruvelukuthirukkai which is composed in good tamil (Sendamil) for the uplift of the world, which is great one (*i.e.*, Text) and which is non-satiating ambrosa......"

Tradition also says that Ramanuja as part of his temple reforms included the chanting of the tamil hymns in the temple liturgy itself (see Koilolugu pp. 46–50). Some scholars have suggested that Yamuna's and Ramanuja's relative silence as ubhayavedantha is indicative of their pre-sanskritic brahminical bias and their unwillingness to acknowledge the hymns of Alwars or the use of tamil as a language for scripture But we can see from the above references that such a conclusion is questionable, for Yamuna has paid explicit homage to Nammalwar and has demonstrated his knowledge of hymns of Alwars in his translation of half a verse from Kulasekhara Alwar. Furthermore that there are so many works which acknowledge Yamuna's and Ramanuja's interpretation of the Thiruvoimozhi suggest the interpretations originally were oral tradition handed down and recorded a few generation later. From the accounts we can conclude that the early Acharyas who acknowledged Ubhayavedantha knew the hymns of Alwars themselves and orally transmitted their interpretations *e.g.* Yamuna to Thirumalai Andan to Ramanuja to Pillan who finally wrote a commentary."

ಅಂತೂ ಗುರುಪರಂಪರಾ ಪ್ರಭಾವ ಮುಂತಾದ ಆಧಾರ ಗ್ರಂಥಗಳಿಂದ ತಿಳಿದುಬರುವ ಅಂಶಗಳೆಂದರೆ ಈ ಕೆಳಕಂಡವು. ಇವುಗಳು ಪ್ರಮಾಣವೆಂದು ಅಂಗೀಕರಿಸಿದಲ್ಲಿ ಹಲವಾರು ಹೊಸ ವಿಚಾರಗಳು ಬೆಳಕಿಗೆ ಬರುತ್ತವೆ.

ಶ್ರೀಮನ್ನಾಥಮುನಿಗಳ ಕಾಲಕ್ಕೆ ಪ್ರಬಂಧಗಳೆಲ್ಲಾ ಹೇಳ ಹೆಸರಿಲ್ಲದೆ ಲುಪ್ತಗೊಂಡಿದ್ದವು. ಈ ಆಚಾರ್ಯರು ಕ್ರಿ.ಶ. ೯೧೮ಕ್ಕೆ ಹಿಂದೆ ಇದ್ದವರು ಎಂದು ತಿಳಿದುಬರುತ್ತದೆ. ಶ್ರೀಮನ್ನಾಥಮುನಿಗಳು ಯಾರೋ ಶ್ರೀವೈಷ್ಣವರು ಹೇಳಿದ ಕೇವಲ ಹತ್ತೇ ಹತ್ತು ಪಾಶುರಗಳಿಂದ ಪ್ರಭಾವಿತರಾಗಿ ಆ ಶ್ಲೋಕಗಳು ಸಾವಿರ ಸಂಖ್ಯೆಯ ಪ್ರಬಂಧವೊಂದರ ಭಾಗವೆಂಬುದಾಗಿ ಅರಿತು, ಅಂತಹ ಅಭೂತ ಪೂರ್ವವಾದ ಪಾಶುರಗಳು ಇನ್ನೂ ಹಲವು ಇರುವುದರ ಸುಳಿವನ್ನು ಕಂಡುಕೊಂಡು, ಅದನ್ನೇ ಪಟ್ಟಾಗಿ ಸಾಧಿಸಿ, ಸಂಶೋಧನೆ, ಅಧ್ಯಯನಗಳನ್ನು ನಡೆಸಿ, ಕಾಲಗರ್ಭದಲ್ಲಿ ಅಡಗಿಹೋಗಿದ್ದ 'ತಿರುವಾಯ್ಮೊಳಿ' ಎನ್ನುವ ದಿವ್ಯರತ್ನವನ್ನು ಪ್ರಜ್ವಲಿಸುವಂತೆ ಮಾಡಿದರು. ಇದಲ್ಲದೆ ಇವರ ಸತತ ಪ್ರಯತ್ನದ ಫಲವಾಗಿ ಮತ್ತೂ

ಹನ್ನೊಂದು ಆಳ್ವಾರುಗಳೂ, ಅವರ ಕೃತಿಗಳೂ ಶ್ರೀವೈಷ್ಣವ ಪ್ರಪಂಚಕ್ಕೆ ಲಭ್ಯವಾದುವು. ಆಳ್ವಾರುಗಳ ಸಂಖ್ಯೆ ಹನ್ನೆರಡೇ, ಅವರ ಪ್ರಬಂಧಗಳ ಸಂಖ್ಯೆ ನಾಲ್ಕು ಸಾವಿರವೇ ಎನ್ನುವುದನ್ನು ಈ ನಾಥಮುನಿಗಳ ಕಾಲಕ್ಕೇ ನಿರ್ಧಾರಗೊಳಿಸಿರುವುದು. ಅವರ ಮುಂದಿನವರಾದ ಯಾಮುನರೋ, ರಾಮಾನುಜರೋ ಹೊಸ ಆಳ್ವಾರುಗಳನ್ನಾಗಲೀ, ಪ್ರಬಂಧಗಳನ್ನಾಗಲೀ ಈ ಪಟ್ಟಿಗೆ ಸೇರಿಸದೇ ಇರುವುದರಿಂದಲೇ ಸಿದ್ಧಗೊಳ್ಳುತ್ತದೆ. ಹಾಗೇನಾದರೂ ಬೇರೆ ಆಳ್ವಾರುಗಳನ್ನೋ, ಪ್ರಬಂಧಗಳನ್ನೋ ನಾಥಮುನಿಗಳ ನಂತರದವರು ಕಂಡುಹಿಡಿದಿದ್ದರೆ ಹಾಗೆ ವಿವರಗಳು ಪ್ರಮಾಣ ಗ್ರಂಥಗಳಲ್ಲಿ ವಿಶದೀಕರಿಸಲ್ಪಡುತ್ತಿದ್ದುವು. ಈ ತರಹ ಯಾವುವೂ ನಡೆಯದೇ ಇರುವುದೇ ಆಳ್ವಾರಗಳೂ, ಅವರ ಪ್ರಬಂಧಗಳೂ ನಾಥಮುನಿಗಳ ಕಾಲಕ್ಕೇ "ಇದಮಿತ್ಥಂ" ಎಂದು ನಿರ್ಧಾರಿತಗೊಂಡಿರುವುದಕ್ಕೆ ನಿದರ್ಶನವಾಗಿವೆ.

ಯಾಮುನರ ವಿಚಾರವನ್ನು ಈ ಮೇಲೆಯೇ ಶ್ರೀ ಕೆ. ಕೆ. ಎ. ವೆಂಕಟಾಚಾರಿಯವರು ವಿವರಿಸಿದ್ದಾರೆ. ಇನ್ನು ಅವರು ಬಿಟ್ಟಿರಬಹುದಾದ ಒಂದಂಶವನ್ನು ಇಲ್ಲಿ ಪ್ರಸ್ತಾಪಿಸಿದೆನೆಂದರೆ ಅದು ತಪ್ಪಾಗಲಾರದು. ಯಾಮುನಾಚಾರ್ಯರ ಸ್ತೋತ್ರರತ್ನದಲ್ಲಿ ಕುಲಶೇಖರ ಆಳ್ವಾರ್ ಅವರ ಪಾಶುರದ ಛಾಯೆಯಂತೆಯೇ ತೋರುವ ಅರ್ಧ ಶ್ಲೋಕವನ್ನು ವೆಂಕಟಾಚಾರಿಯವರು ತಿಳಿಸಿದರು. ಇದೇ ರೀತಿ ಇನ್ನೊಂದು ಶ್ಲೋಕವು ಮೊದಲಾಳ್ವಾರ್‌ಗಳಲ್ಲೊಬ್ಬರಾದ ಪೊಯ್ಗೈಯ್ ಆಳ್ವಾರ್ ಅವರ ಪಾಶುರದ ಅನುವಾದದಂತೆ ಕಂಡುಬರುತ್ತದೆ. ಅದೇ "ನಿವಾಸಶಯ್ಯಾಸನ ಪಾದುಕಾಂಶುಕೋ" ಎನ್ನುವ ಸ್ತೋತ್ರರತ್ನದ ಶ್ಲೋಕ. ಇದರಿಂದ ಯಾಮುನಾಚಾರ್ಯರಿಗೆ ಕುಲಶೇಖರ, ನಮ್ಮಾಳ್ವಾರ್, ಪೊಯ್ಗೈಯ್ ಆಳ್ವಾರ್ ಇವರುಗಳ ಸಾಹಿತ್ಯ ಪರಿಚಯವಿದ್ದಂತಾಯಿತು. ಇವರ ಸ್ತೋತ್ರರತ್ನದಲ್ಲಿ ಮತ್ತಾವ ಶ್ಲೋಕಗಳು, ಮತ್ತಾವ ಆಳ್ವಾರ್ ಪಾಶುರಗಳ ಛಾಯೆಯಂತೆ ತೋರುತ್ತವೆ ಎನ್ನುವುದು ಅಧ್ಯಯನ ಯೋಗ್ಯವಾದ ವಿಚಾರ.

ಶ್ರೀ ಪರಾಶರ ಭಟ್ಟರ್ ಎಂಬುವವರು ರಾಮಾನುಜರನ್ನು ಕುರಿತು ತಿರುವಾಯ್ಮೊಳಿಯ ತನಿಯನ್ (ಪ್ರಶಂಸಾ ಪದ್ಯ) ಒಂದರಲ್ಲಿ ಇಂತೆನ್ನುತ್ತಾರೆ.

ಆನ್‌ಱತಮಿೞ್ ಮಱೈಗಳಾಯಿರಮುಂ-ಈನ್‌ಱ
ಮುದಟ್ಟಾಯ್ ಶಡಗೋಪನ್ – ಮೊಯಿಂಬಾಲ್‌ವಳರ್ತ್ತ
ಇದತ್ತಾಯಿ ಇರಾಮಾನುಶನ್.

ಶಠಗೋಪರೆಂದೆನಿಸಲ್ಪಡುವ ನಮ್ಮಾಳ್ವಾರ್ ತಿರುವಾಯ್ಮೊಳಿ ಪ್ರಬಂಧಕ್ಕೆ ಜನ್ಮ ನೀಡಿದ ತಾಯಿಯಂತಾದರೆ ರಾಮಾನುಜರು ಅದನ್ನು ಬೆಳೆಸಿ ಪ್ರವರ್ಧಮಾನ

ಷನ್ನಾಗಿ ಮಾಡಿದರು ಎಂದರೆ ರಾಮಾನುಜರಿಗೆ ನಮ್ಮಾಳ್ವಾರ್ ಮತ್ತು ಅವರ ಪ್ರಬಂಧದ ಬಗ್ಗೆ ಎಷ್ಟೊಂದು ವಾತ್ಸಲ್ಯ, ಗೌರವ, ಪ್ರೀತಿ ಇದ್ದಿತೆಂಬುದರ ಅರಿವಾಗುತ್ತದೆ. ಯಾಮುನಾಚಾರ್ಯರ ಇಚ್ಛೆಯನ್ನು ಪೂರ್ತಿ ಮಾಡಲು ಈ ತಿರುವಾಯ್ಮೊಳಿ ಪ್ರಬಂಧವನ್ನು ಪೂರ್ತಿ ಕಲಿತು, ಅರ್ಥಮಾಡಿಕೊಂಡು ಅದನ್ನು ಜನಪ್ರಿಯ ಮಾಡಲು ಶ್ರಮಿಸಿ, ಪ್ರಚಾರ ಮಾಡಿರುವ ಅವರ ದೀರ್ಘ ತಪಸ್ಸಿನ ಪರಿಚಯವಾಗುತ್ತದೆ.

ಇದರ ಹಿನ್ನೆಲೆಯಲ್ಲಿನ ವಿಚಾರ ತಿಳಿದುಕೊಂಡರೆ ನಮ್ಮ ವಾದಕ್ಕೆ ಹೆಚ್ಚು ಪುಷ್ಟಿ ದೊರಕಿದಂತಾಗುತ್ತದೆ. ಶ್ರೀ ಯಾಮುನರು ತಾವರಿತಿದ್ದ ಅಪಾರ ಜ್ಞಾನ ಸಂಪತ್ತನ್ನು ತಮ್ಮ ಉತ್ತರಾಧಿಕಾರಿಗೆ ಸಂಪೂರ್ಣವಾಗಿ ತಿಳಿಸಿಕೊಡಲು ಐದು ಜನ ಶಿಷ್ಯಂದಿರನ್ನು ತಯಾರು ಮಾಡಿದ್ದರೆಂದು ತಿಳಿದುಬರುತ್ತದೆ. ಈ ಅಪಾರವಾದ ಜ್ಞಾನ ಭಂಡಾರವು ನಷ್ಟವಾಗಕೂಡದೆಂದು ಅವರು ಒಬ್ಬೊಬ್ಬರನ್ನೂ ಒಂದೊಂದು ಶಾಖೆಯಲ್ಲಿ ಪ್ರವೀಣರನ್ನಾಗಿ ಮಾಡಿ ತಾವೇ ಆಯ್ಕೆ ಮಾಡಿದ ಅತ್ಯಂತ ಬುದ್ಧಿ ಶಾಲಿಯೆಂದು ಅವರಿಂದ ಪರಿಗಣಿಸಲ್ಪಟ್ಟ ರಾಮಾನುಜರಿಗೆ ಆ ಐದು ಜನ ಶಿಷ್ಯರ ಮೂಲಕ ಅವರರಿತಿದ್ದ ಸಕಲ ವಿಷಯಗಳನ್ನೂ ಉಪದೇಶ ಮಾಡಿಸಿದ ರೆಂಬುದಾಗಿ ಇತಿಹಾಸ! ಇದರಿಂದಲೇ ರಾಮಾನುಜರಿಗೆ "ಪಂಚಾಚಾರ್ಯ ಸಮಾಶ್ರಿತಃ" ಎಂಬುದಾಗಿ ಹೆಸರು ಬಂದದ್ದು.

ಯಾಮುನರ ಶಿಷ್ಯರಾಗಿದ್ದ ಮಹಾಪೂರ್ಣರೆನ್ನುವರು ಪ್ರಬಂಧಗಳನ್ನು ರಾಮಾನುಜರಿಗೆ ಉಪದೇಶಿಸಿದರಂತೆ. ಇದಕ್ಕಾಗಿ ರಾಮಾನುಜರು ಇದ್ದ ಎಡೆಗೇ ಬಂದು ಅವರ ಮನೆಯಲ್ಲಿಯೇ ಬಿಡಾರ ಹೂಡಿ ಅವರು ಈ ಎಲ್ಲಾ ಪ್ರಬಂಧ ಗಳನ್ನೂ, ಅವುಗಳ ಸ್ವಾರಸ್ಯಾಂಶಗಳನ್ನೂ ಅರೆದು ಕುಡಿಸಿದರು ಎಂದು ರಾಮಾನುಜರ ಇತಿಹಾಸ ಸಾರುತ್ತದೆ. ರಾಮಾನುಜರಿಗೆ ಈ ಆಚಾರ್ಯರ ಮೇಲೆ ಎಷ್ಟೊಂದು ವಿಶ್ವಾಸ ಏರ್ಪಟ್ಟಿತ್ತೆಂದರೆ ರಾಮಾನುಜರ ಹೆಂಡತಿಯು ಈ ಆಚಾರ್ಯ ದಂಪತಿಗಳು ಸಂಪ್ರದಾಯದಲ್ಲಿ ತಮಗಿಂತ ಕೀಳೆಂದು ಕಂಡುಕೊಂಡು ಒಮ್ಮೆ ಅಪಮಾನಪಡಿಸಲು, ಅವರುಗಳು ಅಪಮಾನ ಪಟ್ಟುಕೊಂಡು ಹೊರಟುಹೋದರಂತೆ. ಇದರಿಂದ ರಾಮಾನುಜರು ಹೆಂಡತಿಯ ಮೇಲೆ ಕೋಪಿಸಿಕೊಂಡು, ಇತರ ಕಾರಣಗಳೂ ಸಿಕ್ಕಿದ್ದರಿಂದ ಸನ್ಯಾಸಾಶ್ರಮ ಸ್ವೀಕರಿಸಿದರಂತೆ! ಅಂದರೆ ಅವರಿಗೆ ಪ್ರಬಂಧ ಹೇಳಿದ ಆಚಾರ್ಯರ ಮೇಲೂ, ಅಂತಹ ಬೆಲೆಯುಳ್ಳ ಪ್ರಬಂಧಗಳ ಮೇಲೂ, ಅವುಗಳನ್ನು ರಚಿಸಿದ ಆಳ್ವಾರುಗಳ ಮೇಲೂ ಎಷ್ಟೊಂದು ಅಭಿಮಾನವಿದ್ದಿತು, ಅವರ ಅಧ್ಯಯನ ಎಷ್ಟು ಗಾಢವಾಗಿ ನಡೆದಿತ್ತು ಎನ್ನುವ ವಿಚಾರವೆಲ್ಲಾ ತಿಳಿಯುತ್ತದೆ.

ರಾಮಾನುಜರ ಶಿಷ್ಯರು ಪಿಳ್ಳಾನ್ ಎನ್ನುವವರು. ಈ ಪಿಳ್ಳಾನ್‌ರವರ ತಂದೆ ನಾಲ್ಕು ಸಾವಿರ ದಿವ್ಯ ಪ್ರಬಂಧದ ಪ್ರಾವಿಣ್ಯತೆ ಪಡೆದಿದ್ದರು ಎಂದು ಕೆ. ಕೆ. ಎ. ವೆಂಕಟಾಚಾರಿಯವರು ಹೇಳುತ್ತಾರೆ. ರಾಮಾನುಜರ ಸಮವಯಸ್ಕರೋ ಅಥವಾ ಅವರಿಗಿಂತ ಹಿರಿಯರೋ ಆಗಿದ್ದ ಇವರಿಗೇ (ಪಿಳ್ಳಾನ್ ಅವರ ತಂದೆ ಯವರಿಗೆ) ಆಳ್ವಾರ್ ಪ್ರಬಂಧಗಳು ಕರಗತವಾಗಿದ್ದಾಗ, ಅವರ ಸುಪರಿಚಿತರೂ, ಆತ್ಮೀಯರೂ ಎನಿಸಿದ ರಾಮಾನುಜರಿಗೆ ಆಳ್ವಾರ್ ಪ್ರಬಂಧಗಳ ವಿಚಾರ ತಿಳಿದಿರಬಹುದಾದ ಸಾಧ್ಯತೆ ಇರುತ್ತದೆಯಲ್ಲವೆ ?

ರಾಮಾನುಜರು ತಿರುವಾಯ್ಮೊಳಿಯ ರಹಸ್ಯಾರ್ಥಗಳನ್ನು ತಿಳಿದಿದ್ದರು. ಅವುಗಳನ್ನು ಶಿಷ್ಯರಿಗೆ ಸ್ವಾರಸ್ಯವಾಗಿ ಕಾಲಕ್ಷೇಪ (ಬೋಧನೆ – ವಿವರಣೆ) ಮಾಡುತ್ತಿದ್ದರು ಎಂದು ಮೇಲೆಯೇ ತಿಳಿಸಿದ್ದೇನೆ. ಒಂದು ಸಲ ತಿರುವಾಯ್ಮೊಳಿಯ "ಎಂದ ತಂದೈ ತಂದೈ" ಎನ್ನುವ ಪಾಶುರದ ಅರ್ಥ ವಿವರಣೆ ಮಾಡುತ್ತಿರಬೇಕಾದರೆ ಅವರು ಭಾವಪರವಶರಾಗಿ ಅವರ ಕಣ್ಣುಗಳಿಂದ ಧಾರಾಕಾರವಾಗಿ ಕಣ್ಣೀರು ಸುರಿಯಲಾರಂಭಿಸಿತಂತೆ ! ಅದರಲ್ಲಿ ವೇಂಗಡ ದೊಡೆಯನು ಪುಷ್ಪಗಳಿಂದ ಅಲಂಕೃತವಾಗಿ ಸುರನರರುಗಳಿಂದ ಸೇವೆಗೊಳ್ಳುತ್ತಿರುವ ದಿವ್ಯದರ್ಶನದ ವರ್ಣನೆ ಇದೆ. ಆದರೆ ಇಂದೋ ವೇಂಗಡದಲ್ಲಿ ದೇವರಿಗೆ ಪುಷ್ಪ ಕೈಂಕರ್ಯ ' ಮಾಡಲು, ಒಬ್ಬರೂ ಇಲ್ಲದೆ, ಆ ದೇವರಿಗೆ ಪುಷ್ಪಾಲಂಕಾರವೇ ಇಲ್ಲವೆನ್ನುವ ಯೋಚನೆ ಅವರನ್ನು ಬಾಧಿಸಲು ಅವರು ಕಣ್ಣೀರು ಸುರಿಸುತ್ತಿದ್ದಾರೆ. ಸ್ವಲ್ಪ ಯೋಚಿಸಿದ ಅವರು ಅನಂತಾರ್ಯರೆನ್ನುವ ತಮ್ಮ ಅತ್ಯಾಪ್ತ ಶಿಷ್ಯರನ್ನು ಆ ಕೆಲಸಕ್ಕೆ ನಿಯೋಜಿಸಿ ತಿರುಮಲೆಗೆ ಕಳುಹಿಸಿಕೊಟ್ಟರಂತೆ ! ಈ ಸೊಗಸಾದ ಸಂದರ್ಭ ರಾಮಾನುಜರ ಚರಿತ್ರೆಯಲ್ಲಿ ವಿವರಣೆಗೊಂಡಿದೆ. ರಾಮಾನುಜರಿಗೆ ತಿರುವಾಯ್ಮೊಳಿಯಲ್ಲಿ ಅಸಾಧಾರಣ ಪ್ರಾವಿಣ್ಯತೆಯಿದ್ದಿತು. ಅದೇ ಮುಂದೆ ಪಿಳ್ಳಾನ್ ಅವರಿಗೆ ವ್ಯಾಖ್ಯಾನವನ್ನು ಬರೆಯಲು ವಸ್ತುವಾಯಿತು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ !

ರಾಮಾನುಜರು ಸನ್ಯಾಸಿಗಳು. ಅವರು ಭಿಕ್ಷೆಯನ್ನು ಪರಿಗ್ರಹಿಸಿ ದೈನಂದಿನ ವ್ಯಾಪಾರ ನಡೆಸುತ್ತಿದ್ದರು. ಹೀಗೆ ಇವರು ಭಿಕ್ಷೆಗಾಗಿ ಹೋಗುವಾಗ ಅವರಿಗೆ ಅತಿ ಪ್ರಿಯವೆನಿಸಿದ್ದ 'ಆಂಡಾಳ್' ವಿರಚಿತ 'ತಿರುಪ್ಪಾವೈ' ಅನ್ನು ಅನುಸಂಧಾನ ಮಾಡಿಕೊಂಡು ಹೋಗುತ್ತಿದ್ದ ಪದ್ಧತಿ ಇದ್ದಿತು. ಆದ್ದರಿಂದಲೇ ಜನರು ಇವರನ್ನು 'ತಿರುಪ್ಪಾವೈ ಜೀಯರ್' ಎಂದು ಅಭಿಮಾನದಿಂದ ಆದರಿಸುತ್ತಿದ್ದರು ಎಂದಾಗ ಆಂಡಾಳ್ ತಿರುಪ್ಪಾವೈ ಅವರಿಗೂ ತಿಳಿದಿದ್ದಿತು, ಜನರಿಗೂ ಪರಿಚಯ ಗೊಂಡಿದ್ದಿತು. ತಿರುಪ್ಪಾವೈ ತಿಳಿದಿದ್ದ ಇವರಿಗೆ ಆಂಡಾಳ್ ವಿಚಾರವೂ ತಿಳಿದಿದ್ದಿತು ಎಂಬುವುದು ನಿರ್ವಿವಾದ ಸಂಗತಿಯೇ !

ಆಂಡಾಳ್ ರಚನೆ ಇನ್ನೊಂದಾದ "ನಾಚ್ಚಿಯಾರ್ ತಿರುಮೊಳಿ"ಯಲ್ಲಿ, ಅವಳು "ನೂರು ತಡಾ ಅಕ್ಕಾರ ವಡಿಶಲ್" (ಒಂದು ಪ್ರಮಾಣದ ಕ್ಷೀರಾನ್ನ) ಅನ್ನು ತಿರುಮಾಲಿರುಂಶೋಲೈ ಕ್ಷೇತ್ರದ ಸುಂದರಬಾಹು ಸ್ವಾಮಿಗೆ ಅರ್ಪಿಸುವುದಾಗಿ ಹಂಬಲು ತೋಡಿಕೊಂಡಿದ್ದಾಳೆ. ಆದರೆ ಅವಳಿಗೆ ಇದು ಸಾಧ್ಯವಾಗಲಿಲ್ಲ ಎಂಬುದನ್ನು ಅರಿತ ರಾಮಾನುಜರು ಅವಳ ಅಭೀಷ್ಟವನ್ನು ಪೂರೈಸಲು ತಾವೇ "ನೂರು ತಡಾ ಅಕ್ಕಾರ ವಡಿಶಲ್" ಅನ್ನು ಅವಳ ಪರವಾಗಿ ಸುಂದರ ಬಾಹು ಸ್ವಾಮಿಗೆ ನಿವೇದಿಸಿದರೆಂಬುದಾಗಿ ರಾಮಾನುಜರ ಚರಿತ್ರೆಯಲ್ಲಿ ವರ್ಣಿತವಾಗಿದೆ. ಆಂಡಾಳ್‌ನ ಕಾಲವೇ ಬೇರೆ, ರಾಮಾನುಜರ ಕಾಲವೇ ಬೇರೆ. ಸಹೋದರಿಯ ಮನೋಭೀಷ್ಟವನ್ನು ನೆರವೇರಿಸಿದ ಸೋದರನಂತಾದ ರಾಮಾನುಜರನ್ನು 'ಗೋದಾಗ್ರಜ'ರೆಂಬುದಾಗಿ ಜನ ಆದರಿಸಿದರು ! ರಾಮಾನುಜರ ಅಷ್ಟೋತ್ತರ ನಾಮಾವಳಿಯಲ್ಲಿ 'ಗೋದಾಗ್ರಜ'ರೆಂದು ಬರುವ ನಾಮಕ್ಕೆ ಈ ಅರ್ಥವನ್ನು ಎಲ್ಲರೂ ವಿವರಿಸುತ್ತಾರೆ. ಇದರಿಂದ ರಾಮಾನುಜರಿಗೆ ಆಂಡಾಳ್ ಮತ್ತು ಅವಳ ಪ್ರಬಂಧಗಳ ಅರಿವು ಅವಳ ಬಗ್ಗೆ ಗೌರವ ಇದ್ದಿತೆನ್ನಲು ಇದಕ್ಕಿಂತ ಹೆಚ್ಚಿನ ಪ್ರಮಾಣ ಬೇಕೆ ?

ಆಂಡಾಳ್ ಸಾಕುತಂದೆ ಪೆರಿಯಾಳ್ವಾರ್. ಆಂಡಾಳ್ ಚರಿತ್ರೆಯನ್ನು ಆಮೂಲಾಗ್ರವಾಗಿ ಅರಿತಿದ್ದ ರಾಮಾನುಜರಿಗೆ ಪೆರಿಯಾಳ್ವಾರ್ ವಿಚಾರವೂ, ಅವರ ಪ್ರಬಂಧಗಳ ಬಗ್ಗೆ ತಿಳುವಳಿಕೆಯೂ ಇರಲೇಬೇಕಲ್ಲವೇ ?

ಆಚಾರ್ಯರು ಆಳ್ವಾರುಗಳ ದಿವ್ಯ ಪ್ರಬಂಧಗಳನ್ನು ಅನುಸಂಧಾನ ಮಾಡುವ ಕ್ರಮವನ್ನು ಶ್ರೀರಂಗದಲ್ಲಿಯೂ, ತಿರುಪತಿಯಲ್ಲಿಯೂ ಅನುಷ್ಠಾನಕ್ಕೆ ತಂದರೆಂದು ಆಚಾರ್ಯರ ಚರಿತ್ರೆಯಿಂದ ತಿಳಿಯುತ್ತದೆ. ಇದನ್ನು ಕೆ. ಕೆ. ಎ. ವೆಂಕಟಾಚಾರಿ ಯವರು ತಮ್ಮ ಪುಸ್ತಕದಲ್ಲಿ ವಿವರಿಸಿರುವುದನ್ನು ಈ ಮೇಲೆ ತಿಳಿಸಿದ್ದೇನೆ. ಇನ್ನೂ ಹೇಳಬೇಕೆಂದರೆ ದೇವಸ್ಥಾನಗಳಲ್ಲಿ ಆಳ್ವಾರ್ ಪಾಶುರಗಳನ್ನು ಅನುಸಂಧಾನ ಮಾಡುವ ಕ್ರಮವನ್ನು ತಿರುಮಂಗೈ ಆಳ್ವಾರ್ ಶ್ರೀರಂಗದಲ್ಲಿ ಮೊದಲಿಗೆ ಜಾರಿಗೆ ತಂದರಂತೆ ! ನಂತರ ಈ ಕ್ರಮ ನಿಂತುಹೋಗಿರಲು ಆಚಾರ್ಯ ನಾಥಮುನಿಗಳು 'ದೇವಗಾನ' ಎನ್ನುವ ಸಂಗೀತ ವಿಶೇಷದ ಮೂಲಕ ಈ ಪಾಶುರಗಳನ್ನು ಹಾಡಿಸುವ ಏರ್ಪಾಡನ್ನು ಜಾರಿಗೆ ತಂದು ಅದು ಸರಿಯಾಗಿ ಬೆಳೆದು ಬರದೇ ಇರಲು ದೇವಸ್ಥಾನಗಳಲ್ಲಿ ಸೇವಾ ಕಾಲ ಪದ್ಧತಿಯ ಮೂಲಕ ಅನುಸಂಧಾನ ಕ್ರಮವನ್ನು ನೇರ್ಪುಗೊಳಿಸಿದರೆಂದು ಇತಿಹಾಸ ಸಾರುತ್ತದೆ. ಇದನ್ನು ರಾಮಾನುಜರು ಶ್ರೀವೈಷ್ಣವ ಪ್ರಮುಖ ದೇವಸ್ಥಾನಗಳಲ್ಲಿ ರೂಢಿಗೆ ತಂದರೆಂಬುದಾಗಿ ಪ್ರತೀತಿ.

ಆಚಾರ್ಯ ರಾಮಾನುಜರು ತಮಿಳಿನಲ್ಲಿ ಮೊಟ್ಟಮೊದಲಿಗೆ ವೈಷ್ಣವ ಸ್ತುತಿರೂಪವಾದ ಸಾಹಿತ್ಯ ರಚನೆ ಮಾಡಿದ ಮೊದಲಾಳ್ವಾರ್‌ಗಳ ಪಾಶುರಗಳ

ಸೊಬಗಿಗೆ ಮನಸೋತು ಮೂಗಿನ ಮೇಲೆ ಬೆರಳಿಟ್ಟುಕೊಂಡರಂತೆ ! ತಮಿಳಿನಲ್ಲೂ ಇಷ್ಟು ಸೊಗಸಾದ ಪಾಶುರಗಳನ್ನು ರಚಿಸಲು ಸಾಧ್ಯವೇ ಎಂದು ಆಶ್ಚರ್ಯಗೊಂಡ ಅವರು ಈ ಪಾಶುರಗಳನ್ನು ವೇಂಗಡದೊಡೆಯನಿಗೇ ಅಂಕಿತಗೊಳಿಸಿ ತಿರುಮಲೆಯ ಅಧ್ಯಯನೋತ್ಸವ ಕಾಲದಲ್ಲಿ ಮೊದಲಿಗೇ ಈ ಮೂರು ತಿರುವಂದಾದಿಗಳನ್ನು ಅನುಸಂಧಾನ ನಡೆಸುವ ಕ್ರಮವನ್ನು ಜಾರಿಗೆ ತಂದರೆಂಬುದಾಗಿ 'ತಿರುಮಲೆಯ ಕೋಯಿಲೊಳುಗು' ಎನ್ನುವ ದಾಖಲೆ ಪುಸ್ತಕ ತಿಳಿಸುತ್ತದೆ. ತಿರುವೇಂಗಡ ದೊಡೆಯನನ್ನು "ಶೆಂದಮಿಳ್ ಪಾಡುವಾರ್ ತಾಂ ವಣಂಗುಂ ದೈವಂ" ಎಂದು ಭಾವಪರವಶರಾಗಿ ಆಚಾರ್ಯರು ಮಂಗಳಾಶಾಸನ ಮಾಡಿದರೆಂದು ತಿಳಿಯುತ್ತದೆ. ಈ ರೀತಿ ರಾಮಾನುಜರಿಗೆ ಮೊದಲಾಳ್ವಾರ್ ಮೂವರ ವಿಚಾರ ತಿಳಿದಿತ್ತೆಂಬ ಅಂಶ ಈ ವಿವರದಿಂದ ಅರಿಕೆಯಾಗುತ್ತದೆ.

ರಾಮಾನುಜಾಚಾರ್ಯರ ಶಿಷ್ಯರಾಗಿದ್ದ ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್ ಎನ್ನುವವರು ರಾಮಾನುಜರ ಕಾಲಕ್ಷೇಪದಿಂದ ಪ್ರಭಾವಿತರಾಗಿಯೋ ಇಲ್ಲ ರಾಮಾನುಜರ ಅನುಜ್ಞೆಯಂತೆಯೋ ಏನೋ ತಿರುವಾಯ್ಮೊಳಿಗೆ ವ್ಯಾಖ್ಯಾನ ಬರೆದು 'ಆರಾಯಿರಪ್ಪಡಿ' ಎಂದು ಅದನ್ನು ಕರೆದು ಆಚಾರ್ಯರಿಗೆ ಅರ್ಪಿಸಿ ಕೃತಾರ್ಥರಾದರಂತೆ! ಹೀಗೆಂದು ಶ್ರೀ ರಾಮಚಂದ್ರರಾಯರೇ ಒಪ್ಪಿ ಹೇಳಿದ್ದಾರೆ ! ಇದಕ್ಕೆ 'ಭಗವದ್ವಿಷಯ'ವೆಂಬ ಹೆಸರನ್ನೂ ರಾಮನುಜರೇ ದಯಪಾಲಿಸಿದರೆಂದು ಅವರು ಹೇಳಿದ್ದಾರೆ. ಇದರ ಬಗ್ಗೆ ನಿಜಾಂಶವೇನೋ ತಿಳಿಯದು ಎನ್ನುತ್ತಾರೆ. ರಾಮಾನುಜರ ಕಾಲ ಕ್ರಿ.ಶ. ೧೦೧೭–೧೧೩೭. ಇವರು ೧೨೦ ವರ್ಷ ಬದುಕಿದ್ದರು. ಪಿಳ್ಳಾನ್ ಹುಟ್ಟಿದ್ದು ೧೦೬೨ ಎಂದರೆ ರಾಮಾನುಜರ ಅವತಾರ ಸಮಾಪ್ತವಾದಾಗ ಪಿಳ್ಳಾನ್‌ಗೆ ೭೭ ವರುಷಗಳು. ಎಂದರೆ ಪಿಳ್ಳಾನ್ ಅವರಿಗೂ ಅಪಾರ ವಯಸ್ಸಾಗಿತ್ತು. ಪಿಳ್ಳಾನ್ ರಾಮಾನುಜರಷ್ಟು ದೀರ್ಘಾಯುಷಿಗಳೋ ಇಲ್ಲವೋ ತಿಳಿಯುವುದಿಲ್ಲ. ಅಂತೂ 'ಆರಾಯಿರಪ್ಪಡಿ' ವ್ಯಾಖ್ಯಾನವು ಅವರ ಚಿಕ್ಕ ವಯಸ್ಸಿನಲ್ಲೇ ರಚಿಸಲ್ಪಟ್ಟಿರಬಹುದಾದ ಸಾಧ್ಯತೆ ಇದೆ. ಈ ರೀತಿಯಾಗಿ ರಾಮಾನುಜರಿಗೆ ಪಿಳ್ಳಾನ್ ಬರೆದ ವ್ಯಾಖ್ಯಾನದ ಅರಿವು ಇದ್ದಿತೆನ್ನುವುದು ಸ್ಪಷ್ಟವಾಗುತ್ತದೆ.

ಈ ಪಿಳ್ಳಾನ್ ಮೊಟ್ಟ ಮೊದಲಿಗೆ ತಮ್ಮ ವ್ಯಾಖ್ಯಾನದಲ್ಲಿ 'ಆಳ್ವಾರ್' ಎನ್ನುವ ಪದವನ್ನು ಬಳಕೆಗೆ ತಂದಿದ್ದಾರೆಂಬುದಾಗಿಯೂ ಈ 'ಆಳ್ವಾರ್' ಎನ್ನುವ ಪದಪರಿಚಯ ನಾಥಮುನಿಗಳಿಗಾಗಲೀ, ಯಾಮುನರಿಗಾಗಲೀ ಅಥವಾ ರಾಮಾನುಜರಿಗಾಗಲೀ ಇರಲಿಲ್ಲವೆಂಬುದಾಗಿಯೂ ಆಳ್ವಾರ್‌ಗಳನ್ನು ಆ ಹೆಸರಿನಿಂದ ಕರೆಯ ತೊಡಗಿದ್ದೂ ಪಿಳ್ಳಾನ್ ಕಾಲದ ನಂತರವೆಂದೂ ಅಭಿಪ್ರಾಯಪಡುತ್ತಾರೆ ಶ್ರೀ ಎಸ್. ಕೆ. ರಾಮಚಂದ್ರರಾಯರು ! ಇದಕ್ಕಾಗಿ ಅವರು ಪಿಳ್ಳಾನ್‌ರವರ ವಾಕ್ಯ

ಪ್ರಮಾಣವೊಂದನ್ನು ನಿರ್ದೇಶಿಸುತ್ತಾರೆ. "ನಿಖಿಲ ಜಗದುದಯವಿಭವಾದಿಲೀಲನಾಯಿರುನ್ದ ಪರಮ ಪುರುಷನ್ನೈ ಉಳ್ಳಪಡಿಯೇ ಆಳ್ವಾರ್ ತಾವ್ ತಮ್ಮುಡೈಯ ತಿರುವುಳ್ಳತ್ತಿಲೇ ಅನುಭವಿತ್ತು" ಎನ್ನುವುದು ಆ ವಾಕ್ಯ. ಆಳ್ವಾರ್ ಎಂದರೆ ದೇವರನ್ನು ಮನಸ್ಸಿನಲ್ಲಿ ಅಡಗಿಸಿಟ್ಟುಕೊಂಡು ಅದರಲ್ಲಿ ತಾವೇ ಆಳವಾಗಿ ಮುಳುಗಿ ಸಾಕ್ಷಾತ್ಕರಿಸಿಕೊಂಡ ಸುಖವನ್ನು ನಿರೂಪಿಸುತ್ತಾರೆ. ಇದರಿಂದ ಆಳ್ವಾರ್ ಎಂದರೆ ಭಕ್ತಿಯಲ್ಲಿ ಮುಳುಗಿದವರು ಎನ್ನುವ ಅರ್ಥ ನಮಗೆ ದೊರೆಯುತ್ತದೆ. ಶ್ರೀ ರಾಮಚಂದ್ರರಾಯರು ತಮ್ಮ ವಾದವನ್ನು ಮುಂದುವರೆಸುತ್ತಾರೆ, "ಇದೇ ಆಳ್ವಾರ್ ಎಂಬ ಮಾತಿನ ಮೊದಲ ಬಳಕೆ ಎಂದೂ ಕಾಣುತ್ತದೆ. ಇದು ನಮ್ಮಾಳ್ವಾರ್ ಎಂಬುವರನ್ನು ಕುರಿತ ಪ್ರಯೋಗ. ಕಾಲಾನಂತರದಲ್ಲಿ ಇತರರಿಗೆ ಕೂಡಾ ಇದು ಸಂದಿತು. ಈಗ ಆಳ್ವಾರ್ ಎಂದು ಹೆಸರಾಗಿರುವವರೂ ತಮ್ಮನ್ನು ಆಳ್ವಾರ್ ಎಂದು ಕರೆದುಕೊಂಡಿಲ್ಲ. ಅವರವೆಂದು ಸಿದ್ಧವಾಗಿರುವ ಬರಹಗಳಲ್ಲೂ ಆಳ್ವಾರ್ ಎಂಬ ಮಾತು ಬರುವುದಿಲ್ಲ" ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್ ಅವರು ರಾಮಾನುಜರ ಕಾಲದವರಾದ್ದರಿಂದ ರಾಮಾನುಜರಿಗೆ ಈ 'ಆಳ್ವಾರ್' ಪ್ರಯೋಗ ಹೊಸದೆಂಬುದಾಗಿ ತೋರುವುದಿಲ್ಲ. ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್ ಅವರಿಗೂ ರಾಮಾನುಜರೇ ಈ ಆಳ್ವಾರ್ ಎಂಬ ಪದವನ್ನು ಹೇಳಿರಬಹುದಾದ ಸಂಭವವೂ ಇರುತ್ತದೆ. 'ಆಳ್ವಾರ್' ಎಂದರೆ ನಮ್ಮಾಳ್ವಾರ್ ಅವರಿಗೇ ಆ ಪದ ಅನ್ವಯಿಸಿದರೂ ಅದು ಆಗಲೇ ಬೇರೆ ಆಳ್ವಾರ್ ಗಳ ನಾಮಸೂಚಕವಾಗಿ ಬಳಸಲ್ಪಡುತ್ತಿದ್ದಿತೆನ್ನಲು ಈ ಕೆಳಗಿನ ಉದಾಹರಣೆಗಳು ಪೂರಕವಾಗುತ್ತದೆ. ಹಿಂದೆಯೇ ತಮಿಳು ಸಂಸ್ಕೃತಿಯಲ್ಲಿ ಸಂತ ಭಕ್ತರನ್ನು ಆಳ್ವಾರ್ ವಿಶೇಷಣದಿಂದ ಸಂಬೋಧಿಸಲಾಗುತ್ತಿತ್ತು. ಆಳ್ವಾನ್ ಎನ್ನುವುದು ಏಕವಚನ. ಆಳ್ವಾರ್ ಎನ್ನುವುದು ಬಹುವಚನ. ಅತಿ ಪ್ರೀತಿಯಾಗಿ ಸಂಬೋಧಿಸುವ ಪದ 'ಆಳ್ವಾನ್'. ರಾಮಾಯಣದಲ್ಲಿ ಬರುವ ಭಕ್ತರನ್ನು ಬಹಳ ಹಿಂದಿನಿಂದಲೇ, 'ಭರತಾಳ್ವಾನ್' 'ಶತ್ರುಘ್ನಾಳ್ವಾನ್' 'ವಿಭೀಷಣಾಳ್ವಾನ್' ಎಂದು ಗೌರವಿಸುವ ರೂಢಿ ಇದೆ. ನಿತ್ಯಸೂರಿಗಳಾದ ಗರುಡ, ಆದಿಶೇಷರನ್ನು ಗರುಡಾಳ್ವಾನ್, ಅನಂದಾಳ್ವಾನ್ (ಅನಂತ) ಎಂದು ಸಂಬೋಧಿಸುತ್ತಿದ್ದರು. ತಮಿಳು ರಾಮಾಯಣ ಭಾರತಗಳನ್ನು ಬರೆದ ಕಂಬರ್ ಮತ್ತು ವಿಲ್ಲಿಪುತ್ತೂರಾನ್ ಇವರನ್ನು ಕಂಬನಾಟ್ಟಾಳ್ವಾನ್, ವಿಲ್ಲಿಪುತ್ತೂರಾಳ್ವಾನ್ ಎಂದೇ ಕರೆಯುತ್ತಿದ್ದರು. ಈ ಕವಿಗಳ ಕಾಲ ರಾಮಾನುಜರ ಕಾಲಕ್ಕಿಂತಲೂ ಹಿಂದಿನದು ಎನ್ನುವುದನ್ನು ಗಮನಿಸಬೇಕಾದದ್ದೆ. ಕಂಬರಾಮಾಯಣವನ್ನು ಆಚಾರ್ಯ ನಾಥಮುನಿಗಳು ಉದ್ಘಾಟನೆ ನಡೆಸಿದರೆಂದು ತಮಿಳು ಕವಿಚರಿತ್ರೆಯಿಂದ ತಿಳಿಯುತ್ತದೆ. "ಕಂಬನಾಟ್ಟಾಳ್ವಾನ್" ನಾಥಮುನಿಗಳಿಗೇ ಪರಿಚಿತವೆಂದಾಯಿತು. ಅವರೇ ಈ ತಮಿಳು ಸಂತಭಕ್ತರನ್ನು ಆಳ್ವಾರ್ ಎಂದು ಕರೆದಿರಬಹುದಾದ ಸಂಭವ ಈ

ಉದಾಹರಣೆಯಿಂದ ತಿಳಿಯುತ್ತದೆ. ರಾಮಾನುಜರ ಶಿಷ್ಯರು ಕೂರತ್ತಾಳ್ವಾರ್ ಮತ್ತು ಅನಂದಾಳ್ವಾರ್. ರಾಮಾನುಜರು 'ಆಳ್ವಾನ್' ಎಂದೇ ಕೂರತ್ತಾಳ್ವಾರ್ ಅವರನ್ನು ವಾತ್ಸಲ್ಯದಿಂದ ಕರೆಯುತ್ತಿದ್ದರಂತೆ. 'ಆಳ್ವಾರ್' ಎಂದರೆ ನಮ್ಮಾಳ್ವಾರ್ ಅವರಿಗೇ ಮೀಸಲಾದಂತೆ 'ಆಳ್ವಾನ್' ಎಂಬ ಪದ ಕೂರತ್ತಾಳ್ವಾರ್ ಅವರಿಗೆ ರಾಮಾನುಜರಿಂದ ಅನ್ವಯಗೊಂಡಂತೆ ಇತಿಹಾಸದಿಂದ ತಿಳಿಯುತ್ತದೆ. ಆಚಾರ್ಯ ರಾಮಾನುಜರ ಮತ್ತೊಂದು ನಾಮಧೇಯ 'ಇಳೆಯಾಳ್ವಾರ್' ಎಂಬುದಾಗಿ. 'ಇಳೆಯಾಳ್ವಾರ್' ಎಂದರೆ ಲಕ್ಷ್ಮಣನಿಗೆ ರಾಮಾಯಣದಲ್ಲಿ ಸಂಬೋಧನೆ. ರಾಮಾನುಜ ಎಂದರೆ ಲಕ್ಷ್ಮಣನೆಂದು ತಾನೇ ಅರ್ಥ. ಇದರಿಂದ ರಾಮಾನುಜರನ್ನು ಆಗಲೇ ಇಳೆಯಾಳ್ವರ್ ಎಂಬ ಹೆಸರಿನಿಂದ ಕರೆಯುತ್ತಿದ್ದರು.

ಹೀಗೆ 'ಆಳ್ವಾರ್' ತಮಿಳು ಸಂಸ್ಕೃತಿಯಲ್ಲಿ ಪ್ರಾಚೀನವಾಗಿಯೇ ಬಳಕೆಯಲ್ಲಿದ್ದ ಪದ. ಪಿಳ್ಳಾನ್ ಕಾಲಕ್ಕೆ ಹೊಸದಾಗಿ ಬಂದ ಪದವಲ್ಲ. ಪಿಳ್ಳಾನ್ ವ್ಯಾಖ್ಯಾನವನ್ನು ಮೊದಲಿಗೆ ಲಿಪಿಯಲ್ಲಿ ಆರಂಭಿಸಿದ್ದರಿಂದ ಈ ಆಳ್ವಾರ್ ಎನ್ನುವ ಪದ ಮೊದಲಿಗೇ ಅದರಲ್ಲಿ ಕಂಡುಬಂದಿದೆ ಅಷ್ಟೇ. ಆದ್ದರಿಂದ ತಮಿಳುನಾಡಿನ ಸಂತರನ್ನು ಬಹಳ ಹಿಂದಿನಿಂದಲೇ ಆಳ್ವಾರ್ ಎಂದು ಆದರಿಸುತ್ತಿದ್ದರು ಎಂಬುವುದು ನಿರೂಪಿತಗೊಳ್ಳುತ್ತದೆ.

"ತಿರುವೆಳುಕೂತ್ತಿರುಕ್ಕೈ" ಎನ್ನುವ ತಿರುಮಂಗೈ ಆಳ್ವಾರ್ ಅವರ ಪ್ರಬಂಧಕ್ಕೆ ಬರೆದಿರುವ ತನಿಯನ್ ರಾಮಾನುಜರದ್ದೆಂದು ಶ್ರೀ ಕೆ. ಕೆ. ಎ. ವೆಂಕಟಾಚಾರಿ ಅವರು ತಿಳಿಸಿದ್ದಾರೆ. ಆದ್ದರಿಂದ ಆಳ್ವಾರ್ ಪರಂಪರೆಯಲ್ಲಿ ಕಡೆಯವರಾದ ತಿರುಮಂಗೈ ಆಳ್ವಾರ್ ವಿಚಾರವೂ ರಾಮಾನುಜರಿಗೆ ತಿಳಿದಿರುವುದು ಸ್ಪಷ್ಟವಾಗುತ್ತದೆ. ಈ ಕಡೆಯ ಆಳ್ವಾರ್ ವಿಚಾರವೇ ರಾಮಾನುಜರಿಗೆ ತಿಳಿದಿರುವಾಗ ಮಿಕ್ಕ ಆಳ್ವಾರ್‌ಗಳ ವಿಚಾರ ತಿಳಿದಿಲ್ಲವೆಂದರೆ ಅಷ್ಟು ಸಮಂಜಸವೆನಿಸದು ಎಂದು ನನ್ನ ಅನಿಸಿಕೆ. ಇದನ್ನು ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಊಹನೆಗೆ ನಿಲುಕುವ ವಿಷಯವಾಗುತ್ತದೆ.

ಈ ಎಲ್ಲವನ್ನೂ ಮೀರಿಸುವಂತಹ ಹಿರಿಯ ಪ್ರಮಾಣ ಮತ್ತೊಂದು ನಮಗೆ ದೊರೆಯುತ್ತದೆ. 'ರಾಮಾನುಜನೂತ್ತಂದಾದಿ' ಎನ್ನುವ ಸ್ತೋತ್ರರತ್ನ ತಮಿಳು ಪ್ರಬಂಧ ಸಾಹಿತ್ಯದಲ್ಲಿ ಅತಿ ಪವಿತ್ರವಾದದ್ದೆಂದು ಪರಿಗಣಿತವಾಗಿದೆ. ಇದನ್ನು ಬರೆದವರು ತಿರುವರಂಗತ್ತಮುದನಾರ್ ಎನ್ನುವವರು. ಇದರಲ್ಲಿ ನೂರೆಂಟು ಪಾಶುರಗಳು ಇದ್ದು ಪ್ರತಿ ಪಾಶುರಗಳಲ್ಲೂ ಆಚಾರ್ಯರ ಹೆಸರು ನಮೂದಿತವಾಗಿದ್ದು ಇದನ್ನು ಪಾರಾಯಣ ಮಾಡುವವರು ನೂರೆಂಟು ಸಲ ಆಚಾರ್ಯರ ಹೆಸರನ್ನು ಸ್ಮರಿಸಿದಂತಾಗಿ ನೂರೆಂಟು ಗಾಯಿತ್ರಿ ಜಪ ಮಾಡಿದಷ್ಟು ಪವಿತ್ರವಾದ್ದರಿಂದ ಈ ಪ್ರಬಂಧವನ್ನು 'ಪ್ರಪನ್ನ ಗಾಯಿತ್ರಿ' ಎಂದೂ ಆದರಿಸುತ್ತಾರೆ.

ಶ್ರೀ ಅಮುದನಾರ್ ರಾಮಾನುಜರ ಸಮಕಾಲೀನರು, ಶಿಷ್ಯರು. ಇವರ ಈ ಪ್ರಬಂಧದ ೮ನೇ ಪಾಶುರದಿಂದ ಹಿಡಿದು ೨೦ನೇ ಪಾಶುರದವರೆಗೂ ಹನ್ನೆರಡು ಆಳ್ವಾರುಗಳೂ, ಅವರ ಪ್ರಬಂಧಗಳೂ, ಅವು ರಾಮಾನುಜರಿಗೆ ಪರಿಚಿತವಾಗಿದ್ದ ವೃತ್ತವೂ, ಅವುಗಳನ್ನು ಅರಿತಿದ್ದ ರಾಮಾನುಜರ ಅಡಿದಾವರೆಗಳನ್ನು ಆಶ್ರಯಿಸಿದರೆ ಆಳ್ವಾರ್‌ಗಳ ಅನುಗ್ರಹವೂ ಸಿದ್ಧಿಸುವುದೆಂಬ ಭಾವವನ್ನು ಹೊರಗೆಡಹಿದ್ದಾರೆ.

ಈ ಪ್ರಬಂಧದಿಂದ ಆಚಾರ್ಯ ರಾಮಾನುಜರಿಗೆ ಆಳ್ವಾರುಗಳ ಮತ್ತು ಅವರ ಪ್ರಬಂಧಗಳ ಪರಿಪೂರ್ಣ ಜ್ಞಾನ, ಪರಿಚಯುಗಳ ವಿವರಣೆ ದೊರಕುತ್ತದೆ. 'ಆಳ್ವಾರುಗಳ ನುಡಿಮುತ್ತುಗಳು' ಎನ್ನುವ ಶ್ರೀ ಎಸ್. ಕೆ. ರಾಮಚಂದ್ರ ರಾಯರ ಪುಸ್ತಕದ ಪ್ರಕಾರ 'ರಾಮಾನುಜರ ತರುವಾಯ ತಿರುವರಂಗತ್ತ ಮುದನಾರ್ ಎಂಬುವವರು ರಚಿಸಿದ್ದು ರಾಮಾನುಜನೂತ್ತಂದಾದಿ.' ಆದರೆ ಇದನ್ನು ಅಮುದನಾರ್ ಅವರು ರಚಿಸಿ ರಾಮಾನುಜರಿಗೆ ಸಮರ್ಪಿಸಿದರೆಂದು ಸಂಪ್ರದಾಯ ಗ್ರಂಥಗಳಲ್ಲಿ ಉಕ್ತವಾಗಿದೆ. ಹಾಗೆ ಒಂದು ವೇಳೆ ರಾಮಾನುಜರ ನಂತರ ರಚಿಸಿದ್ದರೂ ಕೂಡ ರಾಮಾನುಜರಿಗೆ ಆಳ್ವಾರುಗಳ ಮತ್ತು ಅವರುಗಳ ಪ್ರಬಂಧಗಳ ಬಗೆಗೆ ಇದ್ದ ಜ್ಞಾನ ಸಂಪತ್ತನ್ನು ಈ ಪ್ರಬಂಧ ತಿಳಿಸುತ್ತದೆ.

ರಾಮಾನುಜರು ತಮ್ಮ ೭೪ ಪೀಠಾಧಿಪತಿಗಳ ಪೈಕಿ ನಾಲ್ವರಿಗೆ ಶ್ರೀಭಾಷ್ಯವನ್ನು ವೈದಿಕ ಸಂಪ್ರದಾಯದ ನೆಲೆಯಲ್ಲಿ ಬೋಧಿಸತಕ್ಕದ್ದೆಂದೂ ಉಳಿದವರಿಗೆ ಆಳ್ವಾರ್ ಪ್ರಬಂಧಗಳನ್ನೂ ಅಭ್ಯಾಸ ಮಾಡಿ ಅದರಿಂದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಾಡಿನಲ್ಲೆಲ್ಲಾ ಹರಡಬೇಕೆಂದು ಕಟ್ಟುಮಾಡಿದರು ಎಂಬುದಾಗಿ ಶ್ರೀ ರಾಯರು ವಿವರಿಸುತ್ತಾರೆ. ರಾಮಾನುಜರು ತಮಗೇ ತಿಳಿಯದ ಆಳ್ವಾರುಗಳ ಮತ್ತು ಆಳ್ವಾರ್ ಪ್ರಬಂಧಗಳ ವಿಚಾರಗಳನ್ನು ೭೦ ಪೀಠಾಧಿಪತಿಗಳಿಗೆ ಪ್ರಚಾರ ಮಾಡಲು ಯಾವ ರೀತಿ ನಿಯೋಜಿಸಿದರು. ಆಳ್ವಾರುಗಳ ಪ್ರಬಂಧಗಳ ವಿಷಯವನ್ನೇ ಅರಿಯದ ರಾಮಾನುಜರು ಅವುಗಳಲ್ಲಿ ಮತ ತತ್ವಗಳು ಅಡಗಿಕೊಂಡಿವೆ ಎಂಬುವುದನ್ನು ಹೇಗೆ ಅರಿತುಕೊಂಡು ಮಠಾಧೀಶರಿಗೆ ಮತ ಪ್ರಚಾರಕ್ಕೆ ಆಳ್ವಾರ್ ಪ್ರಬಂಧಗಳು ಪೂರಕ ವಾಗಿದೆ ಎಂದು ಶಿಫಾರಸ್ಸು ಮಾಡಿದರು, ರಾಮಚಂದ್ರರಾಯರೇ ಹೇಳಬೇಕು.

ಈ ಸಂದರ್ಭದಲ್ಲಿ ತನಿಯನ್ ಬಗ್ಗೆ ಕೆಲವು ಮಾತುಗಳನ್ನು ಆಡಿದರೆ ಅಪ್ರಸಕ್ತವಾಗಲಾರದು. ಈ ತನಿಯನ್‌ಗಳು ಪ್ರಶಂಸಾ ಪದ್ಯಗಳು, ಬಿಡಿ ಮುಕ್ತಕ ಗಳು. ಒಂದು ಪ್ರಬಂಧವನ್ನು ಕುರಿತ ಪ್ರಶಂಸಾ ಪದ್ಯ ಅಥವಾ ತನಿಯನ್‌ನಲ್ಲಿ ಅದರ ಕರ್ತೃವಾದ ಆಯಾ ಆಳ್ವಾರ್ ಮತ್ತು ಆ ಪ್ರಸಕ್ತ ಪ್ರಬಂಧದ ಲಘು ಪರಿಚಯ ಮಹತ್ವ ಇವುಗಳ ವಿಚಾರವಿರುತ್ತದೆ. ಈ ಪದ್ಯಗಳನ್ನು ರಚಿಸಿದವರು ಆಚಾರ್ಯರುಗಳು. ಕೆಲವರು ರಾಮಾನುಜರ ಹಿಂದಿನವರು; ಕೆಲವರು ರಾಮಾನುಜರ ಸಮಕಾಲೀನರು; ಇನ್ನು ಕೆಲವರು ರಾಮಾನುಜರಿಗಿಂತ ಈಚಿನವರು. ಈ ಕೆಳಕಂಡ ಪಟ್ಟಿಯಿಂದ ತನಿಯನ್ ಬಗ್ಗೆ ಕೆಲವಂಶವನ್ನು ತಿಳಿಯೋಣ.

| | ತನಿಯನ್‌ನ * ಪ್ರಾರಂಭ ವಾಕ್ಯ | ಯಾವ ಪ್ರಬಂಧವನ್ನು ಕುರಿತದ್ದು | ಪ್ರಬಂಧದ ಕರ್ತೃ | ತನಿಯನ್ ರಚಿಸಿದ ಆಚಾರ್ಯರು | ತನಿಯನ್ ಭಾಷೆ |
|---|---|---|---|---|---|
| ೧. | 'ಗುರುಮುಖಿ......' | ತಿರುಪ್ಪಲ್ಲಾಂಡ್ | ಪೆರಿಯಾಳ್ವಾರ್ | ನಾಥಮುನಿ | ಸಂಸ್ಕೃತ |
| ೨. | 'ಅವಿದಿತವಿಷಯಾಂ' | ಕಣ್ಣಿನುಣ್ ಶಿರತ್ತಾಂಬು | ಮಧುರ ಕವಿ | ನಾಥಮುನಿ | ಸಂಸ್ಕೃತ |
| ೩. | 'ಅನ್ನವಯಲ್' ಮತ್ತು 'ಶೂಡಿಕ್ಕೊಡುತ್ತ' | ತಿರುಪ್ಪಾವೈ | ಆಂಡಾಳ್ | ಪುಂಡರೀಕಾಕ್ಷ (ನಾಥಮುನಿಗಳ ಶಿಷ್ಯರು) | ತಮಿಳು |
| ೪. | 'ತರುಚ್ಚನ್ದಪ್ಪೊಟ್ಟಿಲ್' 'ಉಲಗಮಟ್ಟಿಶೈ' | ತಿರುಚ್ಚನ್ದವಿರುತ್ತಂ | ತಿರುಮಳಿಶೈ ಆಳ್ವಾರ್ | ತಿರುಕ್ಕಚ್ಚಿನಂಬಿ (ರಾಮಾನುಜರ ಗುರುಗಳು) | ತಮಿಳು |
| ೫. | 'ಆಪಾದಚೂಡ ಮನುಭೂಯ' | ಅಮಲನಾದಪಿರಾನ್ | ತಿರುಪಾಣ ಆಳ್ವಾರ್ | ಪೆರಿಯನಂಬಿ (ರಾಮಾನುಜರ ಗುರುಗಳು) | ಸಂಸ್ಕೃತ |
| .. | 'ಕಾಟ್ಟವೇ ಕಂಡಪಾದಂ' | ,, | ,, | ತಿರುಮಲೆನಂಬಿ (ರಾಮಾನುಜರ ಸೋದರಮಾವ) | ತಮಿಳು |
| ೬. | 'ಕಲಯಾಮಿ ಕಲಿಧ್ವಂಸಂ' | ಪೆರಿಯ ತಿರುಮೊಳಿ | ತಿರುಮಂಗೈ ಆಳ್ವಾರ್ | ತಿರುಕೋಟ್ಟಿಯೂರ್ ನಂಬಿ (ರಾಮಾನುಜರ ಗುರು) | ಸಂಸ್ಕೃತ |
| | 'ವಾಟ್ಟಿ ಪರಕಾಲನ್' | ,, | ,, | ನಾಥಮುನಿ | ತಮಿಳು |
| | 'ಎಂಗಳ್ ಗತಿಯೇ' | ,, | ,, | ಎಂಬಾರ್ (ರಾಮಾನುಜರ ಶಿಷ್ಯರು) | ,, |
| | 'ನೆಂಜಕ್ಕಿರುಳ್ ಕಡಿದೀಪಂ' | ,, | ,, | ಕೂರತ್ತಾಳ್ವಾನ್ (ರಾಮಾನುಜರ ಶಿಷ್ಯರು) | ,, |

| | ತನಿಯನ್‌ನ * ಪ್ರಾರಂಭ ವಾಕ್ಯ | ಯಾವ ಪ್ರಬಂಧವನ್ನು ಕುರಿತದ್ದು | ಪ್ರಬಂಧದ ಕರ್ತೃ | ತನಿಯನ್ ರಚಿಸಿದ ಆಚಾರ್ಯರು | ತನಿಯನ್ ಭಾಷೆ |
|---|---|---|---|---|---|
| ೭. | 'ತಿರುವಟ್ಟುದಿನಾಡೆನ್‌ಱುಂ' | ತಿರುವಾಯ್ಮೊಟ್ಟಿ | ನಮ್ಮಾಳ್ವಾರ್ | ಈಶ್ವರಮುನಿ (ನಾಥಮುನಿಗಳ ಕುಮಾರರು) | ತಮಿಳು |
| | 'ಎಯ್‌ನ್ದ ಪೆರುಂಕೀರ್ತಿ' | ,, | ,, | ಅನಂದಾಳ್ವಾನ್ | ,, |
| ೮. | 'ಮುಂದುಟ್ರನೆಂಜೇ' | ಪೆರಿಯ ತಿರುವನ್ದಾದಿ | ,, | ರಾಮಾನುಜರು | ,, |
| ೯. | 'ಕೈ ತೈ ಶೇರ್' | ಮೊದಲ್ ತಿರುವಂದಾದಿ | ಪೊಯ್ಗೈಯ್ ಆಳ್ವಾರ್ | ಮೊದಲಿಯಾಂಡಾನ್ (ರಾಮಾನುಜರ ಶಿಷ್ಯರು) | ,, |
| ೧೦. | 'ಮತ್ತೊನ್‌ಱುಂವೇಂಡಾಂ' | ತಿರುಮಾಲೈ | ತೊಂಡರಡಿಪ್ಪೊಡಿ ಆಳ್ವಾರ್ | ತಿರುವರಂಗಪ್ಪೆರುಂ ಮಾಳ್ ಅರೆಯರ್ (ರಾಮಾನುಜರ ಗುರು) | ,, ,, |
| | 'ಮಂಡಂಗುಡಿಯೆನ್ಬರ್' | ತಿರುಪ್ಪಳ್ಳಿಯೆಳುಚ್ಚಿ | ,, | ,, | ,, |

* ತನಿಯನ್‌ಗಳನ್ನು ನೋಡಬೇಕೆಂದಿರುವವರು ಪರಿಶಿಷ್ಟದಲ್ಲಿ ವಿವರವನ್ನು ಕಂಡುಕೊಳ್ಳಬಹುದು.

ಇವುಗಳಲ್ಲದೆ ತಿರುವಾಯ್ಮೊಳಿಗೆ ನಾಥಮುನಿಗಳು ಬರೆದಿರುವ 'ಭಕ್ತಾಮೃತಂ ವಿಶ್ವಜನಾನುಮೋದನಂ' ಅನ್ನೂ ರಾಮಾನುಜರ ತಿರುವೆಳುಕ್ಕೂತ್ತಿರುಕ್ಕೈಗೆ ಬರೆದಿರುವ 'ಶೀರಾರ್ ತಿರುವೆಳುಕ್ಕೂತ್ತಿರುಕ್ಕೈ'ಯನ್ನೂ ಗಮನಿಸಿದಾಗ ರಾಮಾನುಜರ ಹಿಂದಿನ ಕಾಲಕ್ಕೇ ಈ ಪ್ರಬಂಧಗಳೆಲ್ಲ ಶ್ರೀವೈಷ್ಣವ ಲೋಕಕ್ಕೆ ಸುಪರಿಚಿತವಾಗಿದ್ದುವು. ಅವರು ಕೇವಲ ತಿರುವಾಯ್ಮೊಳಿಯೊಂದನ್ನು ಮಾತ್ರ ಗುರುತಿಸಿರಲಿಲ್ಲ. ಈ ಪ್ರಬಂಧಗಳು ಬೆಳಕಿಗೆ ಬರಲು ಇವರುಗಳು ವಿಪರೀತ ಕಷ್ಟಪಟ್ಟಿದ್ದಾರೆ ಎನ್ನುವುದು ಸ್ವಯಂವೇದ್ಯವಾಗುತ್ತದೆ. ಈ ಆಳ್ವಾರ್‌ಗಳ ಮತ್ತು ಅವರ ಪ್ರಬಂಧಗಳನ್ನು ರಕ್ಷಿಸಲು, ಬಾಳಿಸಲು ಎಷ್ಟೊಂದು ಆಸ್ಥೆ ವಹಿಸಿದ್ದರು ಎನ್ನುವುದೆಲ್ಲ ಅಂಗೈ ಮೇಲಿನ ನೆಲ್ಲಿಕಾಯಿಯಂತೆ ಸ್ಪಷ್ಟವಾಗಿ ತಿಳಿಯುವಾಗ ಶ್ರೀ ರಾಮಚಂದ್ರರಾಯರು ಮಾತ್ರ ನಾಥಮುನಿ, ಯಾಮುನಾಚಾರ್ಯ, ರಾಮಾನುಜಾಚಾರ್ಯ ಇವರೊಬ್ಬರಿಗೂ ಆಳ್ವಾರ್‌ಗಳ ಪರಿಚಯ ಇರಲೇ ಇರಲಿಲ್ಲವೆಂದೂ, ಹಾಗಿದ್ದರೂ ನಮ್ಮಾಳ್ವಾರ್ ಒಬ್ಬರೇ ಅಂತಹ ಪರಿಚಯಗೊಂಡಿದ್ದವರೆಂದೂ ಸ್ಪಷ್ಟವಾಗಿ ಹೇಳಿಕೆಯನ್ನಿತ್ತಿರುವುದು ಹೇಗೆಂಬುದು ಗೊತ್ತಾಗದ ವಿಚಾರವಾಗಿದೆ.

ಇನ್ನು ಈ ವಿಚಾರವನ್ನು ಸಾಕುಮಾಡಿ ಶ್ರೀರಾಯರ ವಿಚಾರವಾಹಿನಿಯನ್ನು ತಿದ್ದಿ ಪ್ರಸಕ್ತ ಲೇಖನದತ್ತ ದೃಷ್ಟಿ ಹರಿಸೋಣ !

೨

ಆಳ್ವಾರುಗಳು ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಎನ್ನುವ ಐದು ರೂಪಗಳಲ್ಲಿ ವ್ಯಕ್ತಗೊಂಡಿರುವ ಪರಮಾತ್ಮನನ್ನು ತಮ್ಮ ಪ್ರಬಂಧಗಳಲ್ಲಿ ಅನುಸಂಧಿಸುತ್ತಾರೆ. ವಿಭವ ರೂಪಗಳಿಂದ ವ್ಯಕ್ತಗೊಂಡ ವರಾಹ, ನರಸಿಂಹ, ವಾಮನ, ತ್ರಿವಿಕ್ರಮ, ರಾಮ, ಕೃಷ್ಣಾದಿಗಳ ದಿವ್ಯ ಲೀಲೆಗಳನ್ನು ಎಷ್ಟು ಉದಹರಿಸಿದರೂ ಅವರಿಗೆ ತೃಪ್ತಿ ಇಲ್ಲ. ನೂರಾರು ಸಲ, ಸಾವಿರಾರು ಸಲ ವರ್ಣಿಸಿ ವರ್ಣಿಸಿ ದಣಿದಿದ್ದಾರೆ. ಕಲಿಯುಗದಲ್ಲಿ ಅಂತೂ ಸುಲಭವಾಗಿ ಲಭಿಸಬಲ್ಲ ಅರ್ಚಾವತಾರಿ ಎನಿಸಲ್ಪಡುವ, ದಿವ್ಯಕ್ಷೇತ್ರಗಳಲ್ಲಿ ರಾರಾಜಿಸುತ್ತಿರುವ ವಿಷ್ಣುವಿನ ದಿವ್ಯ ಮಂಗಳ ವಿಗ್ರಹಗಳನ್ನೂ, ಅವುಗಳು ಸಾನ್ನಿಧ್ಯಗೊಂಡಿರುವ ದಿವ್ಯಕ್ಷೇತ್ರ ವೈಭವಗಳನ್ನೂ ಮನದಣಿಯೇ ಹಾಡಿದ್ದಾರೆ. ಅಂತಹ ದೇವರುಗಳನ್ನು ದರ್ಶನ ಮಾಡಿದರೇ ಸಕಲ ಪಾಪಗಳೂ ಪರಿಹಾರಗೊಳ್ಳುವುದಂತೆ ! ಅಂತಹ ಭಗವಂತನ ನೆಲೆಗಳಲ್ಲಿ ಭಕ್ತನನ್ನು ಉದ್ಧಾರ ಮಾಡಬಲ್ಲ ಸಕಲ ಮಹಿಮೆಗಳೂ ಮೈಗೂಡಿರುವುದಂತೆ ! ಈ ರೀತಿ ಹಾಡಲ್ಪಟ್ಟಿರುವ ಕ್ಷೇತ್ರಗಳ ಸಂಖ್ಯೆ ನೂರೆಂಟು. ಇವುಗಳನ್ನು ನೂರೆಂಟು ದಿವ್ಯದೇಶಗಳೆಂದೂ ನೂರೆಂಟು ತಿರುಪತಿಗಳೆಂಬುದಾಗಿಯೂ,

ಆಳ್ವಾರ್ ಪಾಡಲ್‌ಗಳೆಂಬುದಾಗಿಯೂ ಜನ ವಿಶೇಷವಾಗಿ ಆದರಿಸುತ್ತಾರೆ. ಈ ಕ್ಷೇತ್ರಗಳಲ್ಲಿ ಬಹುತೇಕ ತಮಿಳುನಾಡು ಮತ್ತು ಕೇರಳಗಳಲ್ಲಿವೆ. ಪ್ರಾಯಶಃ ಆಳ್ವಾರುಗಳೆಲ್ಲ ತಮಿಳುನಾಡಿನವರಾದ್ದರಿಂದಲೇ ತಮಗೆ ಸಮೀಪದಲ್ಲಿದ್ದ ಕ್ಷೇತ್ರಗಳೇ ಅವರಿಗೆ ಹಾಡಿಗೆ ದೊರಕಿದ ವಸ್ತುಗಳಾಗಿದ್ದಿರಬೇಕು. ಈ ನೂರೆಂಟು ದಿವ್ಯಕ್ಷೇತ್ರಗಳಲ್ಲೂ ವಿಶೇಷ ಸ್ಥಾನ ಗಳಿಸಿಕೊಂಡಿರುವುವು ಕೇವಲ ಮೂರೇ ಮೂರು ಸ್ಥಳಗಳು. ಅವು ಯಾವುವೆಂದರೆ ಶ್ರೀರಂಗ, ತಿರುಪತಿ, ಕಂಚಿ. ಶ್ರೀರಂಗವನ್ನೂ, ತಿರುಪತಿಯನ್ನೂ ಹಾಡದ ಆಳ್ವಾರುಗಳೇ ವಿರಳ. ಕಂಚಿಯನ್ನು ಅಷ್ಟಾಗಿ ಆಳ್ವಾರ್‌ಗಳು ಹಾಡಿಲ್ಲ; ಕಾರಣ ತಿಳಿಯದು. ಅದೇ ಕಂಚಿಯ ಒಂದು ಭಾಗ ವಾದ ವೇಕಾವನ್ನೂ, ಅಲ್ಲಿನ ದೈವ ಯಥೋಕ್ತಕಾರಿಯನ್ನೂ ಹೊಗಳಿದ್ದಾರೆ. ಆದರೆ ಕಂಚಿಯ ವರದರಾಜನನ್ನು – ಕಂಚಿಯ ಪ್ರಧಾನ ದೇವರು – ಹೆಚ್ಚಿಗೆ ಹಾಡಿಲ್ಲದಿರುವುದು ಆಶ್ಚರ್ಯವಾದ ವಿಷಯವೇ ಎನ್ನಬೇಕು. ಹೌದು, ತಿರುಪತಿ ಯನ್ನೂ ಹಾಡದ ಆಳ್ವಾರ್‌ಗಳೆಂದರೆ ತೊಂಡರಡಿಪ್ಪೊಡಿ ಆಳ್ವಾರ್ ಒಬ್ಬರು, ಮತ್ತೊಬ್ಬರು ಮಧುರ ಕವಿ ಆಳ್ವಾರ್. ತೊಂಡರಡಿಪ್ಪೊಡಿ ಆಳ್ವಾರ್ ಅವರ ಭಕ್ತಿ ಅಧಿದೈವ ರಂಗನಾಥನಿಗೊಬ್ಬನಿಗೇ ಸೀಮಿತಗೊಂಡಿದ್ದು. ಅವನನ್ನು ಬಿಟ್ಟು ಬೇರೆ ಯಾವ ದೈವವನ್ನು ನೆನಸಿಯೂ ಇಲ್ಲ; ಸಂಕೀರ್ತಿಸಿಯೂ ಇಲ್ಲ. ಇನ್ನು ಮಧುರ ಕವಿ ಆಳ್ವಾರ್ ಅವರ ಭಕ್ತಿ ಮತ್ತೊಂದು ತೆರ. ಅವರು ಕ್ಷೇತ್ರ ಗಳನ್ನಿರಲಿ, ಯಾವ ದೇವರನ್ನೇ ಸ್ತುತಿಸಲಿಲ್ಲ. ರಚನೆಯೋ ಕೇವಲ ಹನ್ನೊಂದು ಪಾಶುರಗಳು. ಅವುಗಳಲ್ಲಿನ ವಿಷಯವೂ ಸಹ ಆಚಾರ್ಯಪ್ರಪತ್ತಿ. ಆಚಾರ್ಯ ನೆಂದೆನಿಸುವ ಗುರುವನ್ನು ಕುರಿತದ್ದೇ. ಗುರುವಿಗಿಂತ ದೇವರಿಲ್ಲ, ಗುರುವೇ ದೇವರನ್ನು ತೋರಿಸುವ ಹಾದಿ. ಗುರುವಿನ ಅನುಗ್ರಹವುಂಟಾದರೆ ದೈವವನ್ನು ಸಾಧಿಸಿದಂತೆಯೇ. ಗುರುವಿನ ಶರಣಾಗತಿಯೇ ಶ್ರೀವೈಷ್ಣವ ಮತದ ಪ್ರಧಾನ ತತ್ವ. ಈ ಅಭಿಪ್ರಾಯ ಅವರ ಕಣ್ಣಿನುಣ್ ಶಿರತ್ತಾಂಬು ಎನ್ನುವ ಪ್ರಬಂಧದಲ್ಲಿ ಪ್ರತಿಬಿಂಬಿತವಾಗಿದೆ. ತಮ್ಮ ಆಚಾರ್ಯ ಕುರುಗೂರು ಶಡಗೋಪರೆಂದೆನಿಸಿದ ನಮ್ಮಾಳ್ವಾರ್ ಅನ್ನೇ ಕೀರ್ತಿಸಿರುವುದು.

'ಬೇರೊಂದ ನಾನರಿಯೇ. ವೇದವ ತಮಿಳ್‌ಗೆಯ್ದ
ಮಾರನ, ಶಡಗೋಪನ ಪದಕಮಲವಾಶ್ರಯಿಸಿ

ಬಾಳುವುದೇ ದಾರಿ' ಎನ್ನುವ ಅರ್ಥ ಬರುವ ಅವರ ಪ್ರಬಂಧಕ್ಕೆ ಶ್ರೀವೈಷ್ಣವ ಸಿದ್ಧಾಂತದಲ್ಲಿ ಅಲೌಕಿಕವಾದ ಗೌರವ ಸಂದಿದೆ.

ಮಿಕ್ಕ ಆಳ್ವಾರ್‌ಗಳೆಂದರೆ ಪೊಯ್ಗೈಯ್, ಪೂದತ್ತಾರ್ ಮತ್ತು ಪೇಯಾಳ್ವಾರ್‌ಗಳು. ಇವರೇ ಆಳ್ವಾರ್ ಪರಂಪರೆಗೆ ಪ್ರಥಮರು. ಇವರನ್ನು ಮೊದಲಾಳ್ವಾರ್‌ಗಳೆಂದು ಒಟ್ಟಾಗಿಯೇ ಪರಿಭಾವಿಸುತ್ತಾರೆ. ಇವರು ಬೇರೆ ಬೇರೆ

ಸ್ಥಳಗಳಲ್ಲಿ ಅವತರಿಸಿದರೂ ಇವರೆಲ್ಲಾ ಒಟ್ಟಾಗಿ ಒಂದೆಡೆ ಸಂಧಿಸಿದ್ದಾಗ ಇವರಿಗೆ ಒಟ್ಟಿಗೆ ಪರಮಾತ್ಮನ ಸಾಕ್ಷಾತ್ಕಾರ ಅನುಭವವಾಗಿ ಇವರು ಆ ಸ್ಥಳದಲ್ಲೇ ತಮ್ಮ 'ತಿರುವಂದಾದಿ'ಗಳೆಂದು ಕರೆಯಲ್ಪಡುವ ತಲಾ ನೂರು ಪಾಶುರಗಳ ಪ್ರಬಂಧಗಳ ಮೂಲಕ ಭಗವಂತನನ್ನು ಸ್ತೋತ್ರ ಮಾಡಿ ಧನ್ಯರಾದರು ಎನ್ನುವ ಕಥೆ ಇದೆ. ಆದರೆ ಈ ಪ್ರಬಂಧಗಳನ್ನು ಪರಿಶೀಲಿಸಿದಾಗ ಇವುಗಳು ಬೇರೆ ಬೇರೆಯಾಗೇ ರಚನೆಗೊಂಡಿರಬಹುದಾದ ಕೃತಿಗಳಂತೆ ಕಂಡುಬರುತ್ತವೆ. ಇವರ ರಚನೆಗಳು ಮೊದಲ್ ತಿರುವಂದಾದಿ, ಇರಂಡಾಂ ತಿರುವನ್ದಾದಿ, ಮೂನ್ರಾಂ ತಿರುವಂದಾದಿ ಗಳು. ಇವನ್ನು 'ಇಯಱ್ಪಾ' ಎನ್ನುವ ಗೇಯಪ್ರಕಾರದೊಳಗೆ ಸೇರಿಸಿ ಗೌರವ ಸಲ್ಲಿಸುತ್ತಾರೆ. 'ಇನಿದಾದ ಧ್ವನಿಯ ಹಾಡುಗಬ್ಬ' ಎಂಬುದಾಗಿ ಸ್ಥೂಲವಾಗಿ ಈ 'ಇಯಱ್ಪಾ' ಎನ್ನುವ ಪದವನ್ನು ಅರ್ಥೈಸಬಹುದು. ಈ ಮೂವರ ನಂತರದವರು ತಿರುಮಳಿಶೈ ಆಳ್ವಾರ್ ಎಂಬುವರು. ಇವರ ರಚನೆ ಎರಡು – 'ನಾನ್ಮುಗನ್ ತಿರುವಂದಾದಿ' ಮತ್ತು 'ತಿರುಚ್ಚಂದವಿರುತ್ತಂ'. ನಂತರದವರು ನಮ್ಮಾಳ್ವಾರ್. ಇವರದ್ದೇ ಪ್ರಖ್ಯಾತ ತಿರುವಾಯ್ಮೊಳಿ. ಈ ಪ್ರಬಂಧವಲ್ಲದೆ ಮತ್ತೆ ಮೂರು ಪ್ರಬಂಧಗಳನ್ನು ರಚಿಸಿರುವ ಹಿರಿಮೆ ಇವರದ್ದು. ಅವು ಕ್ರಮವಾಗಿ 'ತಿರುವಿರುತ್ತಂ', 'ಪೆರಿಯತಿರುವಂದಾದಿ' ಮತ್ತು 'ತಿರುವಾಶಿರಿಯಂ'. ಈ ನಾಲ್ಕು ಕೃತಿಗಳನ್ನೂ ನಾಲ್ಕು ವೇದಗಳ ಸ್ವರೂಪವೆಂಬುದಾಗಿ ಪರಿಗಣಿಸುತ್ತಾರೆ. ನಂತರದವರೇ ಕುಲಶೇಖರ ಆಳ್ವಾರ್. ಇವರು ಕೇರಳದ ಮಹಾರಾಜರು. ಇವರ ರಚನೆ 'ಪೆರುಮಾಳ್ ತಿರುಮೊಳಿ.' ಇವರು ಇದಲ್ಲದೆ ಸಂಸ್ಕೃತ ಭಾಷೆಯಲ್ಲಿ ಸರಳವೂ, ಸುಂದರವೂ, ಸಣ್ಣದೂ ಆದ ಸ್ತೋತ್ರ ಕೃತಿ 'ಮುಕುಂದ ಮಾಲೆ'ಯನ್ನು ರಚಿಸಿದ್ದಾರೆ. ಹಿರಿಮೆಯಲ್ಲಿ ಇದು ಜಯದೇವನ 'ಗೀತಗೋವಿಂದ', ಲೀಲಾಶುಕನ 'ಕೃಷ್ಣಕರ್ಣಾಮೃತ' ಇವುಗಳಿಗೆ ಸರಿಸಾಟಿಯೆನ್ನುತ್ತಾರೆ. ಆದರೆ ಇದು ಶೃಂಗಾರಕಾವ್ಯವಲ್ಲ. ಭಕ್ತಿಯ ಔನ್ನತ್ಯದಿಂದ ಕೂಡಿದ ಉಜ್ವಲವಾದ ಕೃತಿ. ಗಂಭೀರ ಶೈಲಿಯಲ್ಲಿ ಸಾಗುತ್ತದೆ. ಆದರೆ ಈ ಮುಕುಂದ ಮಾಲೆಯನ್ನು ರಚಿಸಿದ ಕುಲಶೇಖರರೇ ಬೇರೆ ಎನ್ನುವ ವಾದವೂ ಇಲ್ಲದಿಲ್ಲ. ಇದನ್ನು ಪೆರುಮಾಳ್ ತಿರುಮೊಳಿಯನ್ನು ರಚಿಸಿದ ಕುಲಶೇಖರರೇ ರಚಿಸಿದ್ದ ಪಕ್ಷದಲ್ಲಿ ಆಳ್ವಾರುಗಳ ಪೈಕಿ ಸಂಸ್ಕೃತದಲ್ಲೂ ತಮಿಳಿನಲ್ಲೂ ಕೃತಿ ರಚನೆ ಮಾಡಿದ ಏಕೈಕ ಆಳ್ವಾರ್ ಎನ್ನುವ ಗೌರವ ಇವರಿಗೆ ಸಲ್ಲುತ್ತದೆ. ಪೆರಿಯಾಳ್ವಾರ್ ನಂತರದವರು. ಇವರ 'ತಿರುಪ್ಪಲ್ಲಾಂಡ್', 'ಪೆರಿಯಾಳ್ವಾರ್ ತಿರುಮೊಳಿ' ಸುಂದರ ರಚನೆಗಳು. ಇವರ ಸಾಕುಮಗಳೆಂದು ಆಂಡಾಳ್ ಪರಿಗಣಿಸಲ್ಪಟ್ಟಿದ್ದಾಳೆ. ಇವಳ ಪ್ರಖ್ಯಾತ 'ತಿರುಪ್ಪಾವೈ' ಅನ್ನು ಕೇಳಿ ಅರಿಯದ ಶ್ರೀವೈಷ್ಣವನಿಲ್ಲ. ಇವಳ ಮತ್ತೊಂದು ಮೇರು ಕೃತಿ 'ನಾಚ್ಚಿಯಾರ್ ತಿರುಮೊಳಿ'. ತಿರುಪ್ಪಾಣ ಆಳ್ವಾರ್ ಅಂತ್ಯಜರು. ಇವರ ರಚನೆ ಕೇವಲ ಹನ್ನೊಂದು ಪಾಶುರಗಳನ್ನೊಳಗೊಂಡ ಪ್ರಬಂಧ

'ಅಮಲನಾದಿಪಿರಾನ್''. ಕಡೆಯ ಆಳ್ವಾರ್ ಎಂದು ನಿರ್ಣೀತರಾಗಿರುವ ತಿರುಮಂಗೈ ಆಳ್ವಾರ್ ಅವರು ಆರು ಪ್ರಬಂಧಗಳನ್ನು ರಚಿಸಿದ್ದಾರೆ. ನಮ್ಮಾಳ್ವಾರ್ ಅವರ ಕೃತಿಗಳು ನಾಲ್ಕು ವೇದಗಳೆಂಬುದಾಗಿ ಪರಿಗಣಿಸಲ್ಪಡುವಂತೆ ಇವರ ಆರು ಕೃತಿಗಳು ಆರು ವೇದಾಂಗಕ್ಕೆ ಸಮನೆಂಬುದಾಗಿ ಸಂಭಾವ್ಯವಾಗಿದೆ. ಇವು ಕ್ರಮವಾಗಿ 'ಪೆರಿಯ ತಿರುಮೊಳಿ', 'ತಿರುಕ್ಕುರುಂದಾಂಡಗಮ್'', 'ತಿರುನೆಡುಂ-ದಾಂಡಗಮ್'', 'ತಿರುವೆಳುಕೂತ್ತಿರುಕ್ಕೈ', 'ಶಿರಿಯ ತಿರುಮಡಲ್'' ಮತ್ತು 'ಪೆರಿಯ ತಿರುಮಡಲ್''ಗಳು.

ಒಟ್ಟು ಹನ್ನೆರಡು ಆಳ್ವಾರ್‌ಗಳ ಪ್ರಬಂಧಗಳ ಸಂಖ್ಯೆ ೨೪. ಪಾಶುರಗಳು ೪೦೦೦. ಈ ದಿವ್ಯ ಪ್ರಬಂಧಗಳಲ್ಲಿ ಮಧುರ ಕವಿ ಆಳ್ವಾರ್ ರಚನೆ ೧೧ ಪಾಶುರ ಗಳು, ತೊಂಡರಡಿಪ್ಪೊಡಿ ಆಳ್ವಾರ್ ಅವರ ಎರಡು ಪ್ರಬಂಧಗಳ ಪಾಶುರಗಳ ಸಂಖ್ಯೆ ೫೫, ನಮ್ಮಾಳ್ವಾರ್ ಅವರ ತಿರುವಾಶಿರಿಯಂನ ಪಾಶುರಗಳು ೭, ಪೆರಿಯಾಳ್ವಾರ್ ತಿರುಪ್ಪಲ್ಲಾಂಡ್ ೧೨, ತಿರುಮಂಗೈ ಆಳ್ವಾರ್ ಅವರ ತಿರುವೆಳುಕ್ಕೂತ್ತಿರುಕ್ಕೈ ೧, ಆಂಡಾಳ್‌ನ ತಿರುಪ್ಪಾವೈ ೩೦. ಈ ಪಾಶುರಗಳ ಒಟ್ಟು ಸಂಖ್ಯೆ ೧೧೬. ಈ ಪಾಶುರಗಳಲ್ಲಿ ತಿರುವೇಂಗಡದ ಪ್ರಸ್ತಾಪ ಕಂಡು ಬರುವುದಿಲ್ಲ ಎಂದಾಗ ಮಿಕ್ಕ ಪಾಶುರಗಳಲ್ಲಿ ವೇಂಗಡದ ಪ್ರಸ್ತಾಪ ತುಂಬಿದೆ ಎನ್ನುವ ಅರ್ಥವಲ್ಲ. ಈ ಮಿಕ್ಕ ಪಾಶುರಗಳಾದ ೩೮೮೪ ನೊಳಗೊಂಡ ೧೭ ಪ್ರಬಂಧಗಳಲ್ಲಿ ಕೇವಲ ೨೦೦ ಪಾಶುರಗಳಲ್ಲಿ ಮಾತ್ರ ತಿರುವೇಂಗಡದ ಪ್ರಸ್ತಾಪ ಬರುತ್ತದೆ ಎಂಬುದಾಗಿ ತಿರುಪತಿ ದೇವಸ್ಥಾನದ ಪ್ರಕಟನೆಯಾದ 'ಆಳ್ವಾರುಲ ಮಂಗಳಾಶಾಸನ ಪಾಶುರಮುಲು' ಎನ್ನುವ ಪುಸ್ತಕ ತಿಳಿಸುತ್ತದೆ. ಆದರೆ ಇದರಲ್ಲಿ 'ತಿರುಪ್ಪಲ್ಲಾಂಡ್'', 'ತಿರುಪ್ಪಾವೈ', 'ರಾಮಾನುಜನೂತ್ತಂದಾದಿ' ಮತ್ತು 'ಅಧಿಕಾರ ಸಂಗ್ರಹಂ' ಎನ್ನುವ ಪ್ರಬಂಧಗಳಲ್ಲಿನ ಪಾಶುರಗಳೂ ಸೇರ್ಪಡೆ ಗೊಂಡಿವೆ. ಈ ಪಾಶುರಗಳ ಹಂಚಿಕೆ ಈ ಕೆಳಕಂಡಂತಿವೆ.

| | | | |
|---|---|---|---|
| ಪೊಯ್ಗೈಯ್ ಆಳ್ವಾರ್ | ಮೊದಲ್ ತಿರುವಂದಾದಿ | ೧೦ | ಪಾಶುರಗಳು |
| ಪೂದತ್ತಾಳ್ವಾರ್ | ಇರಂಡಾಂ ತಿರುವನ್ದಾದಿ | ೯ | ,, |
| ಪೇಯಾಳ್ವಾರ್ | ಮೂನ್ರಾಂ ತಿರುವನ್ದಾದಿ | ೧೯ | ,, |
| ತಿರುಮಳಿಶೈ ಆಳ್ವಾರ್ | ನಾನ್ಮುಗನ್ ತಿರುವಂದಾದಿ | ೧೨ | ,, |
| | ತಿರುಚ್ಚಂದವಿರುತ್ತಂ | ೨ | ,, |
| ನಮ್ಮಾಳ್ವಾರ್ | ತಿರುವಿರುತ್ತಂ | ೮ | ,, |
| | ಪೆರಿಯ ತಿರುವನ್ದಾದಿ | ೧ | ,, |
| | ತಿರುವಾಯ್ಮೊಳಿ | ೩೫ | ,, |
| ಕುಲಶೇಖರಾಳ್ವಾರ್ | ಪೆರುಮಾಳ್ ತಿರುಮೊಳಿ | ೧೧ | ,, |

| | | | |
|---|---|---|---|
| ಆಂಡಾಳ್ | ತಿರುಪ್ಪಾವೈ | ೧ | ಪಾಶುರ |
| | ನಾಚ್ಚಿಯಾರ್ ತಿರುಮೊಳಿ | ೧೬ | ಪಾಶುರಗಳು |
| ಪೆರಿಯಾಳ್ವಾರ್ | ತಿರುಪ್ಪಲ್ಲಾಂಡ್ | ೧ | ,, |
| | ಪೆರಿಯಾಳ್ವಾರ್ ತಿರುಮೊಳಿ | ೭ | ,, |
| ತಿರುಪ್ಪಾಣಿ ಆಳ್ವಾರ್ | ಅಮಲನಾದಿ ಪಿರಾನ್ | ೨ | ,, |
| ತಿರುಮಂಗೈ ಆಳ್ವಾರ್ | ಪೆರಿಯ ತಿರುಮೊಳಿ | ೫೫ | ,, |
| | ತಿರುಕ್ಕುರುಂದಾಂಡಗಂ | ೧ | ,, |
| | ತಿರುನೆಡುಂದಾಂಡಗಂ | ೪ | ,, |
| | ಶಿರಿಯತಿರುಮಡಲ್ | ೧ | ,, |
| | ಪೆರಿಯತಿರುಮಡಲ್ | ೨ | ,, |
| ತಿರುವರಂಗತ್ತಮುದನಾರ್ | ರಾಮಾನುಜನೂತ್ತಂದಾದಿ | ೨ | ,, |
| ವೇದಾಂತದೇಶಿಕರು | ಅಧಿಕಾರ ಸಂಗ್ರಹಂ | ೧ | ,, |
| | | ೨೦೦ | |

ಇಲ್ಲಿ ಸ್ವಲ್ಪ ಸ್ಪಷ್ಟೀಕರಣ ಬೇಕಿದೆ. ಈ ಪಟ್ಟಿಯ ತಿರುಪ್ಪಲ್ಲಾಂಡ್‌ನಲ್ಲಾಗಲೀ, ತಿರುಪ್ಪಾವೈನಲ್ಲಾಗಲೀ ವೇಂಗಡದ ಪ್ರಸ್ತಾಪವಿಲ್ಲ. ಇದನ್ನು ಆಗಲೇ ಹೇಳಿ ಆಗಿದೆ. ಆದರೆ ಅವನ್ನು ಏತಕ್ಕೆ ಸೇರಿಸಿರುವರೆಂದು ಮುಂದೆ ವಿಶ್ಲೇಷಿಸೋಣ. ಇದೇ ರೀತಿ ತಿರುವರಂಗತ್ತಮುದನಾರ್ ಮತ್ತು ವೇದಾಂತ ದೇಶಿಕರು ಆಳ್ವಾರ್ ಪಟ್ಟಿಕ್ಕೆ ಸೇರುವುದಿಲ್ಲ. ರಾಮಾನುಜನೂತ್ತಂದಾದಿಯನ್ನು ಪ್ರಬಂಧಗಳ ಜೊತೆ ಅನುಸಂಧಾನ ಮಾಡುವ ಕ್ರಮ ಇರುವುದರಿಂದ ಅದನ್ನು ಸೇರಿಸಿದ್ದಾರೆಂದು ಊಹಿಸಬೇಕಾಗಿದೆ. ಆದರೆ ವೇದಾಂತದೇಶಿಕರ ಅಧಿಕಾರ ಸಂಗ್ರಹವನ್ನು ಏತಕ್ಕಾಗಿ ಸೇರಿಸಿರುವರೆಂಬುವುದು ತಿಳಿಯುವುದಿಲ್ಲ. ಅಂತೂ ತಿರುವೇಂಗಡವನ್ನು ಹಾಡಿರುವ ಆಳ್ವಾರ್ ಪಾಶುರದ ಸಂಖ್ಯೆ ಮೇಲಿನ ಪಟ್ಟಿಯ ಪ್ರಕಾರ ೧೯೫ ಎಂದಾಗುತ್ತದೆ.

ಡಾ॥ ಎನ್. ಎಸ್. ಅನಂತರಂಗಾಚಾರ್ಯರ 'ಆಳ್ವಾರುಗಳೂ ಮತ್ತು ಶ್ರೀಮದ್ವೇಂಕಟನಾಯಕನೂ' ಎನ್ನುವ ಪುಸ್ತಕದ ಪ್ರಕಾರ ವೇಂಗಡವನ್ನು ಕುರಿತ ಪಾಶುರಗಳು ಇಂತಿವೆ.

| | | |
|---|---|---|
| ಪೊಯ್ಗೈಯ್ ಆಳ್ವಾರ್ (ಮೊ.ತಿ.) | ೧೦ | ಪಾಶುರಗಳು |
| ಪೂದತ್ತಾಳ್ವಾರ್ (ಇ.ತಿ.) | ೧೩ | |
| ಪೇಯಾಳ್ವಾರ್ (ಮೂ.ತಿ.) | [illegible] | ,, |



| | | | |
|---|---|---|---|
| ತಿರುಮಳಿಶೈ ಆಳ್ವಾರ್ | (ನಾ.ತಿ.) | ೧೨ | ಪಾಶುರಗಳು |
| | (ತಿ.ವಿ.) | ೩ | ,, |
| ನಮ್ಮಾಳ್ವಾರ್ | (ತಿ.ವಿ.) | ೮ | ,, |
| | (ತಿರುವಾಯ್ಮೊಳಿ) | ೫೪ | ,, |
| ಕುಲಶೇಖರ ಆಳ್ವಾರ್ | (ಪೆ.ತಿ.) | ೧೧ | ,, |
| ಆಂಡಾಳ್ | (ನಾ.ತಿ.) | ೧೬ | ,, |
| ಪೆರಿಯಾಳ್ವಾರ್ | (ಪೆ.ತಿ.) | ೧೭ | ,, |
| ತಿರುಪ್ಪಾಣಿ ಆಳ್ವಾರ್ | (ಅ.) | ೨ | ,, |
| ತಿರುಮಂಗೈ ಆಳ್ವಾರ್ | (ಪೆ.ತಿ.) | ೫೫ | ,, |
| | ಒಟ್ಟು | ೨೨೦ | |

ಶ್ರೀ ಎಸ್. ಕೆ. ರಾಮಚಂದ್ರರಾಯರ 'ತಿರುಪತಿ ತಿಮ್ಮಪ್ಪ' ಪುಸ್ತಕದಲ್ಲಿ ತಿರುವೇಂಗಡವನ್ನು ಕುರಿತ ಆಳ್ವಾರ್ ಪಾಶುರಗಳು ಇಂತಿವೆ.

| | |
|---|---|
| ಪೊಯ್ಗೈಯರ್ ಆಳ್ವಾರ್ | ೧೦ |
| ಪೂದತ್ತಾಳ್ವಾರ್ | ೯ |
| ಪೇಯಾಳ್ವಾರ್ | ೧೦ |
| ತಿರುಮಳಿಶೈ ಆಳ್ವಾರ್ | ೧೪ |
| ನಮ್ಮಾಳ್ವಾರ್ | ೪೪ |
| ಕುಲಶೇಖರ ಆಳ್ವಾರ್ | ೧೧ |
| ಪೆರಿಯಾಳ್ವಾರ್ | ೧ |
| ಆಂಡಾಳ್ | ೧೬ |
| ತಿರುಪಾಣಿ ಆಳ್ವಾರ್ | ೨ |
| ತಿರುಮಂಗೈ ಆಳ್ವಾರ್ | ೬೩ |
| ಒಟ್ಟು | ೧೮೦ |

ವೇಂಗಡವನ್ನು ಕುರಿತ ಪಾಶುರಗಳು ೧೯೫ ಎಂದು ಹೇಳಿದ್ದರೂ ಕೂಡ ಮೇಲಿನ ವಿವರಣೆಯ ಪ್ರಕಾರ ಪಾಶುರಗಳ ಸಂಖ್ಯೆ ೧೮೦ ಆಗುತ್ತವೆ. ಇನ್ನೂ ಹದಿನೈದು ಪಾಶುರಗಳ ವ್ಯತ್ಯಾಸ ಹೇಗೆ ಬಂದಿದೆ ಎಂಬುವುದು ಸ್ಪಷ್ಟವಿಲ್ಲ. ಆದರೂ ಸೂಕ್ಷ್ಮವಾಗಿ ಪರಿಶೀಲಿಸಿ ತಿರುಪತಿ ದೇವಸ್ಥಾನದವರ ಪ್ರಚುರಣವಾದ 'ಆಳ್ವಾರುಲ ಮಂಗಳಾಶಾಸನ ಪಾಶುರಮುಲು'ವನ್ನು ಇದರೊಂದಿಗೆ ಹೋಲಿಸಿ

ದಾಗ ಪೇಯಾಳ್ವಾರ್ ಪಾಶುರಗಳು ೧೦ ಅಲ್ಲ, ಆದರೆ ೧೯ ಇರಬೇಕು ಮತ್ತು ಪೆರಿಯಾಳ್ವಾರ್ ಪಾಶುರ ೧ ಅಲ್ಲ ಆದರೆ ೭ ಇರಬೇಕು ಎನಿಸುತ್ತದೆ. ಹೀಗೆ ಹೆಚ್ಚುವರಿಯಾದ ಪಾಶುರಗಳನ್ನು ೧೮೦ರೊಡನೆ ಕೂಡಿದಾಗ ೧೯೫ ಆಗುತ್ತದೆ. ಶ್ರೀ ರಾಮಚಂದ್ರರಾಯರ ಉದ್ದೇಶವೂ ಇದೇ ಆಗಿದ್ದು ಪ್ರಮಾದವಶಾತ್ ಮುದ್ರಣ ದೋಷದಿಂದಾಗಿ ಮೇಲಿನ ತಪ್ಪು ಉಂಟಾಗಿರುವು ದೆಂದು ಊಹಿಸಲು ಸಾಧ್ಯವಾಗುತ್ತದೆ. ಅಂತೂ ರಾಮಚಂದ್ರರಾಯರ ಪ್ರಕಾರ ವೇಂಗಡದ ಮೇಲೆ ಆಳ್ವಾರ್ ಪಾಶುರಗಳ ಸಂಖ್ಯೆ ೧೯೫ ಎಂದಾಗುತ್ತದೆ.

ಶ್ರೀ ಎನ್. ಎಸ್. ಅನಂತರಂಗಾಚಾರ್ಯರು ತಮ್ಮ ಮೊದಲ್ ತಿರುವಂದಾದಿ ಎನ್ನುವ ಪುಸ್ತಕದಲ್ಲಿ ಹತ್ತು ಪಾಶುರಗಳನ್ನು ತಿರುಮಲೆಯನ್ನು ಕುರಿತದ್ದಾಗಿ ಹೇಳಿದ್ದಾರೆ. ಆದರೆ ಇವರು ಕಾಣಿಸಿರುವ ೨೭ನೇ ಪಾಶುರದಲ್ಲಿ ತಿರುವೇಂಗಡದ ನೇರ ಪ್ರಸ್ತಾಪವಿಲ್ಲ. ಇದಕ್ಕೆ ಬದಲಾಗಿ ಅವರು ಸೂಚಿಸದೇ ಇರುವ ೬೮ನೇ ಪಾಶುರದಲ್ಲಿ ವೇಂಗಡದ ವಿಚಾರವಿದ್ದು, ಅವರು ಅದನ್ನೇಕೆ ಬಿಟ್ಟಿರುವರೆಂಬ ಕಾರಣ ತಿಳಿಯುವುದಿಲ್ಲ. ಈ ೨೭ನೇ ಪಾಶುರವನ್ನು ಬಿಟ್ಟು ೬೮ನೇ ಪಾಶುರವನ್ನು ನಾವು ತೆಗೆದುಕೊಂಡಾಗಲೂ ಈ ತಿರುವಂದಾದಿಯಲ್ಲಿ ವೇಂಗಡದ ವಿಷಯವಾದ ಪಾಶುರಗಳು ಹತ್ತೇ ಎಂಬುದಾಗಿ ನಿರ್ಧರಿಸಬಹುದು. 'ಇರಂಡಾಂ ತಿರುವಂದಾದಿ' ಯಲ್ಲಿ ಶ್ರೀ ಆಚಾರ್ಯರು ೧೨ ಪಾಶುರಗಳನ್ನು ನಮೂದಿಸಿ 'ಆಳ್ವಾರುಗಳು ಮತ್ತು ಶ್ರೀಮದ್ವೇಂಕಟನಾಯಕನೂ' ಪುಸ್ತಕದಲ್ಲಿ ೧೩ ಪಾಶುರಗಳನ್ನು ತೋರಿಸಿದ್ದಾರೆ. ಇಲ್ಲಿನ ಹೆಚ್ಚುವರಿ ಪಾಶುರದ ಸಂಖ್ಯೆ ೫೪. ಇದೇ ರೀತಿ ಮೂನ್ರಾಂ ತಿರುವಂದಾದಿಯಲ್ಲಿ ೧೮ ಪಾಶುರಗಳನ್ನು ತೋರಿಸಿ 'ಆಳ್ವಾರುಗಳೂ ಮತ್ತು ಶ್ರೀಮದ್ವೇಂಕಟನಾಯಕನೂ' ಪುಸ್ತಕದಲ್ಲಿ ೧೯ ಪಾಶುರಗಳನ್ನು ತೋರಿಸಿದ್ದಾರೆ. ಈ ಹೆಚ್ಚಿಗೆ ಪಾಶುರದ ಸಂಖ್ಯೆ ೧೪.

ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯ ಚತುರ್ಥ ಶತಕದ ಪಂಚಮ ದಶಕದ ಹನ್ನೊಂದನೆಯ ಪಾಶುರ ಮತ್ತು ಷಷ್ಠಮ ಶತಕದ ಷಷ್ಠಮ ದಶಕದ ಹನ್ನೊಂದನೆಯ ಪಾಶುರಗಳಲ್ಲಿ ವೇಂಗಡದ ನಾಮ ನಿರ್ದೇಶನಗೊಂಡಿರುವುದು. ಈ ಶ್ಲೋಕಗಳು ಆಯಾ ದಶಕದ ಮಂಗಳ ಶ್ಲೋಕವಾಗಿರುವುದರಿದ ಆಯಾ ದಶಕಗಳ ಮಿಕ್ಕ ಹತ್ತು, ಹತ್ತು ಪಾಶುರಗಳೂ ವೇಂಗಡ ವಿಷಯಾತ್ಮಕವಾದದ್ದೇ ಎಂದು ತೀರ್ಮಾನಿಸಿ ಅವುಗಳನ್ನೆಲ್ಲಾ 'ಆಳ್ವಾರುಗಳೂ ಮತ್ತು ಶ್ರೀ ಮದ್ವೇಂಕಟ ನಾಯಕನೂ' ಎನ್ನುವ ತಮ್ಮ ಪುಸ್ತಕದಲ್ಲಿ ಸೇರಿಸಿದ್ದಾರೆ. ಆದರೆ ಈ ೨೦ ಪಾಶುರಗಳಲ್ಲಿ ಎಲ್ಲಿಯೂ ವೇಂಗಡವಾಗಲೀ, ಅದರ ಒಡೆಯನ ವಿಷಯವಾಗಲೀ ಕಾಣಸಿಕ್ಕುವುದಿಲ್ಲ.

ಇದೇ ರೀತಿ ಪೆರಿಯಾಳ್ವಾರ್ ಅವರ ತಿರುಮೊಳಿಯು ಐದನೇ ಶತಕದ ನಾಲ್ಕನೇ ದಶಕದ ಆರಂಭ ಪಾಶುರವಾದ 'ಶೆನ್ನಿಯೋಂಗು'ವಿನಲ್ಲಿ ತಿರುಪತಿಯ ವಿಷಯವಿರುವುದರಿಂದ ಆ ದಶಕದ ಹತ್ತು ಶ್ಲೋಕಗಳೂ ವೇಂಗಡವನ್ನು ಕುರಿತದ್ದು ಎಂದು ಪರಿಗಣಿಸಿದ್ದಾರೆ. ಆದರೆ ಈ ಮಿಕ್ಕ ಪಾಶುರಗಳಲ್ಲಿ ವೇಂಗಡದ ವಿಷಯ ಸ್ವಲ್ಪವೂ ಬರುವುದಿಲ್ಲ. ಆದರೆ ಶ್ರೀವೈಷ್ಣವರು, ಅದರಲ್ಲೂ ತಿರುಪತಿಯ ದೇವಸ್ಥಾನದವರು ಈ ಶೆನ್ನಿಯೋಂಗು ದಶಕವನ್ನು ತಿರುವೇಂಗಡದ ಸ್ವಾಮಿಯ ಮಂಗಳಾಶಾಸನ ಪದ್ಯಗಳೆಂದೇ ಭಾವಿಸಿದ್ದಾರೆಂದು ತಿಳಿದುಬರುತ್ತದೆ.

ಆದರೆ ತಿರುವಾಯ್ಮೊಳಿಯ ಆರನೇ ಶತಕದ ನವಮದಶಕದ ೫ನೇ ಪಾಶುರ, (೬-೯-೫) ಪೆರಿಯತಿರುವಂದಾದಿಯ ೬೮ನೇ ಪಾಶುರ, ತಿರುಮಂಗೈ ಆಳ್ವಾರರ ತಿರುಕ್ಕುರುಂದಾಂಡಗಂನ ೭ ಪಾಶುರ, ತಿರುನೆಡುಂದಾಂಡಗಂನ ೮, ೯, ೧೦ ಪಾಶುರಗಳು, ಶಿರಿಯತಿರುಮಡಲ್‌ನ ೬೯ನೆಯ ಸಾಲು, ಪೆರಿಯತಿರುಮಡಲ್‌ನ ೬ ಮತ್ತು ೧೨೫ನೇ ಸಾಲುಗಳಲ್ಲಿ ವೇಂಗಡದ ಬಗ್ಗೆ ಸ್ಪಷ್ಟ ನಿರೂಪಣೆ ಇದ್ದರೂ ಅವುಗಳನ್ನು 'ಆಳ್ವಾರುಗಳೂ ಮತ್ತು ಶ್ರೀಮದ್ವೇಂಕಟ ನಾಯಕನೂ'ನಲ್ಲಿ ಪ್ರಸ್ತಾಪ ಮಾಡಿಲ್ಲದಿರುವುದು ಗಮನಾರ್ಹ. ತಿರುಮಳಿಶೈ ಆಳ್ವಾರ್ ಅವರ ತಿರುಚ್ಚಂದ ವಿರುತ್ತಂನ ಎರಡು ಪಾಶುರಗಳಾದ ೬೦ ಮತ್ತು ೮೧ನ್ನು ತಿರುಮಲೆ ತಿರುಪತಿ ದೇವಸ್ಥಾನದವರು ತಮ್ಮ ಪುಸ್ತಕದಲ್ಲಿ ಉದಹರಿಸಿದ್ದರೆ ಶ್ರೀ ಆಚಾರ್ಯರು ತಮ್ಮ ಮೇಲ್ಕಂಡ ಪುಸ್ತಕದಲ್ಲಿ ೪೮ನೇ ಪಾಶುರವನ್ನೂ ಜೋಡಿಸಿ ಮೂರು ಪಾಶುರ ಗಳೆಂದು ತೋರಿಸಿದ್ದಾರೆ.

'ತಿರುವಿರುತ್ತಂ'ನಲ್ಲಿ ತಿರುಪತಿ ದೇವಸ್ಥಾನದವರು ೭ ಪಾಶುರಗಳನ್ನು ತೋರಿಸಿದ್ದಾರೆ. ಅನಂತರಂಗಾಚಾರ್ಯರು ೮ ಪಾಶುರಗಳನ್ನು ಕಾಣಿಸಿದ್ದಾರೆ. ಈ ಎರಡು ಪುಸ್ತಕಗಳನ್ನೂ ಪರಿಶೀಲಿಸಿದರೆ ಈ ಹೆಚ್ಚಿನ ಪಾಶುರಗಳನ್ನು ನಾವು ವೇಂಗಡ ವಿಷಯಾತ್ಮಕವಾದದ್ದೆಂದು ಪರಿಗಣಿಸಲು ಅಡ್ಡಿ ಇಲ್ಲ. ಎಸ್. ಕೆ. ರಾಮಚಂದ್ರರಾಯರ ಪಾಶುರಗಳ ಸಂಖ್ಯೆಯಿಂದ ಅವರು ಯಾವ ಯಾವ ಪಾಶುರ ಗಳನ್ನು ಪರಿಗಣಿಸಿದ್ದಾರೆ, ಯಾವುದನ್ನು ಬಿಟ್ಟಿದ್ದಾರೆ, ಎನ್ನುವುದು ತಿಳಿಯುವುದಿಲ್ಲ. ಇದರ ವಿಚಾರವನ್ನು ಈಗಾಗಲೇ ಚರ್ಚಿಸಿದ್ದಾಗಿದೆ. ಅನಂತರಂಗಾಚಾರ್ಯರ ವಿವಿಧ ಪುಸ್ತಕಗಳಲ್ಲಿ ಕಂಡುಬರುವ ವ್ಯತ್ಯಾಸಗಳಿಗೆ ಕಾರಣ ತಿಳಿಯುವುದಿಲ್ಲ.

ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯಲ್ಲಿನ ಸಪ್ತಮ ಶತಕದ ನಾಲ್ಕನೇ ದಶಕದ ೧೧ ಪಾಶುರಗಳು ತಿರುವೇಂಗಡದ ಸ್ವಾಮಿಯನ್ನು ಕುರಿತದ್ದು ಎಂದು ಹೇಳುತ್ತಾರೆ. ಇದಕ್ಕೆ ಈ ಪಾಶುರಗಳಲ್ಲಿ ಬರುವ 'ಅಪ್ಪನ್' ಎಂಬ ದೈವ ಸಂಬೋಧನೆಯೊಂದೇ ಕಾರಣವಾಗಿದೆ. 'ಅಪ್ಪನ್' ಎನ್ನುವುದು ತಿರುಪುಳಿಯ ದೇವರ ಉತ್ಸವ ವಿಗ್ರಹವಾದ 'ಮಲೆಯಪ್ಪನ್' ಸ್ವಾಮಿಯ ಹ್ರಸ್ವರೂಪವೆನ್ನು

ತ್ತಾರೆ ಟಿ. ಟಿ.ಡಿ. ಪುಸ್ತಕದಲ್ಲಿ. ಆದರೆ ಮೂಲ ದೇವರಿಗೂ 'ಅಪ್ಪನ್' ಎಂದೇ ಜನ ಮೊದಲಿನಿಂದ ಕರೆಯುವ ರೂಢಿ ಶ್ರೀವೈಷ್ಣವರಲ್ಲಿದೆ. ಅವರುಗಳು ಅಪ್ಪಲಾಚಾರ್ಯ, ಅಪ್ಪಣ್ಣೈಯ್ಯಂಗಾರ್ ಮುಂತಾದ ಹೆಸರುಗಳನ್ನು ಈ ವ್ಯಾಜ ದಿಂದಲೇ ಇಟ್ಟುಕೊಳ್ಳುವುದು. 'ಅಪ್ಪನ್' ಎಂದರೆ 'ಸ್ವಾಮಿ' ಎಂದು ಅರ್ಥ. ಈ ಹೆಸರಿನಿಂದ ನಿರ್ದೇಶಿಸಲ್ಪಡುವ ಏಕೈಕ ದೇವರೆಂದರೆ ಶ್ರೀನಿವಾಸನೊರ್ವನೇ. ಈ ಹನ್ನೊಂದು ಪಾಶುರಗಳನ್ನು ತಿರುಮಲೆ ತಿರುಪತಿ ದೇವಸ್ಥಾನದವರು ತಮ್ಮ ಪುಸ್ತಕದ ಕಡೆಯಲ್ಲಿ ಬೇರೆಯಾಗಿ ಸೇರಿಸಿದ್ದಾರೆ. ಈ ಹನ್ನೊಂದು ಪಾಶುರ ಗಳನ್ನು ದೈನಂದಿನ ಪ್ರಬಂಧ ಪಾರಾಯಣದಲ್ಲಿ ತಿರುಪತಿಯಲ್ಲಿ ಸೇರಿಸಿದ್ದಾರೆಂದು ಹೇಳುತ್ತಾರೆ. ಆದ್ದರಿಂದ ಹೆಚ್ಚಳಿಕೆಯಿಂದ ಕೂಡಿದ ಈ ಹನ್ನೊಂದು ಪಾಶುರ ವನ್ನು ನಾನು ಪರಿಗಣನೆಗೆ ತೆಗೆದುಕೊಂಡಿದ್ದೇನೆ. ಈ ದೃಷ್ಟಿಯಿಂದ ಆಳ್ವಾರ್‌ಗಳು ವೇಂಗಡದೊಡೆಯನನ್ನು ಮಂಗಳಾಶಾಸನ ಮಾಡಿರುವ ಪಾಶುರಗಳ ಸಂಖ್ಯೆ ೨೧೧ ಆಗುತ್ತದೆ.

ವೇಂಗಡ ವಿಷಯವಾದ ಪಾಶುರಗಳ ಪಟ್ಟಿಯನ್ನು ಈ ಕೆಳಕಂಡಂತೆ ಪರಿಷ್ಕರಣಗೊಳಿಸಬಹುದಾಗಿದೆ.

| | | | |
|---|---|---|---|
| ಪೊಯ್ಗೈಯ್ ಆಳ್ವಾರ್ | | ೧೦ | ಪಾಶುರಗಳು |
| ಪೂದತ್ತಾಳ್ವಾರ್ | | ೧೩ | ,, |
| ಪೇಯಾಳ್ವಾರ್ | | ೧೯ | ,, |
| ತಿರುಮಳಿಶೈ ಆಳ್ವಾರ್ | (ನಾ.ತಿ.) | ೧೨ | ,, |
| | (ತಿ.ವಿ.) | ೩ | ,, |
| ನಮ್ಮಾಳ್ವಾರ್ | (ತಿ.ವಿ.) | ೮ | ,, |
| | (ಪೆ.ತಿ.) | ೧ | ,, |
| | (ತಿರುವಾಯ್ಮೊಳಿ) | ೪೬ | ,, |
| ಕುಲಶೇಖರ | | ೧೧ | ,, |
| ಆಂಡಾಳ್ | | ೧೬ | ,, |
| ಪೆರಿಯಾಳ್ವಾರ್ | | ೭ | ,, |
| ತಿರುಪಾಣಿ | | ೨ | ,, |
| ತಿರುಮಂಗೈ | (ತಿರುಕ್ಕುರುಂದಾಂಡಗಂ) | ೧ | ,, |
| | (ತಿರುನೆಡುಂದಾಂಡಗಂ) | ೪ | ,, |
| | (ಪೆರಿಯತಿರುಮೊಳಿ) | ೫೫ | ,, |

(ಶಿರಿಯತಿರುಮಡಲ್) ೧ ಸಾಲು
(ಪೆರಿಯತಿರುಮಡಲ್) ೨ ಸಾಲುಗಳು

ಒಟ್ಟು ೨೦೧

ಈ ರೀತಿ ನಾಲಾಯಿರ ದಿವ್ಯ ಪ್ರಬಂಧಗಳಲ್ಲಿನ ವೇಂಗಡವನ್ನು ಮಂಗಳಾಶಾಸನ ಮಾಡಿರುವ ಒಟ್ಟು ಇಷ್ಟು ಪಾಶುರಗಳೆಂದು ನಿರ್ಧರಿಸಬಹುದು. ಇವುಗಳನ್ನು ನಾವು ಅರ್ಥಸಹಿತವಾಗಿ ಅಧ್ಯಯನ ಮಾಡಿದಾಗ ಈ ಮಲೆಯ ಸೌಂದರ್ಯ, ವೈಭವ, ಮಹಿಮೆ, ಅದರ ಮೇಲಿನ ಸ್ವಾಮಿಯ ವಿಶೇಷ, ಎಲ್ಲದರ ಸಮಗ್ರ ಚಿತ್ರಣ ನಮಗೆ ದೊರೆಯುತ್ತದೆ. ಇದಲ್ಲದೆ ಹಲವು ಹೊಸ ವಿಚಾರಗಳೂ ಗೋಚರಗೊಳ್ಳುತ್ತದೆ. ಕುತೂಹಲಕಾರಿಯಾದ ಹಲವಾರು ಚಾರಿತ್ರಿಕ, ಸಾಮಾಜಿಕ, ಐತಿಹಾಸಿಕ ವಿವರಗಳೂ ನಮಗೆ ಪ್ರಯೋಜನಕಾರಿಯಾಗಿ ಕಂಡುಬರುತ್ತದೆ.

೩

ಮೊದಲಾಳ್ವಾರ್‌ಗಳು, ಮೊತ್ತಮೊದಲಿಗೆ ತಮ್ಮ ಪ್ರಬಂಧಗಳಲ್ಲಿ ವೇಂಗಡದ ವರ್ಣನೆಯನ್ನು ಹೆಚ್ಚು ಸಂಖ್ಯೆಯ ಪಾಶುರಗಳಲ್ಲಿ ವಿವರಿಸುತ್ತಾರೆ. ಈ ಮಲೆಯ ಮಹಿಮೆಯಲ್ಲಿ ಪ್ರಾಕೃತಿಕ ಚಿತ್ರಗಳೇ ಹೆಚ್ಚಾಗಿದೆ. ಬೆಟ್ಟದ ಮೇಲಿನ ದೇವರಿಗೆ ಈ ಪಾಶುರಗಳು ಹೆಚ್ಚಾಗಿ ಬಳಸಲ್ಪಟ್ಟಿಲ್ಲವೆನ್ನುವುದನ್ನು ಗಮನಿಸಬೇಕಾಗಿದೆ. ಈ ಪರ್ವತದ ಸೊಬಗಿಗೆ ಮನಸೋತು ಪರಮಾತ್ಮನು ಇದರ ಮೇಲೆ ನೆಲಸಿರುವ ನೆಂಬ ಅರ್ಥ ಇಲ್ಲಿ ವ್ಯಕ್ತಗೊಳ್ಳುವುದೇ ವಿನಹ ದೇವರ ನೆಲೆಯಿಂದ ಈ ಗಿರಿಗೆ ಪ್ರಾಶಸ್ತ್ಯ ಲಭಿಸಿದೆ ಎನ್ನುವ ಭಾವನೆ ಲಭ್ಯವಾಗುವುದಿಲ್ಲ. ಇದೊಂದು ವಿಚಿತ್ರವಾದ ವಿಚಾರವೇ ! ಈ ಕುತೂಹಲಕಾರಿ ಅಂಶವನ್ನು ಮುಂದಿಟ್ಟುಕೊಂಡು ನಾವು ಈ ಅಧ್ಯಯನವನ್ನು ನಡೆಸಿದಾಗ ಹಲವು ರೀತಿಯ ವಿಚಿತ್ರ ವಿವರಗಳು ನಮಗೆ ದೊರೆಯುತ್ತವೆ. ಈ ವಿಚಿತ್ರಗಳು ಅದ್ಭುತವೂ, ರಮ್ಯವೂ ಆಗಿವೆ. ತಿರುವೇಂಗಡವು ಏಕೆ ಪರಮ ಪೂಜನೀಯವಾದ ಬೆಟ್ಟ, ಮಹಿಮಾನ್ವಿತವೆನಿಸಿದೆ ಎನ್ನುವುದು ಪುರಾಣದಲ್ಲಿ ನಮಗೆ ಗೋಚರಗೊಳ್ಳುವಂತೆ ಇಲ್ಲಿ ತಿಳಿಯುವುದಿಲ್ಲ.

"ಶ್ರೀಶೇಷಶೈಲ, ಗರುಡಾಚಲ, ವೆಂಕಟಾದ್ರಿ, ನಾರಾಯಣಾದ್ರಿ ವೃಷಭಾದ್ರಿ, ವೃಷಾದ್ರಿ ಮುಖ್ಯಾನ್"

ಎನ್ನುವ ಹೆಸರುಗಳನ್ನು ಹೊಂದಿರುವ, 'ಸಪ್ತಗಿರಿ' ಎಂದು ಹೆಸರಾದ ಏಳು ಪರ್ವತಗಳ ಗುಚ್ಛಕ್ಕೆ ಈ ಪ್ರತಿ ಹೆಸರಿನ ಹಿಂದೆಯೂ ಒಂದೊಂದು ಭವ್ಯ

ಉಪಾಖ್ಯಾನವೇ ಪುರಾಣಗಳಲ್ಲಿ ವರ್ಣಿತಗೊಂಡಿದೆ. ಇದಕ್ಕೆ ವೃಷಶೈಲವೆಂದು ಕೃತಯುಗದಲ್ಲೂ, ಅಂಜನಾದ್ರಿಯೆಂದು ತ್ರೇತಾಯುಗದಲ್ಲಿಯೂ, ಶೇಷಾಚಲ ಎಂಬುದಾಗಿ ದ್ವಾಪರದಲ್ಲೂ, ವೇಂಕಟಾಚಲವೆಂದು ಕಲಿಯುಗದಲ್ಲೂ ಹೆಸರಿರುವುದಾಗಿ ಭವಿಷ್ಯೋತ್ತರ ಪುರಾಣಾದಿಗಳಲ್ಲಿ ವಿವರಣೆಗೊಂಡಿದೆ. ಈ ಮಲೆಯನ್ನು ದರ್ಶಿಸಿದಾಗ ಆದಿಶೇಷವು ಮೈಚಾಚಿ ಉದ್ದಕ್ಕೂ ಮಲಗಿದಂತೆ ಬಂಡೆಗಳ ವಿನ್ಯಾಸವಿರುವುದನ್ನು ಗಮನಿಸಬಹುದು.

ಆದರೆ ಆಳ್ವಾರುಗಳು ಮಾತ್ರ ಈ ನಾಮಮಹಿಮೆಗಳಿಂದ ಆಕರ್ಷಿತರಾಗಿಲ್ಲ. ಅವರು ಒಮ್ಮೆಯೂ ಎಲ್ಲೂ ಸಹ ಈ ಹೆಸರುಗಳನ್ನು ಬಳಸದೇ ಇರುವುದು ಆಶ್ಚರ್ಯವೇ ಸರಿ. ಈ ಮಲೆ ಪ್ರದೇಶವನ್ನು ಕೇವಲ ವೇಂಗಡ ಅಥವಾ ತಿರುವೇಂಗಡವೆಂದೇ ಎಲ್ಲ ಆಳ್ವಾರುಗಳೂ ಬಳಸಿರುವುದು ಮತ್ತೂ ವಿಚಿತ್ರವಾದ ವಿಚಾರವೇ ಎನ್ನಬೇಕು. ಆಳ್ವಾರುಗಳಿಗೆ ಈ ಪುರಾಣ ಪರಿಚಯವಿರಲಿಲ್ಲವೆ? ಆಳ್ವಾರುಗಳ ಕಾಲಕ್ಕಿಂತ ಈ ಪುರಾಣಗಳು ಪ್ರಾಚೀನವೆ? ಅಥವಾ ಆಳ್ವಾರುಗಳಿಗೆ ಪುರಾಣ ವಾಕ್ಯಗಳ ಮೇಲೆ ಆಸಕ್ತಿ ಇರಲಿಲ್ಲವೇ? ಸಂಸ್ಕೃತ ಭಾಷೆಯ ಮೇಲೆಯೇ ತಾತ್ಸಾರವೇ, ದ್ವೇಷವೇ? ಎನ್ನುವ ವಿಚಾರಗಳು ಅರ್ಥವಾಗುವುದಿಲ್ಲ. ಈ ಪುರಾಣಗಳಲ್ಲಿ ಉಕ್ತವಾಗಿರುವ ಹೆಸರುಗಳೇ ಕಾಲ್ಪನಿಕವೇ, ಕಟ್ಟುಕತೆಯೇ ಅಥವಾ ಈ ಬೇರೆಯವರು ಅರ್ಥಾತ್ ಪುರಾಣಗಳನ್ನು ಬರೆದವರು ಉತ್ತರ ಭಾರತೀಯರು ಎನ್ನುವ ಅಭಿಪ್ರಾಯದಿಂದ ಈ ತಮಿಳುನಾಡಿನ ಜನ ಅವರು ಹೇಳಿರುವುದನ್ನು ಮಾನ್ಯ ಮಾಡಲಿಲ್ಲವೆ? ಅಂತೂ ಭಾರತೀಯರು ಯಾವ ನಾಮಧೇಯದಿಂದಲಾದರೂ ಕರೆದುಕೊಳ್ಳಲಿ, ಆದರೆ ಈ ಮಲೆಗೆ ಅನಾದಿಯಾಗಿ ಈ ದ್ರಾವಿಡ ಪ್ರಾಂತ್ಯದಲ್ಲಿ ಬಳಕೆಯಾಗಿರುವ ಒಂದೇ ಹೆಸರು ವೇಂಗಡ ಅಥವಾ ತಿರುವೇಂಗಡ. ಹಾಗಾದರೆ ಆಳ್ವಾರು ಪ್ರಬಂಧಗಳು ಪುರಾಣ ಯುಗಕ್ಕಿಂತ ಪ್ರಾಚೀನವೇ? ಎನ್ನುವ ವಿಚಾರವೂ ಉದ್ಭವಿಸದೇ ಇರುವುದಿಲ್ಲ. ಮತ್ತೆ ಈ ಪುರಾಣಗಳಲ್ಲಿ ಉಕ್ತವಾಗಿರುವ ವೆಂಕಟಾಚಲ ಮಾಹಾತ್ಮ್ಯೆಯ ಕತೆಯನ್ನಂತೂ ಯಾವ ಆಳ್ವಾರುಗಳೂ ಮಾನ್ಯ ಮಾಡಿಯೇ ಇಲ್ಲ. ಇದೊಂದು ಆಶ್ಚರ್ಯದ ಸಂಗತಿಯೇ ಸರಿ! ಈ ಮಾಹಾತ್ಮ್ಯೆಗಳ ಬಗ್ಗೆ, ಈ ಕತೆಯ ಬಗ್ಗೆ ಅಪ್ಪಿತಪ್ಪಿಯಾದರೂ ಪಾಶುರಗಳಲ್ಲಿ ಪ್ರಸ್ತಾಪವಿಲ್ಲ, ವಿಚಾರ ವಾಹಿನಿಯಿಲ್ಲ. ಈ ಮಾಹಾತ್ಮ್ಯವೇ ಹೆಣೆಯಲ್ಪಟ್ಟ ಕಟ್ಟುಕತೆಯಂತಿದ್ದು, ಸ್ವರ್ಗ ಮತ್ತು ಭೂಲೋಕದ ಜನರ ಮಧ್ಯೆ ಸಂಬಂಧ ಕಲ್ಪಿಸುವಂತಹುದಾಗಿದೆಯಲ್ಲವೆ ಈ ಕಲಿಯುಗದಲ್ಲಿ! ಈ ದೇವರನ್ನು ಆಳ್ವಾರುಗಳು ಒಮ್ಮೆಯಾದರೂ ಅವನ ಬಳಕೆಯ ಹೆಸರುಗಳಾದ ಶ್ರೀನಿವಾಸ, ವೇಂಕಟೇಶ, ಸಪ್ತಗಿರೀಶ, ಅಲಮೇಲುಮಂಗಾಸಮೇತ ಎಂಬುದಾಗಿ ತಮ್ಮ ಪಾಶುರಗಳಲ್ಲಿ ಸಂಬೋಧಿಸಿಯೇ ಇಲ್ಲ! ಇದೂ ಆಶ್ಚರ್ಯವೇ! ಎಲ್ಲೋ [illegible]

ಒಮ್ಮೊಮ್ಮೆ "ಅಲರ್‌ಮೇಲ್ ಮಂಗೈ ಉರೈಮಾರ್ಬ" ಎನ್ನುವ ವಿಶೇಷಣದಿಂದ ಅವರು ಕರೆದಿದ್ದಾರೆ (ಎಂದರೆ ಹೂವಿನ ಮೇಲಿನ ಸ್ತ್ರೀಯನ್ನು ಎದೆಯಲ್ಲಿ ಸೂಡಿರುವವನೇ ಎಂದರ್ಥ). ಎಂದಾಗ ಈ ಅಲರ್‌ಮೇಲ್‌ಮಂಗೈ ಎಂದರೆ ಲಕ್ಷ್ಮಿಗೆ ಅನ್ವಯಗೊಳ್ಳುವ ಅರ್ಥವಾಗುವುದೇ ವಿನಃ ಶ್ರೀನಿವಾಸನ ಮತ್ತೊಬ್ಬ ಪತ್ನಿ ಎಂದು ವರ್ಣಿತವಾಗಿರುವ ಪದ್ಮಾವತಿಗೆ ಅನ್ವಯಿಸುವುದಿಲ್ಲ. ಪುರಾಣಗಳ ಪ್ರಕಾರ ಪದ್ಮಾವತಿಯೇ ಬೇರೆ; ಲಕ್ಷ್ಮಿಯೇ ಬೇರೆ. ಅಂತೂ ಎಲ್ಲ ಆಳ್ವಾರರೂ, ವೇಂಗಡವನ್, ವೇಂಗಡತ್ತಾನ್, ವೇಂಗಡತ್ತಾಯನ್, ವೇಂಗಡ ಮುಡಿಯಾನ್, ತಿರುವೇಂಗಡತ್ತಾನ್ ಎಂಬುದಾಗಿ ಈ ಪರ್ವತದ ನಾಮನಿರ್ದೇಶನದೊಂದಿಗೇ ಈ ದೇವರಿಗೆ ಸಂಬಂಧ ಕಲ್ಪಿಸುತ್ತಾರೆ ಎಂದಾಗ ಈ ದೇವರಿಗಿಂತ ಈ ಪರ್ವತದಲ್ಲೇ ಒಂದು ಹೆಚ್ಚಳಿಕೆಯನ್ನು ಆಳ್ವಾರುಗಳು ಕಂಡುಕೊಂಡಿರುವುದು ಸ್ಪಷ್ಟಪಡುತ್ತದೆ. ಎಂದರೆ ಆಳ್ವಾರುಗಳ ಪಾಲಿಗೆ ಈ ಪ್ರಾಕೃತ ಪರ್ವತವು ಸುಂದರವಾದ, ಚೆಲುವಾದ, ಮಹಿಮಾನ್ವಿತವಾದ, ಪಾಪಹರವಾದ, ಆಕರ್ಷಣೆಯಿಂದ ಕೂಡಿದ ಒಂದು ವಸ್ತುವಾಗಿದೆ. ದೇವನು ಈ ಪರ್ವತದ ಸೊಬಗಿಗೆ ಮನಸೋತು ಇಲ್ಲಿ ಬಂದು ನೆಲಸಿರುವನೆನ್ನುವ ಭಾವಕ್ಕೆ ಇಂಬು ದೊರೆಯುತ್ತದೆ. ಈ ಪರ್ವತದ ಮೇಲೆ ನೆಲಸಿದ್ದರಿಂದ ಪರಮಾತ್ಮನಿಗೆ ಶ್ರೇಷ್ಠತ್ವವುಂಟಾಯಿತೋ ಅಥವಾ ಪರಮಾತ್ಮನ ಸಾನ್ನಿಧ್ಯದಿಂದ ಈ ಪರ್ವತಕ್ಕೆ ಪಾವಿತ್ರ್ಯ ಒದಗಿತೋ ಎನ್ನುವ ಪ್ರಶ್ನೆ ಈ ಆಳ್ವಾರ್ ಪಾಶುರಗಳಿಂದ ಪರಿಹಾರ ಕಂಡುಕೊಳ್ಳುವುದಿಲ್ಲ. ಅಂತೂ ಈ ಬೆಟ್ಟಕ್ಕೇ ಆಶ್ರಿತವತ್ಸಲತೆ, ಭಕ್ತರ ಇಷ್ಟಗಳನ್ನು ಪೂರೈಸುವ ಗುಣ, ಪಾಪಪರಿಹಾರ ಮಾಡುವ ವೈಶಿಷ್ಟ್ಯ ಮುಂತಾದ ಮಹಿಮೆಗಳು ಮೈಗೂಡಿಕೊಂಡಿರುವುದನ್ನು ವಾಚಕರು ಆಳ್ವಾರ್ ಪಾಶುರಗಳಿಂದ ಕಂಡುಕೊಳ್ಳಬಹುದು.

"ಬೆಟ್ಟವಾಗಲಿ, ಬೆಟ್ಟದ ನದಿಯಾಗಲೀ, ಎಡೆಯಾಗಲೀ, ಅಷ್ಟಾಗಿ ಈ ಆಳ್ವಾರರ ಮನಸೆಳೆಯಲಿಲ್ಲ; ಅವರ ಒಲುಮೆ ಹೀರಿಕೊಂಡಿದ್ದು ಬೆಟ್ಟದ ಮೇಲೆ ನಿಂತ ದೈವ. ಈ ದೈವ ತನ್ನ ನೆಲೆಗೆ ಆರಿಸಿಕೊಂಡ ಬೆಟ್ಟ ಇದೆಂದು ಬೆಟ್ಟದ ಹಿರಿಮೆ ಅಷ್ಟೇ" ಎಂದು ರಾಮಚಂದ್ರರಾಯರು ೨೪ನೇ ಪುಟದಲ್ಲಿ (ತಿರುಪತಿ ತಿಮ್ಮಪ್ಪ) ವಿವರಿಸಿರುವುದು ಜಿಜ್ಞಾಸಾರ್ಹವಾದ ಹೇಳಿಕೆ. "ಆ ಆಳ್ವಾರರ ಕಾಲದಲ್ಲಿ ಕ್ಷೇತ್ರ ಮಾಹಾತ್ಮ್ಯೆಯ ಗೀಳು ಇನ್ನೂ ಬೆಳೆದಿರಲಿಲ್ಲವೇನೋ?" ಎಂದು ರಾಯರು ಪ್ರಶ್ನಿಸುತ್ತಾರೆ.

ಆದರೆ ನಮಗೆ ಕಂಡುಬರುವುದು ಈ ಆಳ್ವಾರುಗಳೆಲ್ಲಾ ಈ ಮಲೆಯನ್ನೇ ವರ್ಣಿಸಿದ್ದಾರೆ. ಅದರ ಮೇಲಿನ ಬಿದುರುಕಾಡು; ಆಡುವ ಮೋಡ; ಹರಿಯುವ ಝರಿ, ಓಡುವ ನದಿ, ಬೀಳುವ ಜಲಪಾತ, ಕಾಲುವೆಗಳು; ವಾಸಿಸುವ ಹುಲಿ, ಹೆಬ್ಬಾವು, ಆನೆ – ಇವುಗಳ ವಿಹಾರಗಳು; ಕಪಿಗಳು, ಹಂದಿಗಳು, ಕುರವರು,

ಬೇಡರು ಮುಂತಾದ, ಸಾಮಾಜಿಕ, ಪ್ರಾಕೃತಿಕ ಚಿತ್ರಗಳನ್ನು ಮನರಂಜಿಸುವಂತೆ ವರ್ಣಿಸಿ ಅಂತಹ ವೇಂಗಡದ ಮೇಲೆ ನಮ್ಮ ಸ್ವಾಮಿ ನೆಲಸಿದ್ದಾನೆ ; ಅಂತಹ ಸುಂದರ ಪರ್ವತವನ್ನು, ವೈಕುಂಠವನ್ನು ಕೂಡಾ ತ್ಯಜಿಸಿ ವಾಸಸ್ಥಾನ ಮಾಡಿಕೊಂಡಿದ್ದಾನೆ ಎಂದು ವರ್ಣಿಸಿದ್ದಾರೆ. ಅವರ ಪಾಶುರಗಳಲ್ಲೆಲ್ಲಾ ಪ್ರಕೃತಿ ವರ್ಣನೆಯೇ ಶೇಕಡಾ ಎಪ್ಪತ್ತೈದು ಭಾಗ ಆಕ್ರಮಿಸಿವೆ. ಇನ್ನು ಈ ಪರ್ವತವೇ ಪಾಪನಾಶ ಮಾಡುತ್ತದೆ, ವರಪ್ರಸಾದಿ ; ಹಾಡಿದರೆ ಪರ್ವತವನ್ನೇ ಹಾಡುತ್ತೇನೆ ಎಂಬುದಾಗಿ ಅರ್ಥ ಬರುವ ಪಾಶುರಗಳನ್ನು ರಚಿಸಿದ್ದಾರೆ. ಇವುಗಳಿಂದ ಆಳ್ವಾರುಗಳ ಪ್ರಕೃತಿಪ್ರಿಯತೆ, ವರ್ಣನಾ ಕೌಶಲ್ಯ ಇವುಗಳು ನಮ್ಮ ಮನಸ್ಸನ್ನು ಸೆರೆಹಿಡಿಯುತ್ತದೆ, ಸೂರೆಗೊಳ್ಳುತ್ತದೆ. ಆಳ್ವಾರುಗಳು ಈ ಬೆಟ್ಟವನ್ನೇ ಪರಮಾತ್ಮನ ರೂಪದಂತೆ, ಅವನು ವೈಕುಂಠವನ್ನು ತ್ಯಜಿಸಿ ಅಲ್ಲಿ ನೆಲಸಿರುವುದರಿಂದ ಭೂವೈಕುಂಠವೆನ್ನುವಂತೆ ಭಾವಿಸಿ ಸ್ತುತಿಸಿದ್ದಾರೆ. ಈ ರೀತಿಯ ಕ್ಷೇತ್ರ ಮಹಾತ್ಮ್ಯ ತುಂಬಿ ತುಳುಕಾಡುವುದನ್ನು ಈ ಪಾಶುರಗಳ ಮನನದಿಂದ ಅರಿಯಬಹುದಾಗಿದೆ. ಈ ದೃಷ್ಟಿಯಿಂದ ರಾಮಚಂದ್ರರಾಯರ ವಿವರಣೆ ತಪ್ಪಾಗುತ್ತದೆ ಎನ್ನಿಸುತ್ತದೆ.

ಮಾಯಾಮಿ ಪರಮಾನಂದಂ ತ್ಯಕ್ತ್ವಾ ವೈಕುಂಠ ಮುತ್ತಮಂ
ಸ್ವಾಮಿ ಪುಷ್ಕರಿಣೀ ತೀರೇ ರಮಯಾ ಸಹ ಮೋದತೇ

ಎಂದು ಒಬ್ಬ ಪ್ರಾಚೀನ ಕವಿ ವರ್ಣಿಸಿದರೆ,

ಶ್ರೀ ವೈಕುಂಠ ವಿರಕ್ತಾಯ ಸ್ವಾಮಿ ಪುಷ್ಕರಿಣೀತಟೇ
ರಮಯಾ ರಮಮಾಣಾಯ ವೇಂಕಟೇಶಾಯ ಮಂಗಳಂ

ಎಂಬುದಾಗಿ ಆಚಾರ್ಯರೊಬ್ಬರು ಕೀರ್ತಿಸುತ್ತಾರೆ. ಮೇಲಿನ ಶ್ಲೋಕದ ಅರ್ಥವನ್ನೇ ಬೇರೊಂದು ರೀತಿ ಈ ಶ್ಲೋಕ ವಿವರಿಸುತ್ತದೆ. ಇದನ್ನು ಪರಿಶೀಲಿಸಿದಾಗ ಈ ಪರ್ವತದ ಸೊಬಗೇ ನಮ್ಮ ಕಣ್ಣು ಮುಂದೆ ನಿಲ್ಲುತ್ತದೆಯಲ್ಲವೆ ? ವೆಂಕಟಾಚಲ ಮಾಹಾತ್ಮ್ಯದಲ್ಲಿ ಬರುವ ವಿಷ್ಣುಲಕ್ಷ್ಮಿಯರ ವಿರಸ, ಭೃಗುಋಷಿಯ ಶಾಪ, ಲಕ್ಷ್ಮಿಯು ವೈಕುಂಠವನ್ನು ತೊರೆದು ಗಂಡನ ಮೇಲಿನ ಕೋಪದಿಂದ ಕೊಲ್ಲಾಪುರವನ್ನು ಸೇರಿದ್ದು, ವಿಷ್ಣು ಅವಳ ಮೇಲಿನ ವಿರಹದಿಂದ ಅನ್ನಪಾನಗಳಿಲ್ಲದೆ ಹುತ್ತವನ್ನು ಸೇರಿದ್ದು, ವಕುಳ ಮಾಲಿಕೆಯ ಆಶ್ರಯ ದೊರೆತಿದ್ದು, ಪದ್ಮಾವತಿ ದೇವಿಯೊಡನೆ ಪ್ರಣಯ, ವಕುಳ ಮಾಲಿಕೆಯ ಸಂಧಾನದಿಂದ ಮದುವೆಯಾದದ್ದು, ಮದುವೆಗೆ ಕುಬೇರನಲ್ಲಿ ಸಾಲ, ಮದುವೆಗೆ ದೇವಾದಿದೇವತೆಗಳ ಆಗಮನ, ವರಾಹ ದೇವರೊಡನೆ ಭೂಮಿಯನ್ನು ಪಡೆಯಲು ಒಪ್ಪಂದ, ಲಕ್ಷ್ಮಿ ಕೋಪ ಶಾಂತವಾದ ನಂತರ ಬಂದು ತನ್ನ ಗಂಡ ಬೇರೊಬ್ಬಳನ್ನು ಮದುವೆ ಆಗಿರುವುದನ್ನು ಕಂಡು ಕಾಡುವುದು, ಇಬ್ಬರ ಹೆಂಡಿರ ಜಗಳದಿಂದ ಬೇಸತ್ತ

ಶ್ರೀನಿವಾಸನು ಕಲ್ಲಾಗಿ ನಿಂತಿದ್ದು ಈ ಎಲ್ಲಾ ಪುರಾಣ ನಿರ್ಮಿತ ಕತೆಗಳೂ ಕಲ್ಪಿತ ವೆಂಬುದಾಗಿ ಸ್ಪಷ್ಟಪಡುತ್ತಿದೆ. ಏತಕ್ಕೆಂದರೆ ಇಲ್ಲಿ ದೇವನು ಲಕ್ಷ್ಮಿಯೊಡನೆ ವಿಹಾರ ನಡೆಸಲು ವೈಕುಂಠದಲ್ಲೂ ವಿರಕ್ತಿ ಹೊಂದಿ ಬಂದು ಸಂತೋಷದಿಂದ ನಲಿಯುತ್ತಿರುವ ಚಿತ್ರಣ ದೊರಕುತ್ತದೆ. ಇಂತಹ ಸೊಬಗಿನ ತಾಣ ತಿರುವೇಂಗಡ ವೆಂಬುದಾಗಿ ವಿಷಯ ಸಿದ್ಧವಾಗುತ್ತದೆ.

ಈ ದೃಷ್ಟಿಯಿಂದಲೇ 'ವೇಂಗಡಗಳ್ ಮೈಮೇಲ್ ವಿನ್ನೈಮುತ್ತಮುಂ' ಎಂಬುದಾಗಿ ನಮ್ಮಾಳ್ವಾರ್ ಹಾಡುತ್ತಾರೆ. ಕಡಂ ಎಂದರೆ ಸಕಲ ವಿಧವಾದ ಋಣಗಳು ಎಂದು ಅರ್ಥ. ಭಗವತ್ಕೈಂಕರ್ಯಕ್ಕೆ ಪ್ರತಿಬಂಧಕವಾಗಿರುವ ಜನ್ಮಸಂಬಂಧವಾದ ಕರ್ಮಗಳು (ಕಡಂ) ಈ ಲೋಕ ವ್ಯಾಪಾರ ಸಂಚಿತವಾಗಿರತಕ್ಕ ಕರ್ಮ. ಮೇಲ್ವಿನೈ ಎಂದರೆ ಮುಂದೆ ಸಂಚಿತವಾಗತಕ್ಕ ಕರ್ಮಗಳೂ ಸೇರಿ "ಮುತ್ತವುಂ ವೇಂ" ಎಂದರೆ ನಿಶ್ಶೇಷವಾಗಿ ಸಕಲವೂ ನಾಶವಾಗುವ ಅರ್ಥ ಈ ಪರ್ವತವನ್ನು ಸೇವಿಸುವುದರಿಂದ ಲಭಿಸುತ್ತಿದೆ ಎನ್ನುತ್ತಾರೆ. ಈ ವ್ಯಾಖ್ಯಾನ ಬಹಳ ಸೊಗಸಾಗಿದೆ. ಯಾರೂ ಇಷ್ಟೊಂದು ಸುಂದರವಾದ ಅರ್ಥ ವಿವರಣೆ ಮಾಡಿಲ್ಲ ಎಂದೇ ಹೇಳಬೇಕು.

'ವೇಂಗಡ' ಎನ್ನುವ ತಮಿಳು ಪದದಿಂದಲೇ 'ವೇಂಕಟ' ಎನ್ನುವ ಸಂಸ್ಕೃತ ರೂಪ ಆವಿರ್ಭವಿಸಿರಬಹುದಾದ ಸಾಧ್ಯತೆಯನ್ನು ಶ್ರೀ ರಾಮಚಂದ್ರರಾಯರು ವಿವರಿಸಿದ್ದಾರೆ. ವೇಂಗಡವೇ ಪ್ರಾಚೀನರೂಪ. ಆದರಿಂದ ಸಂಸ್ಕೃತದ ಸಮಾನ ಪದವಾದ ವೇಂಕಟ ನಂತರ ಹೊಂದಿಸಲ್ಪಟ್ಟಿದೆ ಎನ್ನುವ ವಾದದಲ್ಲಿ ತಥ್ಯವನ್ನು ನಾವು ಕಂಡುಕೊಳ್ಳಬಹುದು. ಏತಕ್ಕೆಂದರೆ 'ವೇಂಕಟ' ಎನ್ನುವ ಪದಕ್ಕೆ ಒಂದು ಸರಿಯಾದ ವ್ಯಾಖ್ಯಾನವನ್ನು ನಾವು ಪುರಾಣಗಳಲ್ಲಿ ಕಾಣಲಾರೆವು.

ವರಾಹಾ ಪುರಾಣವು

ಸರ್ವ ಪಾಪಾನಿ ವೇಂ ಪ್ರಾಹುಃ ಕಟಸ್ತದ್ದಾಹ ಉಚ್ಯತೇ<br>
ಸರ್ವ ಪಾಪಾಪಹಾರಿತ್ವಾತ್ ವೇಂಕಟಾದ್ರಿರಿತಿಸ್ಮೃತಃ

ಎನ್ನುವುದಂತೆ.

'ವೇಂ' ಎಂದರೆ ಸರ್ವಪಾಪ ಎಂಬುದಾಗಿಯೂ, 'ಕಟ'ವೆಂದರೆ ದಹಿಸಲ್ಪಡುತ್ತದೆ ಎಂಬುದಾಗಿಯೂ ಅರ್ಥ. 'ವೇಂಕಟ'ವೆಂದಾಗ ಸರ್ವಪಾಪಗಳನ್ನೂ ದಹಿಸುವ ಜಾಗ ಎಂದು ಅರ್ಥ ಮಾಡಬಹುದು.

ವಾಮನ ಪುರಾಣದ ಪ್ರಕಾರ ಬೇರೊಂದು ವಿವರಣೆ ದೊರೆಯುತ್ತವೆ

ವಕಾರೋಽಮೃತಂ ಬೀಜಂತು ಕಟಮೈಶ್ವರ್ಯಮುಚ್ಯತೇ<br>
ಅಮೃತೈಶ್ವರ್ಯ ಸಂಘತ್ವಾತ್ ವೆಂಕಟಾದ್ರಿರಿತಿಸ್ಮೃತಃ

ವಕಾರವೆಂದರೆ ಅಮೃತವಂತೆ ; ಕಟವೆಂದರೆ ಐಶ್ವರ್ಯವೆಂದೂ ಈ ಅಮೃತ ಐಶ್ವರ್ಯಗಳ ಸಂಘಟನೆಯೇ ವೇಂಕಟವೆಂಬುದಾಗಿಯೂ ವ್ಯಾಖ್ಯಾನ ಮಾಡುತ್ತದೆ.

ಇದನ್ನು ಗಮನಿಸಿದಾಗ ಈ ಪುರಾಣಗಳ ಅರ್ಥ ಪರಸ್ಪರ ವಿರೋಧ ಗುಣಗಳನ್ನು ಹೊಂದಿರುವುದು ಕಂಡುಬರುತ್ತದೆ. ಒಂದು ಇಹಲೋಕ ವ್ಯಾಪಾರ ಗಳಿಂದ ಮುಕ್ತನಾಗಿ ಬಾಳುವ ಸ್ಥಿತಿಯನ್ನು ಅಪೇಕ್ಷಿಸಿದರೆ ಮತ್ತೊಂದು ಇಹಲೋಕದ ಭೋಗ ಭಾಗ್ಯಗಳನ್ನು ಇಚ್ಛಿಸುವ ಕಾಮ್ಯಾರ್ಥವನ್ನು ವಿವರಿಸುತ್ತದೆ. ಈ ಎರಡು ರೀತಿಯ ವಿವರಣೆಗಳ ಜಾಣತನವಾದರೂ ಏನು ? ಕವಿಯ ಜಾಣ್ಮೆಯೆ ? ವ್ಯಾಖ್ಯಾನಕಾರನ ಚಾತುರ್ಯವೆ ? ಇಲ್ಲ ಕವಿಯರಿಯದ, ರವಿಯೂ ಅರಿಯದ ಒಂದು ಹೊಸ ಸೃಷ್ಟನೆಯೆ ? 'ಸಂಕಟ ಬಂದಾಗ ವೆಂಕಟರಮಣ'ನೆನ್ನುವ ಗಾದೆಗನುಸಾರವಾಗಿ ಈ ಎರಡನೆಯ ರೀತಿಯ ಅರ್ಥ ಅನ್ವಯಗೊಳ್ಳುತ್ತದೆ ಯಲ್ಲವೆ ? ವೈರಾಗ್ಯವಂತನಿಗೆ ಮೊದಲನೆಯ ಅರ್ಥ. ಭವಪಾಶದಲ್ಲಿ ತೊಳಲು ತ್ತಿರುವವನಿಗೆ ಎರಡನೆಯ ಅರ್ಥ ಅನ್ವಯ. ದೇವರನ್ನು ಯಾವ ಇಷ್ಟಾರ್ಥ ವನ್ನಾದರೂ ಬೇಡಿ ಪಡೆಯಬಹುದು ಎನ್ನುವ ಭಾವ ಈ ಎರಡು ಸ್ತೋತ್ರಗಳಿಂದ ವ್ಯಕ್ತವಾಗುತ್ತದೆ. ಈ ಎರಡು ವಿಚಾರಕ್ಕಿಂತ ನಮ್ಮಾಳ್ವಾರ್ ಅವರ ಭಾವ ಸರಳವೂ ಸುಂದರವೂ ಆಗಿದೆ ಎಂದರೆ ತಪ್ಪಾಗಲಾರದು.

೪

ಈ ವೇಂಗಡಕ್ಕೆ ಪ್ರಾಚೀನ ಕಾಲದಿಂದಲೂ ಬಳಸಲ್ಪಡುವ ಮತ್ತೊಂದು ಹೆಸರು 'ತಿರುಮಲೆ' ಎಂಬುದಾಗಿ. ಶ್ರೀವೈಷ್ಣವ ಸಂಪ್ರದಾಯದಲ್ಲಿ 'ನೂರೆಂಟು ತಿರುಪತಿ'ಗಳಿದ್ದರೂ ಈ ತಿರುಪತಿಯೇ ತಿರುಪತಿಯಾದಂತೆ, 'ನೂರಾರು ಕೋಯಿಲ್'ಗಳಿದ್ದರೂ (ಎಂದರೆ ಗುಡಿ) ಶ್ರೀರಂಗದ ಗುಡಿಯೇ 'ಕೋಯಿಲ್' ಆದಂತೆ, ಹತ್ತಾರು 'ತಿರುಮಲೆ' (ದೊಡ್ಡಬೆಟ್ಟ)ಗಳಿದ್ದರೂ ಈ ಬೆಟ್ಟವೇ 'ತಿರುಮಲೆ'ಯಾಯಿತು ಎಂದು ಶ್ರೀ ರಾಮಚಂದ್ರರಾಯರು 'ತಿರುಪತಿ ತಿಮ್ಮಪ್ಪ'ದ ಎಂಟನೇ ಪುಟದಲ್ಲಿ ಬರೆದಿರುವಂತೆ ಇದೇ 'ತಿರುಮಲೆ' ಎನಿಸಲ್ಪಡು ತ್ತದೆ. ಆದರೆ ಅವರು ತಿಳಿದುಕೊಂಡಿರುವಂತೆ 'ತಿರುಮಲೆ' ಎಂದರೆ 'ದೊಡ್ಡಬೆಟ್ಟ' ಎಂದು ಅರ್ಥವಲ್ಲ !

ಈ 'ತಿರುಮಲೆ' ಎನ್ನುವ ಹೆಸರು ಪ್ರಾಚೀನ ಕಾಲದಿಂದಲೇ ಬಳಕೆ ಯಾಗಿದ್ದಿತು ಎನ್ನುವುದು ಮೊದಲಾಳ್ವಾರ್‌ಗಳಲ್ಲಿ ಮೂರನೆಯವರಾದ ಪೇಯಾಳ್ವಾರ್ ಅವರ 'ಮೂನ್ರಾಂ ತಿರುವಂದಾದಿ'ಯಿಂದ ಸ್ಪಷ್ಟಪಡುತ್ತದೆ.

ಆದರೆ ಶ್ರೀ ರಾಮಚಂದ್ರರಾಯರು ಈ 'ತಿರುಮಲೆ' ಎಂಬ ಹೆಸರನ್ನು ಗೊಂದಲ ಮಯವನ್ನಾಗಿಸಿದ್ದಾರೆ ತಮ್ಮ 'ತಿರುಪತಿ ತಿಮ್ಮಪ್ಪ' ಪುಸ್ತಕದಲ್ಲಿ !

ಅವರ ವಿವರಣೆ ಪುಟ ೭ರಲ್ಲಿ ಇಂತಿದೆ.

"ಈ ಬೆಟ್ಟಕ್ಕೆ ಈಗ ತಿರುಮಲೆಯೆಂದು ಹೆಸರು ಹೆಚ್ಚಾಗಿ ಹೊಂದಿಕೊಂಡು ಬಂದಿದೆ. ಈ ತಮಿಳು ಮಾತಿಗೆ 'ದೊಡ್ಡಬೆಟ್ಟ' (ಶ್ರೀಗಿರಿ) ಎಂದಷ್ಟೇ ಅರ್ಥವೆಂದು ಈಗಾಗಲೇ ತಿಳಿಸಿ ಆಗಿದೆ. ಇದು ಬೆಟ್ಟಕ್ಕೆ ಮೊದಲಿದ್ದ ಹೆಸರಲ್ಲ. ಕ್ರಿಸ್ತಾಬ್ದ ನಾಲ್ಕು, ಐದು ಶತಮಾನಗಳ ಸುಮಾರಿಗೆ ಇದ್ದಿರಬಹುದಾದ ಪೇಯಾಳ್ವಾರ್ ತಮ್ಮ ಪಾಶುರವೊಂದರಲ್ಲಿ (೬೧) 'ತಿರುಮಲೆ' ಎಂಬ ಮಾತನ್ನು ಬಳಸಿದ್ದಾರೆ. ಆದರೆ ಈ ಪಾಶುರದ ಪ್ರಾಮಾಣಿಕತೆಯ ಬಗ್ಗೆ ವಿವಾದವಿದೆ. ಅವರು ಬಳಸಿರಬಹುದಾದ 'ಪೆರುಮಲೈ' (ದೊಡ್ಡಬೆಟ್ಟ) ಎಂಬುದರ ಬದಲು 'ತಿರುಮಲೈ' ಎಂದು ಯಾರೋ ಲಿಪಿಕಾರರು ಕೂಡಿಸಿದ್ದಾರೆಂದು ಪಂಡಿತರು ಸೂಚಿಸುತ್ತಾರೆ. ಇದೊಂದು ಸಂದರ್ಭವನ್ನು ಬಿಟ್ಟರೆ ಇದೇ ಆಳ್ವಾರು ಉಳಿದೆಲ್ಲ ಕಡೆಗಳೆಲ್ಲೆಲ್ಲಾ ಈ ಬೆಟ್ಟವನ್ನು ವೇಂಗಡವೆಂದೇ ವ್ಯವಹರಿಸಿದ್ದಾರೆ. ಉಳಿದಂತೆ ಆಳ್ವಾರುಗಳಲ್ಲಿ ಯಾರೂ ಈ ಬೆಟ್ಟವನ್ನು 'ವೇಂಗಡ'ವೆಂದಲ್ಲದೆ ಬೇರೆ ಯಾವ ಹೆಸರಿನಿಂದಲೂ ಕರೆದಿಲ್ಲ. ನಮ್ಮಾಳ್ವಾರ್ ಏನೋ ತಿರುಮಲೈ ಎಂಬ ಹೆಸರನ್ನು ಬಳಸಿದ್ದಾರೆ (ತಿರುವಾಯ್ಮೊಳಿ (೨–೧೦–೪). ಆದರೆ ಅವರು ಈ ಮಾತಿನಿಂದ ನಿರ್ದೇಶಿಸಿರುವ ಬೆಟ್ಟ ಮಾಲಿರುಂಶೋಲೈನ ನೆರೆಯಲ್ಲಿರುವ ಬೆಟ್ಟ. ಎಂದರೆ ಎಂಟು ಒಂಭತ್ತನೆಯ ಶತಮಾನದವರೆಗೂ ಬೆಟ್ಟ ವೇಂಗಡವೆಂದೇ ಪ್ರಸಿದ್ಧವಾಗಿದ್ದಿತು.

ದೊರೆತಿರುವ ಶಾಸನಗಳಲ್ಲಿ 'ತಿರುಮಲೆ'ಯೆನ್ನುವ ಹೆಸರು ಮೊಟ್ಟಮೊದಲು ಕಾಣಿಸಿಕೊಳ್ಳುವುದು ಕ್ರಿಸ್ತಾಬ್ಧ ೧೦೦೩ರ ಸುಮಾರಿಗೆ. ತಮಿಳು ಶಾಸನದಲ್ಲಿ ತಿರುಮಲೆಯೆಂದು ಪ್ರಸ್ತಾಪ ಬಂದರೂ ದೇವರನ್ನು ಮಾತ್ರ ತಿರುವೇಂಗಡ ದೇವರು ಎಂದೇ ಕರೆಯಲಾಗಿದೆ...... ಕ್ರಿ. ಶ. ೧೨೦೯–೧೧ರ ಶಾಸನವೊಂದರಲ್ಲಿ ತಿರುಮಲೆ ದೇವಸ್ಥಾನದ ಪ್ರಸ್ತಾಪವಿದ್ದರೂ ತಿರುವೇಂಗಡ ಮುಡೈಯಾನ್ ಎಂದೇ ಉಲ್ಲೇಖಿಸಲಾಗಿದೆ.

ಮುಂದೆಯೂ ತಿರುಮಲೆಯೆಂಬ ಹೆಸರು ವಿಜಯನಗರದ ಅರಸರ ಕಾಲದಲ್ಲೇ ಹೆಚ್ಚಾಗಿ ಕಾಣಿಸಿಕೊಳ್ಳುವುದು........." ಇತ್ಯಾದಿ !

ಶ್ರೀ ರಾಮಚಂದ್ರರಾಯರ ವಾದ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ ವೆಂದು ಮೇಲಿನ ಸರಣಿಯಿಂದಲೇ ತಿಳಿಯುತ್ತದೆ. ಮೊದಲಾಳ್ವಾರ್ ಕಾಲಕ್ಕೆ 'ತಿರುಮಲೆ' ಎಂದು ಉಪಯೋಗಿಸಲ್ಪಟ್ಟಿರುವ ಪದ ತಪ್ಪೆಂಬುದಾಗಿಯೂ ಅದಕ್ಕೆ ಬದಲಾಗಿ 'ಪೆರುಮಲೆ' ಎಂಬ ಪ್ರಯೋಗವು ಸಾಧು ಎಂದ ರಾಯರು ಇದಕ್ಕೆ

ಪಂಡಿತರ ಸಮ್ಮತಿಯನ್ನೂ ಹೇಳಿ ಮುಂದೆ, ಶಾಸನಗಳಲ್ಲಿ ತಿರುಮಲೆ ಎಂಬ ಪದ ಪ್ರಯೋಗವನ್ನು ಕಾಣಿಸಿ, ಆ ಹೆಸರು ಬಳಕೆಗೆ ಬಂದಿದೆ ಎಂದಿದ್ದಾರೆ. ಎಂದಾಗ ತಿರುಮಲೆ ಎನ್ನುವ ಪದ ಸರಿಯಾದದ್ದೇ, ತಪ್ಪಾಗಿ ಉಪಯೋಗಿಸಿದ ಪದವಲ್ಲ ಎನ್ನುವುದು ಸ್ಥಿರವಾಗಲಿಲ್ಲವೇ. ಆದ್ದರಿಂದ ಆಳ್ವಾರ್ ಪ್ರಯೋಗ ಮಾಡಿರುವ ತಿರುಮಲೈ ಸರಿಯಾದ ಪ್ರಯೋಗವೆಂದೇ ಸಿದ್ಧವಾಗುವುದಲ್ಲವೇ ?

'ತಿರು' ಎಂದರೆ 'ಶ್ರೀ' ಎಂಬ ಅರ್ಥವಿದೆ. ಆದರೆ 'ದೊಡ್ಡದು' ಎನ್ನುವ ಅರ್ಥ ಬರುವುದಿಲ್ಲ. ಪೆರುಮಲೆಗೆ ಯಾರೋ ತಪ್ಪಾಗಿ ತಿರುಮಲೆ ಪ್ರಯೋಗಿಸಿದ್ದಾರೆಂದು ಶ್ರೀ ರಾಮಚಂದ್ರರಾಯರ ಹೇಳಿಕೆ. ಈ ಪದ್ಯವೇ ಪ್ರಕ್ಷಿಪ್ತವೆಂದೂ ರಾಯರು ಹೇಳುತ್ತಾರೆ. ಎಂದರೆ ಈ ಆಳ್ವಾರ್ ೯೯ ಪಾಶುರಗಳನ್ನು ರಚಿಸಿರುವರೆಂದೆ ರಾಯರ ಅಭಿಪ್ರಾಯ ? ೯೯ ಪಾಶುರಗಳು ಯಾವ ಲೆಖ್ಖ– ಅದೂ ಬೇರೆ ಆಳ್ವಾರುಗಳು ೧೦೦ ಪಾಶುರಗಳನ್ನು ರಚಿಸಿರುವಾಗ ? ಅವರ ವಾದದ ಪ್ರಕಾರ (೧) ತಿರುಮಲೆ ತಪ್ಪು ಪೆರುಮಲೆ ಇರಬೇಕು. (೨) ಪೇಯಾಳ್ವಾರ್ ವಿರಚಿತ ಮೂನ್ರಾಂ ತಿರುವಂದಾದಿಯಲ್ಲಿ ಒಂದು ಕಡೆ ಮಾತ್ರ ಈ 'ತಿರುಮಲೆ' ಎನ್ನುವ ಪ್ರಯೋಗ ಬಂದಿದೆ. (೩) ಮತ್ತಾವ ಆಳ್ವಾರ್‌ಗಳೂ ಈ ಹೆಸರನ್ನು ಪ್ರಸ್ತಾಪಿಸಿಲ್ಲ. (೪) ಕ್ರಿ.ಶ. ೧೦೧೩ರಲ್ಲೇ ಈ ಹೆಸರು ಮೊದಲಿಗೆ ಶಾಸನಗಳಲ್ಲಿ ಕಾಣಿಸಿಕೊಳ್ಳುವುದು. (೫) ಎಂಟು ಒಂಭತ್ತನೆಯ ಶತಮಾನದವರೆಗೂ ಬೆಟ್ಟ ವೇಂಗಡವೆಂದೇ ಪ್ರಸಿದ್ಧವಾಗಿದ್ದಿತು. ಅದಕ್ಕೆ ಹಿಂದೆ ಈ ತಿರುಮಲೆ ಎಂಬ ಹೆಸರೇ ಇರಲಿಲ್ಲ, ಆ ಬೆಟ್ಟಕ್ಕೆ !

ಮೇಲೆ ತಿರುಮಲೆ ಎನ್ನುವ ಪದ ಈ ಬೆಟ್ಟಕ್ಕೆ ಅನ್ವಯುವಾಗುತ್ತದೆ, ತಪ್ಪಾಗಿ ಪ್ರಯೋಗಿಸಲ್ಪಟ್ಟಿಲ್ಲವೆಂದು ರಾಯರ ಹೇಳಿಕೆಯಿಂದಲೇ ಸಿದ್ಧಪಡಿಸಿದ್ದಾಯಿತು. ರಾಯರು ಹೇಳುವಂತೆ ಪೇಯಾಳ್ವಾರ್ ಅವರ ಮೂನ್ರಾಂತಿರುವಂದಾದಿಯಲ್ಲಿ ಒಂದು ಪದ್ಯದಲ್ಲಿ ಮಾತ್ರ ತಿರುಮಲೆ ಎನ್ನುವ ಪದ ಬಳಕೆಯಾಗಿಲ್ಲ. ಆದರೆ ೬೩ ಮತ್ತು ೭೫ನೇ ಪಾಶುರಗಳಲ್ಲಿ ಎರಡು ಜಾಗಗಳಲ್ಲಿ 'ತಿರುಮಲೆ' ಎನ್ನುವ ಪದ ಪ್ರಯೋಗಿಸಲ್ಪಟ್ಟಿದೆ.

ತಾಟ್ ಶಡ್ಯೆಯುಂ ನೀಳ್ ಮುಡಿಯುಂ ಒಣ್ ಮುಟಿವುಂಶಕ್ಕರಮುಂ
ಶೂಟ್ ಅರವುಂ ಪೊನ್ ನಾಣುಂ ತೋನ್‌ಜುಂ ಆಲ್ – ಶೂಟುಂ
ತಿರಂಡು ಅರುವಿ ಪಾಯುಂ ತಿರುಮಲೈ ಮೇಲ್ ಎಂದೈಕ್ಕು
ಇರಂಡುರುವುಂ ಒನ್‌ಜಾಯ್ ಇಶೈಂದು || ೬೩ ||

ಶಾರ್ನ್ದ ಅಹಡು ತೇಯ್ಪ್ಪತಪಾವಿಯು ಕೊಟ್ಟು ಉಚ್ಚಿವಾಯ್
ಊರ್ನ್ದು ಇಯಂಗು ವೆಣ್ಮದಿಯಿನ್ ಒಣ್ ಮುಯಲ್ಲೈ ಶೇನ್ದ್ರು
ಶಿನವೇಂಗ್ಯೆ ಪಾರ್ಕುಂ ತಿರುಮಲ್ಲೈಯೋ ಅಯುನ್
ಪುನವೇಂಗ್ಯೆ ನಾಱುಂ ಪೊರುಪ್ಪು ॥ ೭೫ ॥

ಶ್ರೀ ರಾಮಚಂದ್ರರಾಯರು ಈ ಹರಿಹರ ಅಭೇದದ ಪಾಶುರ (೭೩)ವನ್ನು ತಿರುವೇಂಗಡನಾಥನಿಗೆ ಆರೋಪಿಸಿ ವೈಷ್ಣವರಾದ ಪೇಯಾಳ್ವಾರ್ ಬರೆದಿರಲಾರ ರೆಂಬ ಊಹೆಯಿಂದ ಮೇಲಿನ ವಾದವನ್ನು ಮುಂದಿಟ್ಟಿದ್ದಾರೆಂದು ತಿಳಿಯಂ ಬೇಕಾಗಿದೆ. ನಿಜ, ಪೇಯಾಳ್ವಾರ್ ಅವರ ಈ ಪಾಶುರ ಒಂದೇ ವಿಚಿತ್ರವಾಗಿದೆ. ಅದನ್ನು ಮುಂದೆ ಚರ್ಚಿಸೋಣ. ಅಂತೂ ಪೇಯಾಳ್ವಾರ್ ತಿರುಮಲೆ ಎಂದು ಬಳಸಿರುವ ಪದದ ಪಾಶುರಗಳು ಒಂದಲ್ಲ ಎರಡಿವೆ ಎಂದಾಯಿತು. ಆದ್ದರಿಂದ ತಿರುಮಲೆ, ಪೆರುಮಲೆ ಎನ್ನುವ ಪದಕ್ಕೆ ತಪ್ಪಾಗಿ ಪ್ರಯೋಗಿಸಿಲ್ಲ ಎಂದೂ ಸಿದ್ಧವಾಯಿತು. ಇದು ಬೇರೊಬ್ಬರ ಕೈವಾಡವಲ್ಲ. ಆಳ್ವಾರ್ ಅವರು ಸ್ವತಹ ಪ್ರಯೋಗಿಸಿದ್ದಾರೆ ಎಂದು ದೃಢವಾಗಿ ಹೇಳಬಹುದು ಅಲ್ಲವೆ?

ಇನ್ನು ಈ 'ತಿರುಮಲೆ' ಎನ್ನುವ ಪದವನ್ನು ಮತ್ತೊಬ್ಬ ಆಳ್ವಾರರೂ ಈ ಬೆಟ್ಟವನ್ನು ಕುರಿತೇ ಪ್ರಯೋಗಿಸಿದ್ದಾರೆ. ತಿರುಮಂಗೈ ಆಳ್ವಾರ್ ತಮ್ಮ ತಿರುಕ್ಕುರುಂದಾಂಡಗಂ ಪ್ರಬಂಧದಲ್ಲಿನ ೭ನೇ ಪಾಶುರದಲ್ಲಿ ತಿರುಮಲೆಯ ಪ್ರಸ್ತಾಪ ಮಾಡುತ್ತಾರೆ.

ಇಮ್ಮೈಯೈ ಮಱುಮೈ ತನ್ನೈ ಎಮಕ್ಕು ವೀಡಾಹಿನಿನ್ಱ
ಮೆಯ್ಮ್ಮೈಯೈವಿರಿಂದ ಶೋಲೈವಿಯುನ್ ತಿರುವರಂಗಂವೋಯು
ಶೆಮ್ಮೈಯೈ, ಕರುಮೈ ತನ್ನೈ ತಿರುಮಲೈ ಒರುಮೈಯಾನೈ
ತನ್ಮೈಯೈ, ನಿನೈವಾರ್ ಎನ್ ತನ್ ತಲೈಮಿಶೈ ಮನ್ನುವಾರೇ ॥ ೭ ॥

ಈ ಸಂದರ್ಭದಿಂದ ಇದು ತಿರುಪತಿ ಬೆಟ್ಟಕ್ಕೇ ಉಪಯೋಗಿಸಿರುವ ಪದ ವೆನ್ನಬಹುದು – ನಮ್ಮಾಳ್ವಾರ್ ತಿರುವಾಯ್ಮೊಳಿಯ (೨–೧೦–೪) ಪಾಶುರದಲ್ಲಿ ತಿರುಮಲೈ ಮಾಲಿರುಂಶೋಲೈಗೇ ಅನ್ವಯಗೊಂಡಿರುವುದು ಆ ಸಂದರ್ಭದಿಂದ ಅರಿವಾಗುವಂತೆ! ಆದ್ದರಿಂದ ತಿರುಮಲೈ ಎನ್ನುವ ಪದಪ್ರಯೋಗ ಪ್ರಾಚೀನ ಕಾಲದಿಂದಲೂ ಈ ಬೆಟ್ಟಕ್ಕೆ ಬಳಸುವ ಒಂದು ಹೆಸರು ಎಂಬುವುದು ತಿಳಿದು ಬರುತ್ತದೆ.

ಇದನ್ನು ಗಮನಿಸಿದಾಗ ಪೆರುಮಲೆಗೆ ಬದಲಾಗಿ ತಿರುಮಲೆ ಖಂಡಿತ ವಾಗಿಯೂ ತಪ್ಪಾಗಿ ಉಪಯೋಗಿಸಲ್ಪಟ್ಟಿಲ್ಲವೆಂದು ನಿರ್ಧಾರವಾಗಿ ನಾವು ಹೇಳ ಬಹುದು. 'ತಿರು' ಎನ್ನುವ ಪದ ಕೇವಲ 'ಶ್ರೀ' ಎಂಬ ಅರ್ಥದಿಂದಲಾಗಲೀ, ದೊಡ್ಡ ಎನ್ನುವ ಅರ್ಥದಿಂದಲಾಗಲೀ ಬಳಸಲ್ಪಡುವುದಿಲ್ಲ. ಅದಕ್ಕೆ ಬೇರೆ ಅರ್ಥ

ಹೊಂದಿದೆ ಎನ್ನುವುದು ತಿಳಿಯುತ್ತದೆ. ನಿಜ, ತಿರು ಎಂದರೆ ಶ್ರೀ ಅಥವಾ ಲಕ್ಷ್ಮಿ ಎನ್ನುವುದು ಒಂದು ಅರ್ಥ. ಆದರೆ ದೊಡ್ಡ ಎನ್ನುವ ಅರ್ಥ ಎಲ್ಲಿಯೂ ಹೇಳಿರುವಂತೆ ನನಗೆ ಗೊತ್ತಿಲ್ಲ; ಭಾಷಾಕೋವಿದರು ಹೇಳಬೇಕು. ಆದರೆ ತಿರು ಎನ್ನುವುದನ್ನು ಮತ್ತೊಂದು ಅರ್ಥದಲ್ಲಿ ಶ್ರೀವೈಷ್ಣವರು ಬಳಸುತ್ತಾರೆ. ಅದೇ 'ಪವಿತ್ರ' ಅಥವಾ 'ಶ್ರೇಷ್ಠ' ಎನ್ನುವ ಅರ್ಥ. ಆದ್ದರಿಂದ ತಿರುಮಲೆ ಎಂದಾಗ ಶ್ರೇಷ್ಠವಾದ, ಪವಿತ್ರವಾದ ಬೆಟ್ಟ ಎನ್ನುವ ಅರ್ಥ ಬರುತ್ತದೆ. ಇದೇ ಅರ್ಥದಿಂದಲೇ ನಮ್ಮಾಳ್ವಾರ್ ತಿರುಮಾಲಿರುಂ ಶೋಲೈ ಅನ್ನು ತಿರುಮಲೈ ಎಂದು ಕರೆದಿರುವುದು. ಇದು ಸಮಂಜಸವಾದ ಅರ್ಥವೆನಿಸುತ್ತದೆ. ಈ ಅರ್ಥ ಬಂದಾಗ ತಿರುಮಲೆ ಎನ್ನುವುದೇ ಸರಿಯಾದ ಪದವಾಗುತ್ತದೆ. ಎಲ್ಲಾ ಶ್ರೇಷ್ಠವಾದ ಮಲೆಗೂ ತಿರುಮಲೆ ಎಂದೇ ಕರೆಯಬಹುದು; ಆದರೆ ಬಳಕೆಯಿಂದ ತಿರುಪತಿಯ ಬೆಟ್ಟಕ್ಕೆ ಈ ಹೆಸರು ಅನ್ವಯಗೊಳ್ಳುತ್ತದೆ ಎಂದು ಮೇಲಿನ ಉದಾಹರಣೆಯಿಂದ ಕಂಡುಕೊಳ್ಳಬಹುದು. ಪೆರುಮಲೆ ಎಂದು ಇರಬೇಕಿತ್ತು ಎನ್ನುವ ವಾದ ತಪ್ಪಾಗುತ್ತದೆ. ತಿರುಮಲೆ ಎನ್ನುವ ಪದಕ್ಕೇನೋ ಸಮಾನ ಸಂಸ್ಕೃತ ಪದ ಶ್ರೀಶೈಲ ಎಂಬುದಾಗಿ. ಶ್ರೀವೈಷ್ಣವರು ತಿರುಪತಿಯ ಬೆಟ್ಟವನ್ನು 'ಶ್ರೀಶೈಲ'ವೆಂದೇ ಉಲ್ಲೇಖಿಸಿದ್ದಾರೆ. 'ಶ್ರೀಶೈಲಮಂಜನಗಿರಿಂ' ಎಂದು ತಿರುಮಲೆಯನ್ನು ನಿರ್ದೇಶ ಮಾಡಿದ್ದಾರೆ. ಈ ಶ್ರೀಶೈಲವನ್ನು ಕರ್ನೂಲಿನ ಶ್ರೀಶೈಲಕ್ಕೆ ಅವರು ಬಳಸಿಲ್ಲ. ಶ್ರೀವೈಷ್ಣವರ ಪ್ರಕಾರ ತಿರುಪತಿಯ ಬೆಟ್ಟ ಶ್ರೀಶೈಲವಲ್ಲದೆ ಬೇರೆ ಬೆಟ್ಟವನ್ನು ಶ್ರೀಶೈಲವೆಂದು ಹೆಸರಿಸಿರುವುದು ಅವರಿಗೆ ವ್ಯವಹಾರದಲ್ಲಿ ಬಂದಿಲ್ಲ; ತಿಳಿದಿಲ್ಲ. ಶ್ರೀ ಸಂಬಂಧವಾದ ಬೆಟ್ಟದಲ್ಲಿ ಮಲ್ಲಿಕಾರ್ಜುನನು ನೆಲಸಿರುವುದು ಹೇಗೆಂಬುದಾಗಿ ಶಿವಭಕ್ತರು ತಿಳಿಸಬೇಕಾದ ವಿವರಣೆ! ಆದರೆ ಶ್ರೀ ಎಂದರೆ ಶ್ರೇಷ್ಠ ಎನ್ನುವ ಅರ್ಥದಲ್ಲೇ ಶ್ರೀಶೈಲದಲ್ಲಿ 'ಶ್ರೀ' ಉಪಯೋಗಿಸಲ್ಪಟ್ಟಿರುವುದು.

ಇನ್ನೊಂದು ವಿಚಾರ. ಆಳ್ವಾರುಗಳು ದೊಡ್ಡಬೆಟ್ಟ ಎನ್ನಬೇಕಾದರೂ ಸಹ ಎಲ್ಲಿಯೂ ಪೆರುಮಲೈ ಎಂದು ವ್ಯವಹರಿಸಿರುವುದು ಕಂಡುಬಂದಿಲ್ಲ. ಮಾಮಲೈ ಎಂಬ ಪದದಲ್ಲೇ ಈ ಅರ್ಥದ ನಿರ್ದೇಶ ಮಾಡಿದ್ದಾರೆ. 'ಮಾ' ಎಂದರೆ 'ಮಹಾ' ಅಥವಾ 'ಹಿರಿದಾದದ್ದು' ಎಂದು ಅರ್ಥ.

ಒಣ್ಣಾದಲ್ ಮಾಪ್ಪೊಯೆಳುಪಿಯಂವಾಪ್ಪೈ ವಿರೈನ್ದು ನನ್ದೇರ್
ವಣ್ಣಾದಲ್ ವೇಣ್ಡುಮ್ ವಲವ! ಕಡಾಗಿನ್ಱು ತೇನ್ ನವಿನ್ಱ
ವಿಣ್ಮುದಲ್ ನಾಯಗನ್ ನೀಳ್ಮುಡಿವೆಣ್ ಮುತ್ತವಾಶಿಗೈತ್ತಾಯ್
ಮಣ್ಮುದಲ್ ಶೇರ್ವುಟ್ರುವಾ
ಅರುವಿಶೆಯ್ಯಾನಿಱ್ಕುಂ ಮಾಮಲೈಕ್ಕೇ ॥ ೫೦ ॥

ಈ 'ತಿರು'ವಾಚಕವನ್ನು ತಮಿಳುನಾಡಿನ ಜನ ಪವಿತ್ರ, ಶ್ರೇಷ್ಠ ಎನ್ನುವ ಅರ್ಥ ಒಂದರಿಂದಲೇ ಬಳಸುವ ವಿಚಾರ ಅವರು ಇಟ್ಟಿರುವ ಅನೇಕ ಹೆಸರುಗಳಿಂದಲೇ ತಿಳಿಯುತ್ತದೆ. ಆಳ್ವಾರ್ ಪ್ರಬಂಧಗಳ ಪ್ರಾರಂಭವೆಲ್ಲಾ 'ತಿರು' ವಾಚಕದಿಂದಲೇ ಪ್ರಾರಂಭವಾಗಿರುವುದನ್ನು ವಾಚಕರು ಈ ವೇಳೆಗಾಗಲೇ ಗಮನಿಸಿರಬಹುದು. 'ತಿರುಮಾಲ್' ಎಂದು ದೇವರನ್ನು ಕರೆಯುತ್ತಾರೆ. 'ತಿರುವೀಧಿ' ಎಂದರೆ ಶ್ರೇಷ್ಠವಾದ ರಸ್ತೆ. 'ತಿರುವಾಳಿಗೆ' ಎಂದರೆ ಶ್ರೇಷ್ಠವಾದ ಮನೆ. ತಿರುತ್ತೇರ್ ಎಂದು ರಥಕ್ಕೆ ಹೇಳುತ್ತಾರೆ. ಇಲ್ಲೆಲ್ಲಾ ಶ್ರೇಷ್ಠ ಎಂದು ಒಂದು ಅರ್ಥವಾದರೆ ಗೌರವಕ್ಕಾಗಿಯೂ ಹೇಳುವ ವಾಚಕ ಇದು ಎಂದೂ ವಿದಿತಗೊಳ್ಳುತ್ತದೆ. ನಿಮ್ಮ ಮನೆ ಎಲ್ಲಿದೆ? ಎಂದು ಕೇಳಬೇಕಾದರೆ ಸಂಪ್ರದಾಯಸ್ಥ ಶ್ರೀವೈಷ್ಣವರು 'ದವರುಡೆಯ ತಿರುವಾಳಿಗೈ ಎಂಗೇ' [ತಮ್ಮ ತಿರುವಾಳಿಗೆ (ಮನೆ) ಎಲ್ಲಿ] ಎಂದೇ ಹೇಳುವುದು. ಇದು ಒಂದು ಸಂಸ್ಕೃತಿಯ ರೂಪ. ಗೋವಿಂದನ್ ತಿರುಮಲೈ, ಅಳಗರ್ ತಿರುಮಲೈ ಎಂದು ಬೆಟ್ಟಗಳನ್ನು ಗೌರವದಿಂದಲೇ ಕರೆಯುವುದು. ಸ್ನಾನ ಮಾಡುವ ಕೊಳವನ್ನು ತಿರುಕ್ಕಲ್ಯಾಣಿ ಎನ್ನುವರು. ಅಭಿಷೇಕಕ್ಕೆ ತಿರುಮಂಜ್ಜನಂ ಎನ್ನುವರು. ಊರುಗಳಿಗೆ ಶ್ರೇಷ್ಠತೆಯನ್ನು ಸೂಚಿಸಲು ತಿರುಪ್ಪದಿ, ತಿರುಕ್ಕೋಟ್ಟಿಯೂರ್, ತಿರುವಾರೂರ್, ತಿರುಚ್ಚಿರಪ್ಪಳ್ಳಿ ತಿರುನಲ್ವೇಲಿ, ತಿರುವಣ್ಣಾಮಲೈ ಎನ್ನುವ ಬಳಕೆ ಕಾಣಬಹುದು.

ಇದೇ ರೀತಿ 'ಪೆರು' ಎನ್ನುವ ಪದದ ಬಳಕೆ ದೊಡ್ಡದು ಎನ್ನುವ ಅರ್ಥದಲ್ಲಿ 'ಪೆರುಂಗತ್ತೈ', 'ಪೆರುಮಾನ್', 'ಪೆರುಮಾಯನ್', 'ಪೆರುಂದೇವಿ' ಮುಂತಾದ ಜಾಗಗಳಲ್ಲಿ ಪ್ರಯೋಗಗೊಳ್ಳುತ್ತದೆ. ಈ ರೀತಿ 'ತಿರು'ವಿಗೂ, 'ಪೆರು'ವಿಗೂ ಅರ್ಥಾರ್ಥ ಸಂಬಂಧವಿಲ್ಲದಿರುವಾಗ ಒಂದಕ್ಕೆ ಇನ್ನೊಂದು ಪದ ತಪ್ಪಾಗಿ ಬಳಸಲ್ಪಟ್ಟಿದೆ ಎನ್ನುವ ವಾದವೇ ಸಾಧುವಲ್ಲದ್ದು ; ಅರ್ಥವಿಲ್ಲದ್ದು.

ಇನ್ನು ತಿರುಮಲೆ ಎನ್ನುವ ಹೆಸರು ಕ್ರಿ.ಶ. ೧೦೧೩ರ ಸುಮಾರಿಗೆ ಶಾಸನದಲ್ಲಿ ಬಳಸಲ್ಪಟ್ಟಿದೆ. ಅಲ್ಲಿಯವರೆಗೂ ಅದೊಂದು ಅಜ್ಞಾತ ಪದ, ಯಾರಿಗೂ ತಿಳಿದೇ ಇರಲಿಲ್ಲ ಎನ್ನುತ್ತಾರೆ ಶ್ರೀ ರಾಯರು. ತಿರುಮಲೆ ಎನ್ನುವ ಪದ ರಾಮಾನುಜರ ಕಾಲಕ್ಕಿಂತ ಈಚಿನದು ಎಂದು ಮತ್ತೊಂದು ಜಾಗದಲ್ಲಿ ಹೇಳಿದಂತೆ ನೆನಪು. ಆದರೆ ಬಹಳ ಹಿಂದೆಯೇ ತಿರುಮಲೆ ಎನ್ನುವ ಪದ ರೂಢಿಯಲ್ಲಿರುವುದನ್ನು ಈ ಕೆಳಗಿನ ದೃಷ್ಟಾಂತಗಳಿಂದ ತಿಳಿಯಬಹುದು. ರಾಮಾನುಜರ ಸೋದರ ಮಾವನವರ ಹೆಸರು ತಿರುಮಲೆ ನಂಬಿ ಎಂಬುದಾಗಿ. ರಾಮಾನುಜರು ಪ್ರಾಯಕ್ಕೆ ಬಂದಾಗ ಈತ ಎಂಬತ್ತು ವರ್ಷ ವಯಸ್ಸಿನ ಹಣ್ಣು ಹಣ್ಣು ಮುದುಕರಾಗಿದ್ದರು. ರಾಮಾನುಜರ ಹಿಂದಿನವರು ಯಾಮುನಾಚಾರ್ಯರ ಶಿಷ್ಯರು ಎಂದಾಗ ಯಾಮುನಾಚಾರ್ಯರಿಗೂ ತಿರುಮಲೆ ಎನ್ನುವ ಪದ ಗೊತ್ತಿದ್ದಿತು ಎನ್ನಬಹುದು.

'ಮೈಸೂರು ಕೈಪಿಡಿ' ಎನ್ನುವ ಪುಸ್ತಕದಲ್ಲಿ ಶ್ರೀರಂಗಪಟ್ಟಣದ ದೇವಸ್ಥಾನವನ್ನು ಕ್ರಿ.ಶ. ೮೯೪ರಲ್ಲಿ ಗಂಗರಾಜ ಪ್ರತಿನಿಧಿ ತಿರುಮಲೈಯ್ಯ ನೆಂಬುವವನು ನಿರ್ಮಾಣ ಮಾಡಿರುವುದಾಗಿ ಉಲ್ಲೇಖಗೊಂಡಿದೆ. ಎಂದಾಗ ತಿರುಮಲೆಯ ಹೆಸರನ್ನು ಜನರು ತಮ್ಮ ಹೆಸರಿಗೆ ಬಳಸಿಕೊಳ್ಳುವ ರೂಢಿ ಆ ಕಾಲಕ್ಕೇ ಬಂದಿತ್ತು. ಎಂದರೆ ತಿರುಮಲೆ ಎಂದು ತಿರುಪತಿಯ ಇನ್ನೊಂದು ಹೆಸರು ಲೋಕಕ್ಕೇ ತಿಳಿದಿದ್ದಿತು ಎನ್ನುವುದರ ಅರಿವಾಗುತ್ತದೆ. ಆದ್ದರಿಂದ ತಿರುಮಲೆ ಎನ್ನುವ ಪದ ೧೦೧೩ರಿಂದ ಈಚೆಗೆ ವ್ಯಕ್ತಗೊಂಡಿದ್ದು ಎನ್ನುವ ವಾದ ಎಂತಹ ವಿಪರ್ಯಾಸಕಾರಿಯಾದದ್ದು ಎನ್ನುವುದು ಸ್ಪಷ್ಟವಾಗುತ್ತದೆ.

ಮೊದಲಾಳ್ವಾರ್‌ರೇ ತಿರುಮಲೆ ಎಂದು ಕರೆದಿರಬೇಕಾದರೆ ಈ ಹೆಸರಿನ, ಈ ಗಿರಿಯ ಪ್ರಾಚೀನತೆ ಬಹು ಹಿಂದಕ್ಕೆ ಸರಿಯುತ್ತ ಹೋಗುತ್ತದೆಯಲ್ಲದೆ ರಾಯರ ಹೇಳಿಕೆಯಂತೆ ವಿಜಯನಗರದ ಕಾಲಕ್ಕೆ ಮುಂದುವರಿಯುತ್ತಾ ಬರುವುದಿಲ್ಲವಲ್ಲವೇ ?

೫

ಹೀಗೆ ತಿರುಮಲೆ ಅಥವಾ ವೇಂಗಡದ ಪ್ರಾಚೀನತೆ ಬಹಳ ಹಿಂದಕ್ಕೆ ಸರಿಯುತ್ತಾ ಸಾಗುತ್ತದೆ. ಈ ವೇಂಗಡದ ಪ್ರಸ್ತಾಪ ತಮಿಳಿನ ಲಕ್ಷಣ ಗ್ರಂಥವಾದ 'ಶಿರಪ್ಪಾಯಿರಂ'ನಲ್ಲೇ ಇದ್ದು ಅಲ್ಲಿ 'ಪನಂಪರನಾರ್' ಎನ್ನುವ ಕವಿಯು ತಮಿಳು ದೇಶದ ಗಡಿಯನ್ನು ನಿರ್ದೇಶ ಮಾಡುತ್ತಾ ವಿವರಿಸಿದ್ದಾನಂತೆ. ಇವನ ಹೇಳಿಕೆಯ ಪ್ರಕಾರ 'ವಡವೇಂಗಡಂ' 'ತೆನ್‌ಕುಮರಿ' ತಮಿಳುನಾಡಿನ ಸೀಮಾರೇಖೆಗಳಂತೆ (ಬಡಗುದಿಕ್ಕಿಗೆ ವೇಂಗಡವೂ, ದಕ್ಷಿಣಕ್ಕೆ ಕನ್ಯಾಕುಮಾರಿಯೂ) – ನಮ್ಮ ಕನ್ನಡನಾಡಿಗೆ ಕಾವೇರಿ ಗೋದಾವರಿಗಳು ಕವಿಯಿಂದ ನಿರ್ದೇಶಿಸಲ್ಪಟ್ಟಿರುವ ಗಡಿರೇಖೆಗಳಂತೆ ! 'ಅಹನಾನೂರು' ಎನ್ನುವ ಪುರಾತನ ಗ್ರಂಥದಲ್ಲಿ —

ಕಟಲ್ ಪುನೈ ತಿರುನ್ದಡಿಕ್ಕಳ್ವರ್ ಕೋಮಾನ್
ಮಟಪುಲಂ ವಣಕ್ಕಿಯ ಮಾವಣ್ ಪುಲ್ಲಿ
ವಿಟವುಡೈ ವಿಟುಚ್ಚೀರ್ ವೇಂಗಡ ವೆಂದುಮ್
ವಟಗುವರಾದಲೋ ಅರಿದ್

ಎಂಬುದಾಗಿಯೂ "ವೇನ್‌ವೇಲ್ ತಿರೈಯಿನ್ ವೇಂಗಡ ನೆಡುವರೈ" ಎಂದೂ ಮತ್ತು "ವಿನೈನವಿಲ್‌ಯಾನೈ ವೀರರ್ ಪೋೞರ್ ತೊಂಡೆಯರ್ ಇನಮಟ್ಟಿ ತವಟುಂ ಎಟ್ರೂರುನೆ ಡುಂಗೊಟ್ಟು ಓಂಗುವೆಳ್ಳರವಿ ವೇಂಗಡತ್ತುಂಬರ್" ಎಂಬತ

ಪ್ರಶಂಸೆ ಮಾಡಲ್ಪಟ್ಟಿದೆ. ಈ ಗ್ರಂಥ ಎರಡನೇ ಶತಮಾನದ ಆದಿ ಕಾಲದ್ದು. "ನಡುಸಂಘ"ವೆನ್ನುವ ತಮಿಳು ಭಾಷೆಯ ಒಂದು ಯುಗಕ್ಕೆ ಸೇರಿದ ಸಾಹಿತ್ಯ.

ಮತ್ತೊಂದು ಎಡೆ ವೇಂಗಡದ ಮೇಲೆ ಅಂದಿನ ಕಾಲಕ್ಕೆ ವೈಭವಯುತವಾಗಿ ನಡೆಯುತ್ತಿದ್ದ ಜಾತ್ರೆಯ ವೈಭವ ಚಿತ್ರವನ್ನು ತಮಿಳು ಗ್ರಂಥ ವರ್ಣಿಸುತ್ತದೆ. ತಿರುವೇಂಗಡವನ್ನು ಇಲ್ಲಿ ಅತೀವ ಪ್ರಶಸ್ತವಾದ ಪರ್ವತವೆನ್ನಲಾಗಿದೆ. ಈ ಕಾಲದ 'ಶಿಲಪ್ಪಧಿಕಾರಂ'ನಲ್ಲಿ ಬರುವ 'ಮಾಂಗಾಟ್ಟು ಮರೈಯನ್ ಕೂತ್ತು' ಎನ್ನುವ ಭಾಗದಲ್ಲಿ ವೇಂಗಡದ ವರ್ಣನೆ ಈ ರೀತಿ ಇರುವುದಂತೆ.

ವೀಂಗು ನೀರರುವಿ ವೇಂಗಡ ಮೆನ್ಱುಂ
  ಓಂಗಿಯುರ್ ಮಲಯುತ್ತುಚ್ಚಿ ಮೊಮಿಶೈ
ವಿರಿಕದಿರ್ ಜ್ಞಾಯುರುಂ ಶಿಂಗಳುಂ ವಿಳುಂಗಿ
  ಇರುಮುರುಂಗೋಂಗಿಯ ವಿಡನಿಲೈ ತಾನತ್ತು
ಮಿನ್ನು ಕೋಡಿಯುಡುತ್ತಿ ವಿಳುಂಗುವಿಟ್ಟಾಂಡು
  ನನ್ನಿರಿ ಮೇಘಂ ನಿನ್ಱದು ಪೋಲ
ಪಗೆಯಣಂ ಗಾಟಿಯುಂ ಪಾಲ್ ವೆಣ್ ಶಂಗಮುಂ
  ತಗೈಪೆಯ ತಾಮರೈ ಕೈಯನೇಂದಿ
ನಳಂಗಿಳರ ರಾಮರರ್ ವಿಟ್ಟಾಂಡು
  ಪೊಲಂಪೂವಾಡೈಯಿಟ್ ಪೋಲಿಂದು ತೋನ್ಱಿಯ
ಶೆಂಗಣ್ ನೆಡಿಯೋನ್ ನಿನ್ಱವಣ್ಣಮುಂ

ಈ ದಿವ್ಯವಾದ ಪದ್ಯದಲ್ಲಿ ವೇಂಗಡದ ವೈಭವ, ಪ್ರಾಚೀನತೆ, ಅಲ್ಲಿಯ ದೈವದ ವರ್ಣನೆ, ಅದು ವಿಷ್ಣು ಸ್ವರೂಪಿ ಎಂಬೆಲ್ಲ ವಿಚಾರಗಳೂ ಸುವ್ಯಕ್ತಗೊಂಡಿದೆ.

ಈ ತಿರುವೇಂಗಡವನ್ನು ಆಳ್ವಾರುಗಳು 'ವಡ ವೇಂಗಡಂ' ಎಂದು ಬಣ್ಣಿಸಿರುವಾಗ ಅದು ಗಡಿ ನಿರ್ದೇಶಿಸುವ ನಾಮಧೇಯವಲ್ಲ. ಆದರೆ ಈ ವೇಂಗಡವು 'ತೆನ್ ವೇಂಗಡ' ಎನ್ನುವ ತಿರುಮಲೆಯಿಂದ ಭಿನ್ನವಾಗಿರುವುದನ್ನು ಸೂಚಿಸಲೂ ಈ ರೀತಿ ಹಾಡಿದ್ದಾರೆ.

"ಪೆರ್ಪು ಎನ್ಱುಂ ಇರುಂ ಶೋಲೈ ವೇಂಗಡಂ ಎನ್ಱುಂ ಇವ್ವಿರೆಂಡುಂ
  ನಿರ್ಪು ಎನ್ಱುಂ ನೀಮದಿಕ್ಕುಂ ನೀರ್ಮೈ ಪ್ಪೋಲ್" ಎಂದು
ಮೊದಲಾಳ್ವಾರ್ ಹೇಳಿದ್ದಾರೆ.

ದಕ್ಷಿಣದ ತಿರುಮಲೆ ಎನಿಸಲ್ಪಡುವ ತಿರುಮಾಲಿರುಂಶೋಲೆಮಲೈ, ಉತ್ತರ ಬೆಟ್ಟ ವಡವೇಂಗಡ ಈ ಎರಡನ್ನೂ ದೇವರು ಒಲಿದು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದಾನೆ. ಅಂತೂ ಶ್ರೀವೈಷ್ಣವರಿಗೆ ಈ ಎರಡೇ ಬೆಟ್ಟಗಳು. ಮಿಕ್ಕ ಬೆಟ್ಟಗಳು ಅಷ್ಟಾಗಿ ವೈವಿಧ್ಯಮಯವಾಗಿ ಹಾಡಲ್ಪಟ್ಟಿಲ್ಲ. ಈ ಎರಡು ಬೆಟ್ಟಗಳನ್ನೂ ಆಳ್ವಾರುಗಳು ಪ್ರಾಯಶಃ ಒಂದಲ್ಲ ಒಂದು ಜಾಗದಲ್ಲಿ ಪ್ರಸ್ತಾಪಿಸಿಯೇ ಇದ್ದಾರೆ. ಅಷ್ಟೊಂದು ಮಹಿಮಾನ್ವಿತ, ಅಷ್ಟೊಂದು ಆದರ. ಆದರೆ ವಿಶೇಷವೇನೆಂದರೆ ತಿರುವೇಂಗಡದಲ್ಲಿ 'ಉಚ್ಚಿಯುಳ್ ನಿನ್ರಾನ್' ಎನ್ನುವಂತೆ ಬೆಟ್ಟದ ಮೇಲೆ ಸ್ವಾಮಿಯು ನಿಂತಿದ್ದಾನೆ. ಆದರೆ ತಿರುಮಾಲಿರುಂಶೋಲೈನಲ್ಲಿ ಬೆಟ್ಟದ ಅಡಿವಾರದಲ್ಲಿ ಸ್ವಾಮಿ ಸಾನ್ನಿಧ್ಯಗೊಂಡಿದ್ದಾನೆ. ಆದರೂ 'ಈ ಬೆಟ್ಟಗಳನ್ನು ಯೌವ್ವನ ಜಾರುವುದಕ್ಕೆ ಮುಂಚೆ ಒಮ್ಮೆಯಾದರೂ ದರ್ಶಿಸುವುದು ಜಾಣು' ಎಂದು ಆಳ್ವಾರ್ ಹಾಡಿರುವುದರ ಔಚಿತ್ಯವಾದರೂ ಏನು ? ಎಂದಾಗ 'ಈ ಮಲೆಗಳ ಸೊಬಗಿಗೆ ಮನಸೋತು ಈ ಮಲೆಗಳ ಪ್ರಕೃತಿ ವೈಭವವನ್ನು ಕಂಡು ಆನಂದಿಸಿ ಸ್ವರ್ಗವನ್ನೇ ಕಂಡಷ್ಟು ತೃಪ್ತಿಪಡಲಿ ಎನ್ನುವ ಭಾವನೆ ಇರಬಹುದೇ ಆಳ್ವಾರರಿಗೆ ?' ಎನ್ನಿಸುತ್ತದೆ. ಈ ಎಲ್ಲವನ್ನೂ ವಿಮರ್ಶಿಸಿದಾಗ ಆಳ್ವಾರುಗಳಿಗೆ ಬೆಟ್ಟಗಳೇ ಪವಿತ್ರವೆನ್ನುವ ಭಾವನೆ ಇದ್ದಿತೆನ್ನುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

೬

ಇಷ್ಟೊಂದು ಪ್ರಾಚೀನ ಕಾಲದಿಂದ ಪ್ರಖ್ಯಾತಿಯನ್ನು ಹೊಂದಿದ ವೇಂಗಡದ ಒಡೆಯನಿಗೆ ಸರಿಯಾದ ದೇಗುಲವೊಂದು ಹಿಂದಿನಿಂದಲೇ ಇರಲಿಲ್ಲವೆ ? ಎನ್ನುವ ಜಿಜ್ಞಾಸೆಯನ್ನು ಶ್ರೀ ಎಸ್. ಕೆ. ರಾಮಚಂದ್ರರಾಯರು ಸುದೀರ್ಘವಾಗಿ ತಮ್ಮ 'ತಿರುಪತಿ ತಿಮ್ಮಪ್ಪ'ದಲ್ಲಿ ವಿವೇಚಿಸಿದರೂ ಒಂದೊಂದು ಕಡೆ ವಿಷಯ ಗೊಂದಲಕ್ಕೆಡೆ ಮಾಡುತ್ತದೆ.

ಶ್ರೀ ಪಿ. ಸೀತಾಪತಿ ಎನ್ನುವವರು ಇದನ್ನೇ "Sri Venkateswara, the Lord of Seven Hills, Tirupati" ಎನ್ನುವ ಭಾರತೀಯ ವಿದ್ಯಾಭವನದ ತಮ್ಮ ಪುಸ್ತಕದಲ್ಲಿ "The Vengadam Hill and the temple thereon" ಎನ್ನುವ ಅಧ್ಯಾಯದಡಿಯಲ್ಲಿ ಸಮಸ್ಯೆಯನ್ನು ಪರಿಹರಿಸುವ ಮಾರ್ಗವನ್ನು ಕಾಣಿಸುತ್ತಾರೆ.

ಈ ಇಬ್ಬರ ವಾದಗಳನ್ನು ಈ ಕೆಳಕಂಡಂತೆ ನಾವು ಅವಲೋಕಿಸಿ ಅಧ್ಯಯನ ಮಾಡಬಹುದಾಗಿದೆ.

"ಮೊದಲು ಮೂವರು ಆಳ್ವಾರರು ಈ ದೇವರಿಗೆ ಗುಡಿಯಿದ್ದುದನ್ನು ಉಲ್ಲೇಖಿಸುವುದಿಲ್ಲ. ನಾಲ್ಕನೆಯವರು ಗುಡಿಯಿರಲಿಲ್ಲವೆಂದು ಸ್ಪಷ್ಟಪಡಿಸುತ್ತಾರೆ. ಸುತ್ತಲೂ ದಟ್ಟವಾದ ಕಾಡಾಗಿದ್ದು ದೇವರು ನಿಂತೆಡೆ ಮಾತ್ರ ಕಾಡನ್ನು ಕಡಿದು ನಡೆದಾಡಲು ಅನುವು ಮಾಡಿದ್ದರಂತೆ. (ಪರಿಂದು ಪಡುಕಾಡುನಿರ್ಪ) ಕಾಡನ್ನು ಕಡಿದು ತಾನೇ ಎಡೆಮಾಡಿಕೊಂಡಿದ್ದು, 'ದೈವ ನಮ್ಮ ಮೇಲೆ ತೋರಿರುವ ಕರುಣೆ' ಎಂದು ಅವರು ಬಗೆದಿದ್ದಾರೆ. ಈ ಮೂರ್ತಿ ಎಲ್ಲರಿಗೂ ಎಲ್ಲೆಡೆಯೂ ಕಾಣುವಂತೆ ಇದ್ದಿತೆಂದು ಅವರ ಪಾಶುರವೊಂದರಲ್ಲಿ ಬರುವ ವಿವರ. ಸ್ವಾರಸ್ಯವಾದ ಈ ಪಾಶುರ (೪೫) ಹೀಗಿದೆ ;

ಪುರಿಂದು ಮಲರಿಟ್ಟುಪ್ಪುಂಡರೀಗಪ್ಪಾದಮ್,
ಪರಿಂದು ಪಡುಕಾಡುನಿಟ್ಟ – ತೆರಿಂದೆಂಗುಂ,
ತಾನೋಂಗಿ ನಿರ್ಕಿನ್‌ಱೂನ್ ತಣ್ಣರುವಿ ವೇಂಗಡಮೇ
ವಾನೋರ್ಕುಂ ಮಣ್ಣೋರ್ಕುಂ ವೈಪ್ಪು (೪೫)

"ನಮ್ಮ ಹಿತಕ್ಕೆಂದು ನಮ್ಮ ಮೇಲೆ ಕರುಣೆ ತೋರಿ ಈ ದೈವ ಕಾಡನ್ನು ಕಡಿದು, ತೆರವು ಮಾಡಿಕೊಂಡು, ತನ್ನ ತಾವರೆಯಡಿಗಳನ್ನು ನೆಲದ ಮೇಲೂರಿ ನಿಂತಿದೆ. ಭಕ್ತರು ಆ ಅಡಿಗಳ ಮೇಲೆ ಹೂಗಳನ್ನು ಇರಿಸಿದ್ದಾರೆ. ಎತ್ತರವಾಗಿ ನಿಂತಿರುವ ಈ ಮೂರ್ತಿಯನ್ನು ಎಲ್ಲೆಡೆಯಿಂದಲೂ ಕಾಣಬಹುದು. ತಣ್ಣನೆಯ ಝರಿಗಳಿಂದ ತುಂಬಿರುವ ವೇಂಗಡವು ದೇವತೆಗಳಿಗೂ ಮಾನವರಿಗೂ ಬಳುವಳಿಯಂತಿದೆ" ಇದು ಈ ಪಾಶುರದ ಭಾವ.

ಎಂದರೆ ಗುಡಿಯಿರಲಿಲ್ಲವೆಂದೇ ತಾತ್ಪರ್ಯ. ತೆರೆದ ಮಂಟಪವೊಂದು ಇದ್ದಿರಬೇಕು. ದೇವರಿಗೆ ಗುಡಿ ಕಟ್ಟುವುದು ಆ ಕಾಲದಲ್ಲಿ ಬಳಕೆಯಿದ್ದ ಅಭ್ಯಾಸವೆ ! ಆದರೆ ವೇಂಗಡದೊಡೆಯನಿಗೆ ಗುಡಿಯನ್ನು ಕಟ್ಟಿ, ಅವನ ಬೆಳಕನ್ನು ಗೋಡೆಗಳಿಂದ ಮುಚ್ಚಿರಲಿಲ್ಲ. ಯಾರಾದರೂ, ಯಾವಾಗಲಾದರೂ, ಎಲ್ಲಿಂದ ಲಾದರೂ, ಈ ದೈವವನ್ನು ಕಂಡು, ತಾವೇ ಆ ಅಡಿಗಳ ಮೇಲೆ ಹೂಗಳನ್ನಿರಿಸಿ ಸಂತೋಷಪಟ್ಟು ಹೋಗುವ ಅನುಕೂಲ ಈ ಆಳ್ವಾರರ ಕಾಲದಲ್ಲಿದ್ದಿತು. ಯಾವೊಂದೂ ನಿಯಮಿತವಾದ ಪೂಜಾ ವಿಧಾನ ಅಲ್ಲಿ ಜರುಗಿತ್ತಿದ್ದಿತೆನ್ನಲು ಯಾವ ಆಧಾರವೂ ಇರದು. ಭಕ್ತರು ತಾವೇ ತಮಗೆ ತೋರಿದಂತೆ ಆರಾಧನೆ ಸಲ್ಲಿಸಿ ಹೋಗುತ್ತಿದ್ದರು.... ಆ ವೇಳೆಗಾಗಲೇ ತಿರುವರಂಗದಲ್ಲಿ ದೊಡ್ಡ ಗುಡಿಯಿದ್ದಿತು. ಅಲ್ಲಿ ಆಗಮಾನುಸಾರವಾಗಿ ಷಟ್ಕಾಲ ಪೂಜೆ ನಡೆಯುತ್ತಿದ್ದಿತು. ಆದರೆ ಇಂಥಾ ಗುಡಿಯನ್ನು ಅಥವಾ ಅಂಥಾ ಪೂಜೆಯನ್ನು ಕುಲಶೇಖರರು ವೇಂಗಡದಲ್ಲಿ ನೋಡಿರಲಿಲ್ಲ. ತಂಬಕವೆಂಬ ಮರದ ಮತ್ತು ಸಂಪಿಗೆ ಮರದ 'ಬಳಕೆಯನ್ನು ಅವರ 'ಪೆರುಮಾಳ್ ತಿರುಮೊಳಿ'ಯಲ್ಲಿ ಉಲ್ಲೇಖಿಸಿರುವುದರಿಂದ ಮರದ ಗುಡಿ

ಇದ್ದಿರಬಹುದೆಂದು ಕೆಲವರು ಊಹಿಸಿದ್ದಾರೆ. ಮರದ ದಿಮ್ಮಿಗಳಿಂದ, ಹಲಗೆಗಳಿಂದ ಕಟ್ಟಿದ ಗುಡಿಗಳು ಪ್ರಾಚೀನ ಕಾಲದಲ್ಲಿ ವಿಶೇಷವಾಗಿದ್ದುವು. ಆದರೆ ವೇಂಗಡದಲ್ಲಿ ಇಂಥದೊಂದು ಗುಡಿ ಮೂಡಿಕೊಂಡಿದ್ದಿತೇ ಎಂದು ನೇರವಾಗಿ ತಿಳಿಯುವುದಿಲ್ಲ. ವೇಂಗಡದಲ್ಲಿ 'ನೀಳ್‌ವಾಶಲ್' ಎಂದರೆ 'ನಿಡುಬಾಗಿಲು' ಎಂಬುದರ ಪ್ರಸ್ತಾಪವೂ, ತಾವು ಮುಂದಿನ ಜನ್ಮದಲ್ಲಿ ವೇಂಗಡದೊಡೆಯನ ಗುಡಿಯ ಹೊಸ್ತಿಲಾಗಿ ಹುಟ್ಟಬೇಕೆಂಬ ಬಯಕೆಯ ಉಲ್ಲೇಖವೂ, ಸಣ್ಣದೊಂದು ಗುಡಿ ಇದ್ದಿತೆಂದೂ ಸೂಚಿಸುತ್ತವೆ. ಅರ್ಚಕನು ನಿಡುಬಾಗಿಲಿನಿಂದ ಒಳಗೆ ಅರ್ಚನೆ ಮಾಡುತ್ತಿದ್ದನೆಂದೂ ಭಕ್ತರು ನಿಡುಬಾಗಿಲಿನಿಂದ ಹೊರಗೆ ನಿಲ್ಲುತ್ತಿದ್ದರೆಂದೂ ಈ ಪಾಶುರ ತಿಳಿಯಪಡಿಸುತ್ತದೆ. ಇನ್ನಷ್ಟು ಸ್ಪಷ್ಟವಾಗಿ ಇನ್ನೊಂದು ಪಾಶುರ (೯)

ನೆಡಿಯಾನೇ ವೇಂಗಡವಾ ನಿನ್ ಕೋಯಿಲಿನ್ ವಾಶಲ್
ಅಡಿಯಾರುಂ ವಾನವರುಂ ಅರುಂಬೆಯರುಂ ಕಿಡನ್ದಿಯೆಂಗುಂ
ಪಡಿಯಾಯ್ ಕಿಡಂದ್ ಉನ್ ಪವಳವಾಯ್ ಕಾಣ್ಬೇನೇ.

ಎಂದು ಅವರ ಬಯಕೆಯನ್ನು ತೋಡಿಕೊಳ್ಳುವಾಗ 'ನಿನ್ನ ಗುಡಿಯ ಬಾಗಿಲು' ಎಂಬ ಮಾತುಗಳು ಬರುತ್ತವೆ. ಗುಡಿಯ ಬಾಗಿಲಿನ 'ಪಡಿ' ಎಂದರೆ ಹೊಸ್ತಿಲಾಗಿ ಮಾಡಿಕೊಂಡರೆ ವೇಂಗಡದವನ ಹವಳದಂತಿರುವ ಬಾಯನ್ನು ಎಡಬಿಡದೆ ನೋಡುತ್ತಿರಬಹುದೆಂಬ ಅವರ ಮನದಾಸೆ ಇಲ್ಲಿ ವ್ಯಕ್ತವಾಗಿದೆ. ಈಗಲೂ ಗುಡಿಯ ಹೊಸಿಲನ್ನು 'ಕುಲಶೇಖರಪ್ಪಡಿ' ಎಂದೇ ಕರೆಯುತ್ತಾರೆ.............. ಮುಪ್ಪಡರುವ ಮೊದಲೇ, ಪ್ರತಿಯೊಬ್ಬರೂ, ವೇಂಗಡದ ಬೆಟ್ಟವನ್ನೇರಿ, ಅಲ್ಲಿ ನಿಂತಿರುವ ದೈವಕ್ಕೆ ಧೂಪ, ದೀಪ, ನೀರು, ಹೂಗಳಿಂದ ಪೂಜೆ ಸಲ್ಲಿಸಬೇಕೆಂದು ಇವರ ಆಗ್ರಹ. [ತಿರುವಾಯ್ಮೊಳಿ (೩–೩–೭)] ವೇಂಗಡಕ್ಕೆ ಬರುವವರು ತಮ್ಮನ್ನು ತಾವು ಮರೆಯಬೇಕಂತೆ; ತಮ್ಮ ದೊಡ್ಡಸ್ತಿಕೆಯನ್ನು ಕಟ್ಟಿಟ್ಟು ಬರಬೇಕಂತೆ, ಮೈಮರೆತು ಹಾಡುತ್ತ ಕುಣಿಯುತ್ತ ದೇವರೆದುರು ನಿಲ್ಲಬೇಕಂತೆ; ಇಲ್ಲಿ ಜಾತಿ, ಮತಗಳ ಒಡಕು ಇರದು. ದೇವತೆಗಳು, ಮನುಷ್ಯರೆಂಬ ಬೇಧವೂ ಸಲ್ಲದು! ಈ ಪರಮನ ಮುಂದೆ ಜಡ, ಜೀವವೆಲ್ಲವೂ ಸಮನೆ! ಈ ವರ್ಣನೆಗಳನ್ನೆಲ್ಲಾ ಗಮನಿಸಿದರೆ ವೇಂಗಡ ಬೆಟ್ಟದ ಮೇಲೆ ಇದ್ದಿರಬಹುದಾದ ಗುಡಿಗೆ ಯಾರಾದರೂ, ಯಾವ ಕಾಲದಲ್ಲಾದರೂ, ಹೋಗಿ ಬರುವ ಸೌಕರ್ಯ ಇದ್ದಿತೆಂದು ತೋರುತ್ತದೆ; ತಾವೇ ಪೂಜೆ ಮಾಡುವ ಸೌಲಭ್ಯವೂ ಇದ್ದಂತೆ ಕಾಣುತ್ತದೆ. ಆ ಕಾಲಕ್ಕಿನ್ನೂ ಗುಡಿ ದೇವರನ್ನು ಒಳಗೆ ಮಾಡಿ ಭಕ್ತರನ್ನು ಹೊರಗೆ ಮಾಡುವ ವ್ಯವಸ್ಥೆಯಾಗಿರಲಿಲ್ಲ............ ಆಳ್ವಾರರ ಕಾಲದಲ್ಲಿ ವೇಂಗಡದ ದೇವರಿಗೆ ಯಾವ ಬಗೆಯಲ್ಲಿ ನಿತ್ಯಾರ್ಚನೆ ನಡೆಯುತ್ತಿದ್ದಿತೋ ತಿಳಿದುಬರುವುದಿಲ್ಲ. ಕಡೆಗೆ ನಿತ್ಯಾರ್ಚನೆ ನಡೆಯುತ್ತಿದ್ದಿತೇ ಎಂಬುದೂ ಸಂಶಯವೇ. ಆದರೆ ಈ

ದೇವರಿಗೆ ನಡೆದುಕೊಳ್ಳುವವರು ತಾವೇ ತಮಗೆ ತಿಳಿದಂತೆ ಪೂಜೆ ಸಲ್ಲಿಸಿ ಹೋಗುವ ವಾಡಿಕೆಯಿದ್ದಿತು. ದೇವರ ಹೆಸರುಗಳನ್ನು ಹಾಡುವುದು, ಮೂರ್ತಿಯ ಮುಂದೆ ದೀಪವಿಟ್ಟು, ಧೂಪ ಹಾಕಿ, ಮೂರ್ತಿಯ ಅಡಿಗಳನ್ನು ನೀರಿನಿಂದ ತೊಳೆದು, ಹೂಗಳನ್ನಿರಿಸಿ, ಗಂಧವನ್ನು ಪೂಸಿ, ನಮಸ್ಕರಿಸುವುದು – ಇದರ ಪ್ರಸ್ತಾಪ ಅವರ ಪಾಶುರದಲ್ಲಿ ಬೇಕಾದ ಹಾಗೆ ಬರುತ್ತದೆ. ಬಗೆ ಬಗೆಯ ಹೂಗಳ ದಂಡೆಗಳನ್ನು ಕಟ್ಟಿ ಅವುಗಳ ಮಾಲೆಯಿಂದ ಮೂರ್ತಿಯನ್ನು ಸಿಂಗರಿಸುವುದು ಇಲ್ಲಿ ಕಾಣಬರುವ ವಿವರವೇ. ಭಕ್ತರು ಸಲ್ಲಿಸುವ ಪೂಜೆಯೇ ಮುಖ್ಯವೆಂದು ಆಳ್ವಾರರು ನಂಬಿದ್ದರು. ವೃತ್ತಿಯಲ್ಲಿ ಅರ್ಚಕರಾದವರ ಪೂಜೆ ಅಲ್ಲಿ ನಡೆಯುತ್ತಿದ್ದ ಉಲ್ಲೇಖವಂತೂ ಮೊದಲಾಳ್ವಾರ್‌ರ ಪಾಶುರಗಳಲ್ಲಿ ಸಿಗುವುದಿಲ್ಲ. ಮುಂದೆ ಅದು ಬಳಕೆಗೆ ಬಂದಿತೆನ್ನಲು ಅವಕಾಶವಿದ್ದರೂ ಯಾವ ಆಳ್ವಾರರೂ ಅದನ್ನು ಮುಖ್ಯವೆಂದು ಗ್ರಹಿಸಲಿಲ್ಲ. ಅದರ ವಿಚಾರ ಹೇಳಲಿಲ್ಲ.

ಇದು ಶ್ರೀ ಎಸ್. ಕೆ. ರಾಮಚಂದ್ರರಾಯರ "ತಿರುಪತಿ ತಿಮ್ಮಪ್ಪ" ದಲ್ಲಿ 'ತಿರುಪತಿಯಲ್ಲಿ ಗುಡಿಯಿದ್ದಿತೆ ?' ಎನ್ನುವ ಸಮಸ್ಯೆಗೆ ಸುದೀರ್ಘ ವಿಶ್ಲೇಷಣೆ.

ಪಿ. ಸೀತಾಪತಿ ಅವರ ವಿವರಣೆ ಈ ಕೆಳಕಂಡಂತಿದೆ :

"The Bhavishyat Purana also mentioned how the Lords swayamvyakta idol was discovered by King Tondaman in an ant-hill, under a tamarind tree, on the banks of swamipush-karani. This Purana also gives the legend connected with the construction of the first temple of the Lord in Kaliyuga. Once king Tondaman, who came to worship the Lord of Thirumalai was commanded by Him, as follows – "I have become a Grihasta or a householder. It is not proper that I should be houseless. Construct a temple for me. The credit of this shall be thine." Tondaman then took an oath immediately that he would obey the Lord's command. Lord Srinivasa and his consort Padmavathi then selected a site for the temple on the southern banks of swamipushkarini on sheshachalam. The Lord wished that his temple should have two gopurams, a dwajasthambham, three prakarams, seven doors, the asthanamantapam, yagamantapam, a goshala or a shed for cattle, houses for storing grains, flowers, oil, ghee and houses for dining,

decoration and ornaments. The temple was to be a structure of stones and was to be ornamented with copper and gold. The king then constructed a temple for the Lord as directed."

ತೊಂಡಮಾನನು ಯಾವ ಕಾಲದವನೆಂಬುವುದು ಸ್ಪಷ್ಟವಿಲ್ಲ. ಇತಿಹಾಸದಿಂದ ಅವನ ವೃತ್ತಿ ತಿಳಿಯುವುದಿಲ್ಲ. ಭವಿಷ್ಯತ್ ಪುರಾಣದ ಕಾಲವೂ ಗೊತ್ತಿಲ್ಲ. ಭವಿಷ್ಯತ್ ಪುರಾಣದ ಪ್ರಕಾರ ಮುಂದಿನ ವೃತ್ತಾಂತವನ್ನು ತಾನೇ ಅದು ಹೇಳುವುದು ? ಆ ಮುಂದಿನ ಕಾಲ ಯಾವ ಕಾಲದಿಂದ ಯಾವ ಸಮಯದವರೆಗೆ ಎನ್ನುವುದೂ ಗೊತ್ತಾಗದು. ಅಂತೂ ಒಂದು ಮಾತ್ರ ಗೊತ್ತಾದ ವಿಚಾರ.

ಈ ವೆಂಕಟೇಶ ಮಹಾತ್ಮ್ಯದ ವಿಚಾರವೆಲ್ಲಾ ಬಹಳ ಹಿಂದಿನ ಕಾಲದ್ದೆಂದು ಸಿದ್ಧಾಂತವಾಗಬೇಕು. ಅಂತೂ ಕ್ರಿ.ಶ. ಮೂರನೆಯ ಶತಮಾನಕ್ಕಿಂತ ಪೂರ್ವದ ಅರಸನಿವನೆಂದು ಊಹಿಸಬೇಕಾಗುತ್ತದೆ. ನಂತರದ ಅರಸರ ಕುಲಗಳು, ಆಳ್ವಾರ್ ಪಾಶುರಗಳು ಈ ಬಗ್ಗೆ ಏನೂ ಹೇಳದಿರುವುದರಿಂದ ಈ ವಿಚಾರ ಕ್ರಿ. ಶ. ೧ ನೇ ಶತಮಾನದಿಂದ ಕ್ರಿ.ಶ. ಮೂರನೇ ಶತಮಾನಕ್ಕೆ ಪರಿಮಿತಿಗೊಳ್ಳುತ್ತದೆಯೆನ್ನಬೇಕು. ಏತಕ್ಕೆಂದರೆ ಮೊದಲಾಳ್ವಾರ್ ಕಾಲ ಕ್ರಿ.ಶ. ೩ ರಿಂದ ಆರನೇ ಶತಮಾನದವರೆಗೆ ಪರಿಗಣಿಸಲ್ಪಟ್ಟಿದೆ. "ತಿರುಪತಿ ತಿಮ್ಮಪ್ಪ"ದ ಪ್ರಕಾರ ಈ ದೇವರು ಬೇಟೆಗಾರರ ದೇವರಾಗಿದ್ದನೆಂದೂ, ನಂತರ ತೊಂಡಮಾನ್ ಚಕ್ರವರ್ತಿಯಿಂದ ಆರಾಧಿಸಲ್ಪಟ್ಟನೆಂದೂ ಗೊತ್ತಾಗುತ್ತದೆ. ಈ ಕುರವರ, ಬೇಡರ ಕತೆ ಮೊದಲಾಳ್ವಾರ್ ಮತ್ತು ತಿರುಮಳಿಶೈ ಆಳ್ವಾರರ ಪಾಶುರಗಳಲ್ಲಿ ಗೊತ್ತಾಗುತ್ತದೆ. ಇವರ ಕಾಲ ಕ್ರಿ.ಶ. ೬ ರಿಂದ ೭ನೇ ಶತಮಾನಕ್ಕೂ ಸಾಗುತ್ತದೆಯಾದ್ದರಿಂದ ಈ ಕುರವರು, ಬೇಡರು, ತೊಂಡಮಾನ, ತಿರುಪತಿ ದೇವಸ್ಥಾನ ಒಂದಕ್ಕೊಂದು ಸಂಬಂಧವಿರದ ಸಂಭವಗಳು ಹೆಚ್ಚಾಗುತ್ತದೆ. ಇದರಿಂದ ತಿರುಪತಿ ದೇವರು ಬೇಡರಿಗೆ, ಕುರವರಿಗೆ ಮಾತ್ರ ಸ್ವಂತವಾಗಿರಲಿಲ್ಲ ಎನ್ನುವ ಅಂಶವೂ ಸ್ಪಷ್ಟವಾಗುತ್ತದೆ.

ಪಿ. ಸೀತಾಪತಿ ಅವರ ವಿವರಣೆಯಿಂದ ಈ ತೊಂಡಮಾನನ ಕಾಲದಲ್ಲೇ ವಿಸ್ತಾರವಾದ ದೇಗುಲವೊಂದು ಎಲ್ಲಾ ಅಂಕಣ ಪ್ರಾಕಾರಾದಿಗಳಿಂದ ಕೂಡಿ ಕಟ್ಟಲ್ಪಟ್ಟಿರಬಹುದಾದ ವಿಚಾರ ದೊರೆಯುತ್ತದೆ. ಆದರೆ ರಾಮಚಂದ್ರರಾಯರ ಪ್ರಕಾರ ಮೊದಲಾಳ್ವಾರ್‌ಗಳ ಕಾಲಕ್ಕೆ ಈ ಗುಡಿ ಇರಲಿಲ್ಲ. ತಿರುಮಳಿಶೈ ಆಳ್ವಾರ್ ಕಾಲಕ್ಕೆ ಗುಡಿ ಇರಲಿಲ್ಲ. ತೆರೆದ ಮಂಟಪವೊಂದಿತ್ತು. ಜನ ಬಂದು ತಮಗಿಷ್ಟ ಬಂದಂತೆ ದೇವರನ್ನು ಪೂಜಿಸುತ್ತಿದ್ದರು. ಪ್ರಾಣಿಗಳು ನಿರ್ಭೀತಿಯಿಂದ ಸಂಚರಿಸುತ್ತಿದ್ದುವು. ಬೆಟ್ಟವೆಲ್ಲಾ ಕಾಡಾಗಿ, ಹೋಗಲು ರಸ್ತೆಯೇ ಇರಲಿಲ್ಲ. ದೇವರು ನಿಂತಿದ್ದ ಸ್ಥಳ ಮಾತ್ರ ಅಷ್ಟು ಕಾಡು ಕತ್ತರಿಸಲ್ಪಟ್ಟು ಇಟ್ಟಿರಲಾಗಿತ್ತಂತೆ ! ಮಂಟಪ

ದಲ್ಲಿನ ಮೂರ್ತಿ ಎಲ್ಲರಿಗೂ ಸುತ್ತಮುತ್ತಣಿಂದ ಕಾಣಿಸುವಂತಿತ್ತು. ಕಪಿಗಳೂ, ಪ್ರಾಣಿಗಳೂ, ಎಂದರೆ ಆನೆಗಳೂ ಹೂ ಹಾಕಿ ನೀರು ತಂದು ತೊಳೆಯುತ್ತಿದ್ದುವು ಎಂದು ಪಾಶುರಗಳಲ್ಲಿ ವರ್ಣನೆ ಬಂದಿರುವುದರಿಂದ ಅವುಗಳು ನೀರೆರಚಿ ಹೂಗಳನ್ನು ಮರಗಳಿಂದ ಉದುರಿಸಿ ದಾಂಧಲೆ ಮಾಡುತ್ತಿದ್ದ ಚಿತ್ರವಿದೆ ಎನ್ನಬಹುದಲ್ಲವೆ. ಇದೊಂದು ಕ್ಲಿಷ್ಟವಾದ, ತೀರ್ಮಾನವಾಗದ ವಿಷಯ ಎನ್ನಬೇಕು. ನಮ್ಮಾಳ್ವಾರರ ಕಾಲಕ್ಕೆ ಈ ಗುಡಿಯ ವಿಚಾರ ಸ್ಪಷ್ಟವಿಲ್ಲ. ಸ್ಪಷ್ಟವಿಲ್ಲವೇನು ? ರಾಯರು ಅವರ ಪಾಶುರಗಳಿಂದ ಗುಡಿಯ ವಿಚಾರ ಕಂಡುಕೊಂಡಿಲ್ಲ. ಕುಲಶೇಖರ ಆಳ್ವಾರ್ ಕಾಲಕ್ಕೆ ಸಣ್ಣ ಮರದ ಗುಡಿಯ ಕಲ್ಪನೆಯನ್ನು ನೀಡುತ್ತಾರೆ. ಇದನ್ನೂ ಒಂದು ರೀತಿಯ ಗೊಂದಲಮಯವನ್ನಾಗಿ ವಿವರಿಸಿದ್ದಾರೆ. ಕೆಲವು ಕಡೆ ಜನರು ತಾವೇ ದೇವರನ್ನು ಮುಟ್ಟಿ ಪೂಜಿಸುತ್ತಿದ್ದರು ಎನ್ನುವ ಅವರು ಅರ್ಚಕರು ನೀಳ್‌ವಾಶಲ್ ಒಳಗಡೆ ಇದ್ದು ಹೊರಗೆ ಜನರು ನಿಲ್ಲುತ್ತಿದ್ದಿರಬಹುದಾದ ವಿಚಾರ ಹೇಳಿದ್ದಾರೆ. ಇಷ್ಟಾದರೂ ಪೂಜಾ ವ್ಯವಸ್ಥೆ ಇರಲಿಲ್ಲವೆನ್ನುತ್ತಾರೆ. ಇದೆಲ್ಲಾ ಪಾಶುರಗಳಿಂದ ಸ್ಪಷ್ಟ ಪಡದೇ ಹೋದರೂ ರಾಯರ ಮನಸ್ಸು ಗುರುತಿಸುತ್ತದೆ.

ಪಿ. ಸೀತಾಪತಿ ಮತ್ತು ಶ್ರೀ ರಾಯರ ಹೇಳಿಕೆಗಳ ಮಂಥನ ನಡೆಸಿದಾಗ ನಮಗೆ ಗೋಚರಗೊಳ್ಳುವ ವಸ್ತು ಇಷ್ಟು. ಸೀತಾಪತಿ ಅವರ ಹೇಳಿಕೆಗೆ ಒಂದು ನಿರ್ದಿಷ್ಟವಾದ ಹಿನ್ನೆಲೆ ಇದೆ. ರಾಯರ ಹೇಳಿಕೆಗೆ ಆಳ್ವಾರ್ ಪಾಶುರಗಳಲ್ಲಿ ಹೇಳಿಲ್ಲದಿರುವುದರಿಂದ ಹೀಗೆ ಇರಬಹುದು ಎನ್ನುವ ಕಲ್ಪನೆ, ಭಾವಗಳು ಹಿನ್ನೆಲೆ ಯಾಗುತ್ತದೆ. ತಿರುವರಂಗ ಮುಂತಾದ ಇತರ ಕಡೆಯ ಗುಡಿಗಳನ್ನು ಬಣ್ಣಿಸಿದ, ಪೂಜಾ ವಿಧಾನಗಳನ್ನು ವಿವರಿಸಿದ ಆಳ್ವಾರುಗಳು, ವೇಂಗಡದ ಗುಡಿಯನ್ನೂ ಅರ್ಚನಾ ವಿಧಾನಗಳನ್ನೂ ವಿವರಿಸಿಲ್ಲ ಎನ್ನುವುದು ರಾಯರ ಸ್ಪಷ್ಟವಾದ ಹೇಳಿಕೆ. ಆದರೆ ಪಾಶುರಗಳನ್ನು ಪರಿಶೀಲಿಸಿದಾಗ ಯಾವ ಆಳ್ವಾರೂ ಸಹ ಊರುಗಳನ್ನೂ ದೇವರು, ಅವನ ಮಹಿಮೆಗಳನ್ನೂ ಹೊಗಳಿರುವರೇ ವಿನಹ ಅವರುಗಳಿಗೆ ಗುಡಿ ಗಳಿದ್ದುದನ್ನೂ, ಅವರ ಪೂಜಾ ವೈಭವಗಳನ್ನೂ ವಿವರಿಸಿರುವುದು ನನಗೆ ಕಂಡು ಬಂದಿಲ್ಲ. ಹಾಗೆ ಅವರು ಬೇರೆ ಗುಡಿಗೋಪುರ ಪೂಜಾ ವೈಭವಗಳನ್ನೂ, ತಿರುಮಲೆ ಯಲ್ಲಿ ಅವು ಲೋಪವಾಗಿರುವುದನ್ನೂ ಕೂಡಾ ಹೇಳಿಲ್ಲ. ಮತ್ತೂ ಬೇರೆ ಕ್ಷೇತ್ರಗಳ ದೈವ ಮಹಿಮೆಯನ್ನೂ ಸಮಾನವಾಗಿಯೇ ತಿರುಮಲೆಯ ದೇವನೊಂದಿಗೆ ಹಾಡಿದ್ದಾರೆ. ಪೊಯ್ಗೈಯರ್ ಆಳ್ವಾರ್ ತಮ್ಮ ಮೊದಲ್ ತಿರುವಂದಾದಿಯ ೭೭ನೇ ಪಾಶುರದಲ್ಲಿ "ವೇಂಗಡಮುಂ ವಿಣ್ಣಗರುಂ, ವೆಃ ಕಾವುಂ ಅಃ ಕಾದ ಪೂಂಕಿಡಂಗಿನ್ ನೀಳ್ ಕೋವಲ್ ಪೊನ್ನಗರುಂ ನಾನ್ಗಿಡತ್ತುಂ" ಎಂಬು ವೇಂಗಡ, ಪರಮಪದ, ವೆಃ ಕಾ (ಕಂಚಿ) ಮತ್ತು ತಿರುಕ್ಕೋವಲೂರ್ ದಿವ್ಯನಗರ ಎಲ್ಲಾ ಜಾಗದಲ್ಲೂ ದೇವರಿದ್ದಾನೆ ಎಂದು ವರ್ಣಿಸುವಾಗ ಈ ಜಾಗಗಳಲ್ಲಿ ದೇಗುಲವಿದ್ದಿತೆ, ಇಲ್ಲವೇ

ತಿಳಿಸುವುದಿಲ್ಲ. ಇದೇ ರೀತಿ ಹಲವಾರು ಪಾಶುರಗಳಲ್ಲಿ ವೇಂಗಡವನ್ನು ಇತರ ಕ್ಷೇತ್ರಗಳೊಂದಿಗೆ ಹಾಡಿರುವುದನ್ನು ಗಮನಿಸಿದಾಗ ವೇಂಗಡದಲ್ಲೂ ಆ ಊರುಗಳಂತೆ ದೇಗುಲ, ಉತ್ಸವ ಸಂಭ್ರಮ ಪೂಜೆಗಳು ಏಕೆ ನೇರ್ಪುಗೊಂಡಿರಬಾರದು ಎನ್ನುವ ಪ್ರಶ್ನೆ ಉದ್ಭವಿಸದೇ ಇರದು. ರಾಯರು ಹೇಗೆ ವೇಂಗಡದಲ್ಲಿ ಗುಡಿ ಇರಲಿಲ್ಲ ಎಂದು ಹೇಳುತ್ತಾರೆ, ಈ ದೊರೆಯುವ ಅಸ್ಪಷ್ಟ ಮತ್ತು ಅಸಂಪೂರ್ಣವಾದ ವಿವರಗಳಿಂದ ! ಮತ್ತು ಒಂದು ತೆರೆದ ಮಂಟಪವನ್ನು ಮಾತ್ರ ಹೇಗೆ ಚಿತ್ರಿಸಿಕೊಳ್ಳುತ್ತಾರೆ ಎಂಬುವುದು ಅರಿವಾಗದ ವಿಚಾರ. ಇದರ ವಿಮರ್ಶೆಯನ್ನು ಮುಂದೆ ವಿವರಿಸುತ್ತೇನೆ.

ಶ್ರೀ ಸೀತಾಪತಿಯವರು ತಮ್ಮ ಪುಸ್ತಕದಲ್ಲಿ ಇನ್ನೊಂದು ಹೇಳಿಕೆ ನೀಡಿದ್ದಾರೆ: "from a study of the architecture of the Garbagriham it has already been mentioned that Thirumalai temple cannot be dated earlier than 8th century A.D." ಎಂದರೆ ಕ್ರಿ.ಶ. ೭೦೦ ರಿಂದ ೮೦೦ ರಲ್ಲಿ ದೇವರಿಗೆ ಗುಡಿಯೊಂದಿದ್ದಿತು ಎನ್ನುವ ಅರ್ಥ ಬರುತ್ತದೆ. ಇದು ಕುಲಶೇಖರರ ಕಾಲಕ್ಕೆ ಸಾಮ್ಯಗೊಳ್ಳುತ್ತದೆ ಸುಮಾರಾಗಿ ಎನ್ನಬಹುದು. ಕುಲಶೇಖರ ಗುಡಿ ವಿಚಾರವನ್ನು ರಾಯರು ಒಪ್ಪಿಕೊಳ್ಳುತ್ತಾರೆ.

ಆದರೆ ರಾಯರ ಮುಂದುವರಿಯುವ ವಾದದ ಪ್ರಕಾರ, ಗುಡಿಗೆ ಸಂಬಂಧಿಸಿದ ಶಾಸನಗಳ ವಿಚಾರದಲ್ಲಿ ಹೇಳಿಕೆ ನೀಡುವಾಗ "ಇಂತಹ ಶಾಸನಗಳು ನೂರಾರಿವೆ. ತುಂಬಾ ಹಿಂದಿನದೆನ್ನುವ ಶಾಸನ ಕ್ರಿ.ಶ. ೭೯೦ರಲ್ಲಿ ಸಿದ್ಧವಾದುದು. ವಿಜಯಾದಿತ್ಯನೆಂಬ ಬಾಣ ವಂಶದ ಅರಸು ಹುಟ್ಟಿದ್ದನ್ನು ತಿಳಿಸುವ ಈ ಶಾಸನ ಬಿಡಿಯಾಗಿ ನಿಂತಿದ್ದು, ಗುಡಿಯ (ಈಗಿನ) ಬಳಿ ದೊರೆಯಿತು. ಗುಡಿ ಇರದಿದ್ದ ಕಾಲದ ಶಾಸನ ಅದು." ಎನ್ನುತ್ತಾರೆ. ಮತ್ತು ಕ್ರಿ.ಶ. ೯೪೫ ರ ಶಾಸನವೊಂದನ್ನು ಪ್ರಸ್ತಾಪಿಸಿ ಬೆಟ್ಟದ ಮೇಲಿನ ಗುಡಿಯಲ್ಲಿ ನಂದಾದೀಪವೊಂದನ್ನು ಉರಿಸುವ ಏರ್ಪಾಡನ್ನು ಪ್ರಸ್ತಾಪ ಮಾಡಿದೆ, ಒಂದನೇ ಪರಾಂತಕನ ಕಾಲದ್ದು ಎಂದ ಮೇಲೆ ಒಂದು ನಂದಾದೀಪ ಬೆಳಗಿಸುವಷ್ಟು ಸಣ್ಣ ಗುಡಿ ಆಗಲೇ ಎದ್ದಿರಬೇಕು (ಪು. ೭೯) ಎನ್ನುವ ವಿಚಾರ ಮತ್ತೆ ಎಬ್ಬಿಸುತ್ತಾರೆ.

ಎಂದರೆ ಒಮ್ಮೆ "ಕುಲಶೇಖರರ ಕಾಲದಲ್ಲಿ ಮರದ ಚಿಕ್ಕ ಗುಡಿ ಇದ್ದಿತು. ಅದಕ್ಕೆ 'ನೀಳ್‌ವಾಶಲ್' ಎಂದರೆ 'ಉದ್ದವಾದ ಬಾಗಿಲಿ'ದ್ದಿತು; (ಎತ್ತರದ ಬಾಗಿಲು) ಗರ್ಭಗುಡಿ ಇದ್ದಿತು, ಅರ್ಚಕರು ಒಳಗೆ ಪೂಜಿಸುತ್ತಾ ಭಕ್ತರು ಹೊರಗಿನಿಂದ ದರ್ಶನ ಪಡೆಯುತ್ತಿದ್ದರು" ಎಂಬ ಚಿತ್ರ ನೀಡಿ ಮತ್ತೆ ಕ್ರಿ.ಶ. ೭೯೦ರಲ್ಲಿ ಗುಡಿ ಇರಲಿಲ್ಲವೆನ್ನುತ್ತಾರೆ. ಮತ್ತೆ ಕ್ರಿ.ಶ. ೯೪೫ರಲ್ಲಿ ಚಿಕ್ಕ ಗುಡಿ ಇದ್ದಿತು ಎನ್ನುತ್ತಾರೆ. ಮುಂದೆ ಅವರೇ ವಿಜಯನಗರದ ಅರಸರ ಕಾಲಕ್ಕೆ ಗುಡಿ ಕಟ್ಟಲ್ಪಟ್ಟಿತು ಎನ್ನುತ್ತಾರೆ.

ಹಾಗಾದರೆ ತೊಂಡಮಾನನ ಕಾಲದ ಗುಡಿ ಬರಿ ಕಲ್ಪನೆಯೆ ? ಕುಲಶೇಖರರ "ಪಡಿಯಾಯ್ ಕಿಡಂದ್ ಪವಳವಾಯ್ ಕಾಣ್ಬೇನೇ" ಎನ್ನುವಾಗ ಅಲ್ಲಿದ್ದ ಗುಡಿ, ಗರ್ಭಗುಡಿ, ಹೊಸಲುಗಳು ಕಲ್ಪನೆಯೆ ? ಆಳ್ವಾರುಗಳು ತಮ್ಮ ಪಾಶುರಗಳಲ್ಲಿ "ಕೋಯಿಲ್ ಕೊಂಡಾನ್" ಎಂದರೆ ತಿರುಮಲೆಯ ದೇವರು 'ಗುಡಿಯನ್ನು ಹೊಂದಿದ್ದಾನೆ' ಎಂದು ಹೇಳುವ ಮಾತು ಸುಳ್ಳೆ, ಕಲ್ಪನೆಯೆ ? ಆಳ್ವಾರುಗಳ ಕಾಲ ೯ನೇ ಶತಮಾನ ಅಥವಾ ಹತ್ತನೇ ಶತಮಾನದ ಒಳಗೆ ಮುಗಿಯಿತು ಎನ್ನುತ್ತಾರೆ. ಅವರು ಇತ್ತು ಎಂದು ಹೇಳುವ ಕ್ರಿ.ಶ. ೮೦೦ ರಿಂದ ೯೦೦ ರೊಳಗಿನ ದೇವಸ್ಥಾನ ವೇನಾದುವು ? ಸೀತಾಪತಿ ಅವರ ೮ನೇ ಶತಮಾನದ ಗುಡಿ ಕಲ್ಪನೆಯೆ ? ಕ್ರಿ.ಶ. ೧೦ನೇ ಶತಮಾನದ ಗುಡಿ ಕಲ್ಪನೆಯೆ ? ವಿಜಯನಗರದ ಕಾಲ ಕ್ರಿ.ಶ. ೧೫೦೦ ಕ್ಕೆ ಬರುತ್ತದೆ. ಹೀಗೆ ವಿಮರ್ಶೆ ಮಾಡುತ್ತಾ ಹೋದರೆ ಎಲ್ಲಾ ಗುಡಿಗಳು ಇದ್ದುವೆ ? ಏನಾದುವು ? ಎಲ್ಲಿ ಅಡಗಿದುವು ? ಎಂಬ ಗೊಂದಲವುಂಟಾಗದೇ ಇರದು. ಏತಕ್ಕೆ ಈ ಗೊಂದಲ, ಸಮಸ್ಯೆ ? ತೀರ್ಮಾನವಿಲ್ಲದ ವಿಚಾರ, ವ್ಯವಹಾರ ಕಲ್ಪನೆ.

'ಶಿಲಪ್ಪಧಿಕಾರಂ' ನಲ್ಲಿಯೇ ತಿರುಮಲೆಯ ಮೇಲೆ ಜಾತ್ರೆ ನಡೆಯುತ್ತಿದ್ದ ವರ್ಣನೆಯಿದೆ. ಜನ ಸೇರುತ್ತಿದ್ದರು ಎಂದಿದೆ. ಮೊದಲಾಳ್ವಾರ್ ಪಾಶುರಗಳಲ್ಲಿ 'ಪಾರಶಿ' (ಮುಕ್ಕೋಟಿ ದ್ವಾದಶಿಯ) ಜಾತ್ರೆಯ ಸಂಭ್ರಮದ ವಿವರವಿದೆ. ಜನ ಅಧಿಕ ಸಂಖ್ಯೆಯಲ್ಲಿ ಧೂಪದೀಪ ಪುಷ್ಪಾದಿಗಳನ್ನು ತಂದು ಸಮರ್ಪಿಸುತ್ತಿದ್ದ ದೃಶ್ಯವಿದೆ. ವೇದಿಯರ್ ಎಂದರೆ ಶ್ರೋತ್ರಿಯ ಬ್ರಾಹ್ಮಣರು ತಂಡ ತಂಡವಾಗಿ ನೆರೆಯುತ್ತಿದ್ದ ವಿವರವಿದೆ. ಹೆಂಗಸರು ಅಲಂಕಾರ ಮಾಡಿಕೊಂಡು ಜಾತ್ರೆಯಲ್ಲಿ ಅನ್ವಯಿಸುತ್ತಿದ್ದ ವಿಚಾರವಿದೆ. ಇದಕ್ಕಿಂತ ಮಿಗಿಲಾಗಿ ಮೊದಲಾಳ್ವಾರ್ ಪಾಶುರ ಗಳಲ್ಲಿ ಎರಡು ಜಾಗಗಳಲ್ಲಿ ವೇಂಗಡದ ಮೇಲೆ ಊರು ಇದ್ದಿತೆಂದು ನಿಖರವಾಗಿಯೇ ಹೇಳಲ್ಪಟ್ಟಿದೆ. ಪೊಯ್ಗೈಯ್ ಆಳ್ವಾರ್ ಅವರ ಮೊದಲ್ ತಿರುವಂದಾದಿಯ ೩೭ನೇ ಪಾಶುರದಲ್ಲಿ "ವೆಣ್‌ಶೆಂಗಮ್ ಊದಿಯ ವಾಯ್‌ಮಾಲ್ ಉಗನ್ದಊರ್" ಎಂದೂ, ತಿರುಮಳಿಶೈ ಆಳ್ವಾರ್ ಅವರ 'ನಾನ್‌ಮುಗನ್ ತಿರುವಂದಾದಿಯ' ೪೭ನೇ ಪಾಶುರದಲ್ಲಿ "ನನ್ ಮಣಿವಣ್ಣನೂರ್" ಎಂದೂ ಸ್ಪಷ್ಟಗೊಂಡಿರುವ ಊರ್ ಈ ಜಾತ್ರೆ ಕಾಲದಲ್ಲಿ ಜನರು ನೆರೆಯಲು, ವಸತಿ ಸೌಕರ್ಯಗಳನ್ನು ಹೊಂದಲು ಅನುಕೂಲಕರವಾಗಿದ್ದಿತು ಎಂದಾಗ ಆ ಊರು ಎಷ್ಟು ಸಂಸ್ಕೃತಿಮಯ ವಾಗಿದ್ದಿತು ಎನ್ನುವ ವಿಚಾರ ತಿಳಿಯುತ್ತದೆ. ಊರು ಎಂದರೆ ಹೋಗಿಬರಲು ಮಾರ್ಗವಿಲ್ಲದಿದ್ದರೆ ಹೇಗೆ ? ಇಂತಹ ಸುಸಂಸ್ಕೃತರ ಮಧ್ಯೆ, ಸಂಭ್ರಮಗಳ ಮಧ್ಯೆ, ಅದೂ ವೇದಿಯರ್‌ಗಳು ನೆರೆಯುವಾಗ ದೇವರನ್ನು ಮಾತ್ರ ಬಿಸಿಲಿಗೂ ಮಳೆಗೂ ಸಿಲುಕಿಸಿ ಅವನಿಂದ ವರವನ್ನು ಮಾತ್ರ ಪಡೆಯುವ ಕೀಳ್ಮನಸ್ಸು ಅವರಿಗೆ ಇರಲ್ಲಾಂತ

ದೆಂದು ನನ್ನ ಊಹೆ. ಜನ ಹೀಗೆ ನಡೆದುಕೊಳ್ಳುವ ನಿಷ್ಕರುಣೆಗಳೆ ಎಂದು ಮನಸ್ಸು ಪ್ರಶ್ನೆ ಮಾಡುತ್ತದೆ. ಆದ್ದರಿಂದ ಬಹಳ ಹಿಂದೆಯೇ, ಎಂದರೆ ತೊಂಡಮಾನನ ಕಾಲದ್ದೇ ಆದ ದೇಗುಲ ಇದ್ದಿರಬಹುದಾದ ಸಾಧ್ಯತೆಗೆ ಒತ್ತಾಸೆ ದೊರೆಯುತ್ತದೆ.

ಮೊದಲ ಮೂರು ಆಳ್ವಾರ್‌ಗಳು ಒಂದು ಜಾತ್ರೆಯನ್ನು ವರ್ಣಿಸಿದರೆ, ತಿರುಮಳಿಶೈ ಆಳ್ವಾರ್ ಅವರು ಬ್ರಹ್ಮೋತ್ಸವದ (ಶ್ರವಣ ನಕ್ಷತ್ರದ) ವೈಭವವನ್ನು ಕೀರ್ತಿಸಿದ್ದಾರೆ, ತಮ್ಮ ತಿರುವಂದಾದಿಯಲ್ಲಿ! ಎಂದರೆ ಎರಡನೆಯ ಜಾತ್ರೆಯೂ ತಿರುಮಲೆಯ ಮೇಲೆ ವೈಭವೋಪೇತವಾಗಿ ನಡೆಯುತ್ತ ಜನರನ್ನು–ಲಕ್ಷಾಂತರ ವಲ್ಲದಿದ್ದರೂ ಸಹಸ್ರಾರು ಸಂಖ್ಯೆಯಲ್ಲಿ–ಆಕರ್ಷಿಸುತ್ತಿತ್ತು ಎನ್ನುವ ಚಿತ್ರ ಕಣ್ಣ ಮುಂದೆ ನಿಲ್ಲುತ್ತದೆ. ಸಾಲದ್ದಕ್ಕೆ ಇಷ್ಟು ಸೊಗಸಾದ ವೈಭವದಿಂದ ಕೂಡಿದ ಉತ್ಸವವನ್ನು ನೋಡಿದ ಮೇಲೆ ಮನುಷ್ಯಜನ್ಮವೇತಕ್ಕೆ ಎಂದು ವ್ಯಥೆಪಡುವ ಆಳ್ವಾರ್ ಪಾಶುರದ ವಿವರಣೆಯಿಂದ ಆ ಜಾತ್ರೆಯ ಸಂಭ್ರಮ ದೊರೆಯುತ್ತದೆ. ಇಂತಹ ವೈಭವೋಪೇತವಾದ ದೇವರು ಗುಡಿಯಿಲ್ಲದೆ, ರಾಜಾಶ್ರಯ ಮೊದಲಿನಿಂದ ಇದ್ದರೂ ಬಡವಾಗಿದ್ದನೇ ಎನ್ನುವ ಪ್ರಶ್ನೆ ಏಳದೇ ಇರದು.

ಇವೆಲ್ಲವನ್ನೂ ಅವಲೋಕಿಸುವಾಗ, ಚಿಂತನ ಮಂಥನ ಮಾಡುವಾಗ ಶ್ರೀ ರಾಯರ ವಾದಕ್ಕೆ ಸರಿಯಾದ ಹಿನ್ನೆಲೆ ಇರದೇ ಇರುವುದು ಅರಿವಾಗುತ್ತದೆ. ಆಗಲೇ ವೇಂಗಡದೊಡೆಯನಿಗೆ ದೊಡ್ಡ ಗುಡಿಯಿದ್ದು ಪೂಜಾ ವೈಭವದೊಡನೆ ಒಂದು ಅನುಕೂಲ ಹೊಂದಿದ ಊರಿನ ಮಧ್ಯೆ ಅವನು ಮೆರೆಯುತ್ತಿದ್ದಿರ ಬಹುದಾದ ಸಾಧ್ಯತೆ ಹುಲುಸಾಗಿ ಬೆಳೆಯುತ್ತದೆ. ಈ ವಾದದ ಹಿನ್ನೆಲೆಯಲ್ಲಿ ಶ್ರೀ ರಾಯರ 'ಪುರಿಂದು ಮಲರಿಟ್ಟ ಪುಂಡರೀಕ ಪಾದಂ' ಎನ್ನುವ ಪಾಶುರದ ಭಾವವನ್ನು ಪುನರಾವಲೋಕನ ಮಾಡಿದಾಗ ತಿಳಿಯುವ ಅಂಶಗಳಿಷ್ಟು.

ಒಂದು ಎತ್ತರವಾದ ಬೆಟ್ಟದ ಮೇಲೆ ಗುಡಿಯೊಂದು ನಿಂತಿದೆ ಎನ್ನೋಣ. ಒಳಗಿನ ಪರಮಾತ್ಮನು ಮಹಿಮಾನ್ವಿತ ಎಂದಾಗ ಸುತ್ತಮುತ್ತಣ ಜನ ಅವನಿಗೆ ಭಕ್ತಿಯಿಂದ ನಡೆದುಕೊಳ್ಳುವುದು ಸಹಜವೇ. ಅವರು ತಮ್ಮ ತಮ್ಮ ಗ್ರಾಮ ಗಳಿಂದಲೇ ದಿನ ಬೆಳಗಾದರೆ ಆ ಬೆಟ್ಟವನ್ನೂ ಅದರ ಮೇಲಿನ ದೇಗುಲವನ್ನೂ ಒಳಗಿನ ಸ್ವಾಮಿಯನ್ನೂ ಊಹಿಸಿಕೊಂಡು ಅತ್ತ ದೃಷ್ಟಿ ಮಾಡಿ ಹೇಳುವ ಮಾತು ಗಳಿವು : "ದೇವರು ಬೆಟ್ಟದ ಮೇಲೆ ನಿಂತು ನಮ್ಮನ್ನು ಕಟಾಕ್ಷಿಸುತ್ತಿದ್ದಾನೆ, ಸಂರಕ್ಷಿಸುತ್ತಿದ್ದಾನೆ." ದೇವರು ಒಂದೇ ದಿಕ್ಕಿಗೆ ತಿರುಗಿದ್ದರೂ ಸಹ, ದೇವಸ್ಥಾನದ ತಲೆವಾಗಿಲು ಒಂದೇ ದಿಕ್ಕಿಗೆ ಇದ್ದರೂ ಸರಿಯೆ, ಸುತ್ತಮುತ್ತಲಿನ ಹಲವು ಹತ್ತು ಗ್ರಾಮದ ಜನ "ಆ ದೇವರು ತಮ್ಮನ್ನೇ ನೋಡುತ್ತಿದ್ದಾನೆ. ಅನುಗ್ರಹ ಮಾಡುತ್ತಿದ್ದಾನೆ" ಎಂದೇ ನಂಬುತ್ತಾರೆ — ಇದು ಭಾವನೆ. ಈ ಭಾವನೆ ಮೂಡಿದಾಗ ಆ ದೇವರು ತೆರೆದ ತಾಣದಲ್ಲಿ ನಿಂತಿರುವನೆಂಬುದಾಗಿ ಏಕ

ಊಹಿಸಬೇಕು ? ದೇಗುಲದಿಂದ ದೇವರು ತಮ್ಮನ್ನು ಈಕ್ಷಿಸಿದರೂ ಅವನು ಬೆಟ್ಟದ ಮೇಲೆ ನಿಂತು ರಕ್ಷಿಸುತ್ತಿದ್ದಾನೆಂದೇ ಅಭಿಪ್ರಾಯ. ಇದು "ತೆರಿಂದು ಎಂಗುಂ ತಾನೋಂಗಿ ನಿನ್ರಾನ್" ಎನ್ನುವ ಪದ್ಯ ಭಾಗಕ್ಕೆ ಸಮರ್ಪಕ ವಾದ ಉತ್ತರವೆಂದು ನನ್ನ ಭಾವನೆ. ಇಷ್ಟಕ್ಕೂ ತಿರುಪತಿಯ ಬೆಟ್ಟವನ್ನು ದರ್ಶಿಸಿರುವವರಿಗೆ ತಿರುಪತಿಯ "ದೇವರು ತೆರಿಂದು ಎಂಗುಂ ತಾನ್ ಓಂಗಿ" ನಿಂತಿರುವುದು ಗೊತ್ತಾಗುವುದಿಲ್ಲ. ಏತಕ್ಕೆಂದರೆ ಅಲ್ಲಿನ ಸ್ಥಿತಿಯನ್ನು ಗಮನಿಸಿದರೆ ಸುತ್ತಲೂ ಬೆಟ್ಟ ಎತ್ತರಕ್ಕಿದ್ದು ಮಧ್ಯದ, ತಗ್ಗು ಪ್ರದೇಶದಲ್ಲಿ ದೇವಸ್ಥಾನ ವಿರುವುದು ಅರಿವಾಗುತ್ತದೆ. ಆದರೂ 'ಯದ್ಭಾವಂತದ್ಭವತಿ.' ಬೆಟ್ಟದ ಮೇಲೆ ಅವನು ಮನೆ ಮಾಡಿದ್ದಾನೆ. ತಮ್ಮನ್ನು ಅನುಗ್ರಹಿಸುತ್ತಿದ್ದಾನೆ ಎಂದು ಆ ಬೆಟ್ಟಕ್ಕೆ ಜನ ನಮಿಸುತ್ತಾರೆ. ಇನ್ನು 'ಪರಿಂದು ಪಡುಕಾಡುನಿರ್ಪ' ಎನ್ನುವ ಮಾತಿಗೆ ತನ್ನ ಮಂಟಪದ ಸುತ್ತ ಮುತ್ತ ಮಾತ್ರ ಕಡಿದಿದ್ದಾರೆ ಎಂದೇಕೆ ಅರ್ಥ ಮಾಡಬೇಕು ? ಬೆಟ್ಟದ ಬುಡದಿಂದ ತನ್ನ ಆಲಯದವರೆಗೂ ಕಾಡನ್ನು ಕಡಿದು ಮಧ್ಯೆ ದಾರಿ ಮಾಡಿಕೊಂಡಿದ್ದಾನೆ ಎಂದೇಕೆ ಅರ್ಥ ಏರ್ಪಡುವುದಿಲ್ಲ ? ಮೊದಲೇ ದೊಡ್ಡಬೆಟ್ಟ, ದುರ್ಗಮವಾದ ಅರಣ್ಯ, ದೂರ ಪ್ರಯಾಣ. ಅಂತಹ ದೀರ್ಘ ಪ್ರಯಾಣ ಯಾವ ಸ್ಥಳಕ್ಕೂ ಇರಲಿಲ್ಲ. ಆದರೆ ಆಗಲೇ ಜನ ಬೆಟ್ಟಕ್ಕೆ ಹೋಗಿ ಬರಲು ಕಾಡು ಕಡಿದು ಮೆಟ್ಟಿಲು ನಿರ್ಮಿಸಿದ್ದರು. ಇದೊಂದು ವಿಸ್ಮಯಜನಕವಾದ ವೃತ್ತಾಂತವೇ ಅಲ್ಲವೆ ! ಇಂತಹ ಅದ್ಭುತ ಸ್ಥಿತಿಯನ್ನೇ ಆಳ್ವಾರ್ "ಪರಿಂದು ಪಡುಕಾಡುನಿರ್ಪ" ಎಂದು ಭಾವಾವಿಷ್ಟರಾಗಿ ಹಾಡಿರ ವುದರಲ್ಲಿ ಆಶ್ಚರ್ಯವೇನು ? ಅಂತಹ ದೇವರು ದೇವತೆಗಳಿಗೂ, ಮಾನವರಿಗೂ ಆದರಣೀಯನೆಂದಾಗ ಆ ಹೊಗಳಿಕೆ ನೂರಕ್ಕೆ ನೂರು ಸತ್ಯ.

ಇದನ್ನು ಗಮನಿಸುವಾಗ ಮತ್ತೊಂದು ವಿಚಾರ ಜ್ಞಾಪಕಕ್ಕೆ ಬರುತ್ತೆ. ಒಂದು ಕಾಲಕ್ಕೆ ತಿರುಪತಿ ಯಾತ್ರೆಯೇ ಕಷ್ಟಕರವಾಗಿತ್ತು. ಜನ ಗುಂಪು ಗುಂಪಾಗಿ ಬೆಟ್ಟವನ್ನು ಹತ್ತುತ್ತಿದ್ದರು, "ಗೋವಿಂದಾ, ಗೋವಿಂದಾ" ಎಂದು ಅವರು ಕೂಗುತ್ತಾ ಸಾಗುತ್ತಿದ್ದರೆ ಅವರ ಕೂಗು ಗಗನವನ್ನು ಬೇಧಿಸುತ್ತಿದ್ದಿತು. ಕುಲಶೇಖರ ಆಳ್ವಾರ್ ಹೇಳುವಂತೆ 'ಘುಷ್ಯತೇಯಸ್ಯನಗರೇ ರಂಗಯಾತ್ರಾ ದಿನೇ ದಿನೇ' ಎನ್ನುವಂತೆ ರಂಗಯಾತ್ರಿಗಳ ಕೊರಲು ಧ್ವನಿಯಿಂದ ಇಡೀ ಶ್ರೀರಂಗವೇ ತುಂಬಿರುತ್ತಂತೆ ! ತಿರುಪತಿ ಒಂದು ಕಾಲಕ್ಕೆ ಗೋವಿಂದ ನಾಮಸ್ಮರಣ ದಿಂದ ತುಂಬಿರುತ್ತಿತ್ತು. ಇಂದಿನ ದಿನಗಳಲ್ಲಿ ಈ ಸಂಭ್ರಮ ಕಂಡುಬರುವುದಿಲ್ಲ. ಜನರೂ ಮೂರು ನಾಲ್ಕು ಸಂಸಾರದ ಮಂದಿಮಾರು ಒಟ್ಟಾಗಿ ಸೇರಿಕೊಂಡು ಯಾತ್ರೆಗೆ ಹೋಗುತ್ತಿದ್ದರು. ಇಂದಿನ ದಿನಗಳಲ್ಲಿ ಆ ಸಂಭ್ರಮ ಕಂಡುಬರುವುದಿಲ್ಲ; ನೋಡಬೇಕೆಂದರೂ ಸಿಕ್ಕುವುದಿಲ್ಲ. ತಿರುಮಲೆ ದೇವಸ್ಥಾನದಲ್ಲಿ ಕೂಡ ಇಂದಿನ

ಸುಸಂಸ್ಕೃತರೆಂದು ಹೇಳಿಕೊಳ್ಳುವ ಯಾತ್ರಾರ್ಥಿಗಳು ಗೋವಿಂದ ನಾಮಸ್ಮರಣೆಗೆ ಹಿಂತೆಗೆಯುತ್ತಾರೆ. ಇದು ನಾವು ಮುಂದುವರೆದಿರುವ ಸ್ಥಿತಿಯನ್ನು ತೋರಿಸುತ್ತದೆ. ಅಂತು ಅಂದು ಅವರು ತಿರುಪತಿ ಬೆಟ್ಟವನ್ನು ಹತ್ತಿಹೋಗ ಬೇಕಾದರೆ ಜೋರಾಗಿ ಈ ಗೋವಿಂದ ನಾಮಸ್ಮರಣೆ ಮಾಡುತ್ತಿದ್ದರು. ಇದರ ಕಾರಣ ಹಲವು ಬಗೆಯದು. ಒಂದು ಭಕ್ತಿ ; ಮತ್ತೊಂದು ದೀರ್ಘ ಪ್ರಯಾಣವು ಗಣನೆಗೆ ಬರದಿರಲು ; ಮತ್ತೊಂದು ಆಯಾಸ ತಿಳಿಯದಿರಲೆಂಬುದಾಗಿ ; ಮಗದೊಂದು ಕಾಡಿನ ಮಧ್ಯೆ ಸಾಗಬೇಕು. ಕಾಡಿನ ಮರ ಗಿಡ ಪೊದೆಗಳಲ್ಲಿ ಹುಲಿ ಸಿಂಹ ಮುಂತಾದ ಕಾಡುಪ್ರಾಣಿಗಳು ಅಡಗಿ ಕುಳಿತಿರುವ ಸಂಭವವುಂಟು. ಅವುಗಳಿಗೆ ತಾವು ಗುಂಪಾಗಿ ಹೋಗುತ್ತಿರುವುದರಿಂದ ಹೆದರಿಕೆ ಉಂಟುಮಾಡಲು ಈ ಉಪಾಯ. ಮತ್ತೊಂದು ಕಾರಣವೂ ಉಂಟು. ಕಳ್ಳಕಾಕರು ಕಾಡಿನಲ್ಲಿ ಅವಿತು ಕುಳಿತು ಯಾತ್ರಾರ್ಥಿಗಳ ಮೇಲೆ ಎರಗುತ್ತಿದ್ದ ಸಂದರ್ಭವೂ ಇದ್ದಿತು. ಜನ ಗುಂಪಾಗಿ ಹೋದರೆ ಅವರು ಮೇಲೆ ಕವಿಯಲು ಹಿಂಜರಿಯುತ್ತಿದ್ದರು. ತಮ್ಮ ಗುಂಪು ದೊಡ್ಡದಾಗಿದೆ ಎಂದು ತೋರ್ಪಡಿಸಿಕೊಳ್ಳಲು ಯಾತ್ರಾರ್ಥಿಗಳು ಗೋವಿಂದ ನಾಮಸ್ಮರಣೆಯನ್ನು ಜೋರಾಗಿ ಮಾಡುತ್ತಿದ್ದುದು. ತಾವು ಎಂತಹ ಅಪಾಯವನ್ನು ಎದುರಿಸಲೂ ಸಿದ್ಧರಿದ್ದೇವೆ ಎನ್ನುವ ಎಚ್ಚರಿಕೆ ಅದು. ಈ ರೀತಿಯ ತಿರುಪತಿ ಯಾತ್ರೆಯ ರಿವಾಜು ಈಗ್ಗೆ ೫೦–೬೦ ವರ್ಷಗಳ ಹಿಂದೆಯೂ ರೂಢಿಯಲ್ಲಿದ್ದಿತು. ಆಗ ಈಗಿನಂತೆ ಬಸ್ ಸೌಕರ್ಯವಿರಲಿಲ್ಲ. ಹೀಗೆ ಯಾತ್ರೆ ಮುಗಿಸಿಕೊಂಡು ಬಂದವರನ್ನು ಊರಿನ ಜನ ಸಂಭ್ರಮದಿಂದ ಸ್ವಾಗತಿಸಿ ಮನೆಗಳಲ್ಲಿ ಸಮಾರಂಭಗಳನ್ನು ನಡೆಸುತ್ತಿದ್ದರು. ಕಾರಣ ಅವರು ದೇವರ ದರ್ಶನ ಪಡೆದು ಪುಣ್ಯ ಗಳಿಸಿರುವ ಹಿರಿಯರು ಎಂಬುದಾಗಿ. ಸಾಲದ್ದಕ್ಕೆ ಜೀವಮಾನದಲ್ಲಿ ಒಮ್ಮೆಯೋ, ಎರಡು ಸಲವೋ ಸಂಘಟಿಸಬಹುದಾದ ಇಂತಹ ಸುಸಂಧಿಯನ್ನು ಸುಸೂತ್ರವಾಗಿ ಸಾಂಗವಶಾಡಿಕೊಂಡು ಬಂದಿರುವ ಸಂತೋಷ. ಪ್ರಾಣಾಪಾಯ ವಿಲ್ಲದೆ ಕಳ್ಳಕಾಕರು, ವನ್ಯಮೃಗಗಳ ಉಪಟಳಗಳಿಂದ ಪಾರಾಗಿ ಕ್ಷೇಮವಾಗಿ ಊರಿಗೆ ಹಿಂತಿರುಗಿದರಲ್ಲ, ಅದೇ ಪುನರ್ಜನ್ಮ ಬಂದಂತೆ ಎನ್ನುವ ಮತ್ತೊಂದು ಹಿರಿಯದಾದ ಭಾವ. ಈ ಎಲ್ಲ ಭಾವಗಳೊಂದಿಗೆ ತಿರುಪತಿ ಯಾತ್ರೆ ನೆಲಸಿತ್ತೆಂದು ಬೇರೆಯಾಗಿ ನಾವು ಹೇಳಬೇಕಾಗಿಲ್ಲ.

ಇಷ್ಟೊಂದು ಸಂಭ್ರಮವಾದ ತಿರುಪತಿ ತಿಮ್ಮಪ್ಪನಿಗೆ ಪ್ರಾಚೀನ ಕಾಲದಿಂದಲೇ ವೈಭವದ ಜಾತ್ರೆ, ಗುಡಿಗೋಪುರ ಇದ್ದಿರಬಹುದಾದ ಸಾಧ್ಯತೆ ಮೇಲಿನ ವಿಮರ್ಶನದಿಂದ ಲಭಿಸುತ್ತದೆ. ಆದರೆ ಆ ಗುಡಿಗೋಪುರಗಳು ಕಾಲಕ್ರಮದಲ್ಲಿ ಬಿದ್ದುಹೋಗಿಯೋ, ಶಿಥಿಲವಾಗಿಯೋ ಮತ್ತೆ ಬೇರೆ ಬೇರೆ ಕಾಲಗಳಲ್ಲಿ ಜೀರ್ಣೋದ್ಧಾರಗೊಂಡು ಇರಬಹುದಾದ ಕಲ್ಪನೆಗೆ ಸಾಕಷ್ಟು ಪೋಷಣೆ ದೊರೆಯುತ್ತದೆ.

ಇನ್ನು ಗುಡಿ ಇದ್ದರೆ ಅರ್ಚಕ, ಅರ್ಚಕನಿದ್ದರೆ ಪೂಜೆ ಎಲ್ಲ ಕ್ರಮವಾಗಿಯೇ ಸಾಗುತ್ತಿತ್ತು. ಜನ ಗರ್ಭಗುಡಿಯಿಂದ ಹೊರಗೆ ನಿಂತು ದರ್ಶನ ಪಡೆದರೂ ಅವರೇ ಪೂಜೆ ನಡೆಸಿದಂತೆಯೇ ಅರ್ಥ. ಈಗಲೂ "ಅವರು ಸೇವೆ ನಡೆಸಿದರು" ಎನ್ನುವ ಮಾತಿಗೆ ಅವರ ಪೂಜೆಯನ್ನು ಅರ್ಚಕ ಮುಖೇನವೋ ದೇವಸ್ಥಾನದ ಸಿಬ್ಬಂದಿಯ ಮೂಲಕವೋ ನಡೆಸುವುದು ಎಂದೇ ಅರ್ಥ. ಹೀಗೆ ಎಲ್ಲ ಜಾತಿಯ ಭಕ್ತರೂ ಹಿಂದಿನಿಂದಲೇ ನೆರೆದು ಎಲ್ಲರಿಗೂ ದೇವರಾಗಿ ಮೆರೆದ ಈ ಸ್ವಾಮಿಯನ್ನು ಆಳ್ವಾರ್ ಆಗಲೇ "ಅವರವರ್ ತಾಮ್ ತಾಮ್ ಅರಿಂದ ವಾರೇತ್ತಿ ಇವರಿವರ್ ಎಂಬೆರುಮಾನ್ ಎನ್ರುಂ" ಎಂದು ಹೇಳಿರುವುದರಲ್ಲಿ ಆಶ್ಚರ್ಯ ವೇನು ? ಈಗಲೂ ತಿರುಪತಿ ತಿಮ್ಮಪ್ಪನಿಗೆ ಭಕ್ತರು ಹಲವಾರು ಜಾತಿ ಪಂಥಗಳಿಗೆ ಸೇರಿದವರು. ಅವರು ತಿರುಪತಿಗೆ ಹರಕೆ ಹೊತ್ತು ಯಾತ್ರೆ ಹೋಗಿ ದೇವರಿಗೆ ನಡೆದುಕೊಳ್ಳುವುದನ್ನು ನಾವು ಕಾಣಬಹುದು. ಅವರವರ ಮನಸ್ಸಿನಲ್ಲಿ ಆ ದೇವರು ತಮ್ಮವನೆಂದೇ ಭಾವನೆ ತುಂಬಿರುತ್ತದೆ. ಅವರವರ ಭಾವನೆಗಳಿಗನುಸಾರ ವಾಗಿ ಆ ದೇವನನ್ನು ಪೂಜಿಸುತ್ತಾರೆ. ಎಂದರೆ ಅವರೇ ಗರ್ಭಗೃಹವನ್ನು ಹೊಕ್ಕು ದೇವರನ್ನು ಮುಟ್ಟಿಯೆ ಪೂಜಿಸಬೇಕೆಂಬ ಅರ್ಥ ಎಲ್ಲಿದ ? ಜನ ಧೂಪದೀಪಾದಿ ಹಣ್ಣು ಹಂಪಲನ್ನೊಯ್ದು ಅರ್ಚಕನ ಮೂಲಕ ಪೂಜೆ ಸಲ್ಲಿಸಿದರೂ ಕೂಡ ತಾವೇ ಪೂಜೆ ಸಲ್ಲಿಸಿದೆವೆಂದು ಹೇಳಿಕೊಳ್ಳುವುದು. ತಾವೇ ಪೂಜೆ ನಡೆಸಿದೆ ವೆಂದು ತೃಪ್ತಿಪಟ್ಟುಕೊಳ್ಳುವುದು. ಈ ರೀತಿಯ ಮುಕ್ತವಾದ ಸೇವೆ ತಿರುಮಲೆ ಯಲ್ಲಿ ಟಿ.ಟಿ.ಡಿ. ಆಡಳಿತ ಬರುವವರೆಗೂ ಜಾರಿಯಲ್ಲಿತ್ತು. ಆ ಸೇವೆಗೆ ಒಂದು ಕಾಲಕ್ಕೆ 'ದೊಂಬಿ ಸೇವೆ', 'ಧರ್ಮ ಸೇವೆ' ಎನ್ನುವ ಹೆಸರಿದ್ದಿತು. ಆದರೆ ಆ ದೊಂಬಿಯಲ್ಲೂ ಜನ ಸಾಕಷ್ಟು ಕಾಲ ನಿಂತು ಮನದಣಿಯೆ ದರ್ಶಿಸಿ ಆನಂದ ತೃಪ್ತಿಗಳನ್ನು ಹೊಂದುತ್ತಿದ್ದರು. ಅಷ್ಟೋತ್ತರಾದಿಗಳನ್ನು ನೆರವೇರಿಸಿಕೊಂಡು ತಾವೇ ತಂದು ನೀಡಿದ ಹಣ್ಣು ಹಂಪಲುಗಳನ್ನು ನಿವೇದನ ಮಾಡಿಸಿ ಪ್ರಸಾದವನ್ನು ಸ್ವೀಕರಿಸಿ ತೃಪ್ತಿಯಿಂದ ಹಿಂತಿರುಗುತ್ತಿದ್ದರು. ಈಗಿನ ವ್ಯವಸ್ಥೆಯಲ್ಲಿ ಈ ಮುಕ್ತ ಅವಕಾಶಾದಿಗಳು ಮಾಯವಾಗಿ ಬಿಟ್ಟು ಇರುವುದು ಭಕ್ತಾದಿಗಳ ಸೌಭಾಗ್ಯವೋ ದೌರ್ಭಾಗ್ಯವೋ ಹೇಳಲು ಶಕ್ತನಲ್ಲ. ಜನರೇ ಬೆಳಸಿಕೊಂಡ ಕಟ್ಟುಪಾಡಿಗೆ ವಿಮರ್ಶೆ ಮಾಡಿದರೂ ಫಲವಿಲ್ಲ.

೭

ಮತ್ತೊಂದು ಗೊಂದಲಮಯವಾದ ಸನ್ನಿವೇಶವನ್ನು ಶ್ರೀ ಪಿ. ಸೀತಾಪತಿ ಯವರು ತಮ್ಮ **'Sri Venkateswara'** ಪುಸ್ತಕದಲ್ಲಿ ೨೭ ರಿಂದ ೨೯ ವರೆಗಿನ ಪುಟಗಳಲ್ಲಿ ಪ್ರಸ್ತಾಪಿಸುವುದರ ಮೂಲಕ ಎತ್ತಿರುತ್ತಾರೆ.

We have then the more reliable evidence of the Alwars. It is well known that the early Alwars who were themselves Vaishnavas have in the songs composed by them conceded the 'Hari Hara' aspects of the Lord of Tirumalai—Thus Poygai Alwar sings about the Lord of Tirumalai as follows:

"His name Aran (Haran) and Naranan (Narayanan); His Vehicle, the Bull and the Bird; His word the Book and Morai; His house of residence, the Hill (kailasa) and the waters (ocean); His function destruction and protection; the weapon in hand the trident-spear and the disc; His form, though one is fire and dark cloud." (History of Tirupati by Dr. S. Krishnaswamy Ayyangar 1952, Page 30).

There are several other verses by the above Alwar in the same strain.

The two other Alwars Bhutam Alwar and Pay Alwar have sung several verses in the same strain.

"He has in his form the flowing matted locks (Jatai) the high peaked crown; The shining dagger and the chakram; The snake coilng him and the golden sutram round his waist. In him, my father on Thirumalai, the two forms have gracefully blended into one" (Pay Alwar's verse quoted from Pages 69-70. History of Tirupati by T.K.T. Veera Raghavacharya 1953).

"The golden hued Holy one (Siva) and the one who rose to the skies to encompass this earth Trivikrama Vishnu, the two may pass as separate ones, but the one is really in the other." (History of Tirupati by Sri T. K. T. Veera Raghavacharya, 1953, Page 70).

Nammalwar himself concedes the unity ... that Lord of Tirumalai is a Combina... Brahma etc.



"He has merged in himself Rudra, Brahma and Lakshmi after losing their separate entity. He pierced by his growth the highest heavens to encompass the creation. Is there a higher divinity than that of Vishnu ?" (History of Tirupati by Sri T. K. T. Veera Raghavacharya, 1953 Page 70)

Some of the views of the nature of the Lord Venkateswara's image have been indicated above. Devotees who flock to Lord Venkateswara at Tirumalai worship him in various forms as their 'Ista Daivam' as Lord Vishnu, Skanda or Subrahmanya, Siva, Sakti a combination of the Trimurthies Brahma, Vishnu and Siva or as Venkateswara a combination of Hari and Hara. There can be no finality in the arguments of any of threse devotees nor is it desirable to pursue such arguments of conflict and impertinence when the Lord is one and only one.

ಇದೇ ಪುಸ್ತಕದ ೮೯ನೆಯ ಪುಟದಲ್ಲಿ ಮತ್ತೆ ವಿಚಾರಧಾರೆ ಈ ರೀತಿ ಸಾಗಿದೆ :

The compositions of the first Poigai Alwar makes several references to Tirumalai and the Lord of Tirumalai. A verse quoted from Dr. Krishnaswamy Ayyangar's History of Tirupati reads as follows :

He rides the Bull and Bird
He burnt the castle (the three castles in the air)
And Broke open the heart (tore up Hiranyakashipu's)
Chest with his claws as Narasimha
He is smeared over with ash (Vibhuthi)
He is of the sapphire blue colour
Part of His body is a Lady (Parvathi)
And in one Part is the Lady born of the lotus.
Sri or Lakshmi His Coiffure the long matted locks
His Head (is) covered by a tall crown

He wears the Ganga (ganges) on his Head (Siva)
And on his lengthening foot (Trivikrama)

Another of his verses has already been quoted in Chapter II.

This Alwar appears to have regarded the Lord of Tirumalai as a combination of Vishnu and Siva.

The Second Alwar Bhutam Alwar author of the work 'Irandam Thiruvandadi' also a devotee of Vishnu regards the Lord of Tirumalai in one verse as the one who destroyed Ravana. Like Poigai Alwar he also visualised the supreme deity as a combination of the two forms of Siva and Vishnu or as Hari Hara.

The third in the list of early Alwars is Pay Alwar author of 'Munram Thiruvandadi' who also recognises the twin aspect of Hari Hara of Lord Vishnu. Two of his verses clearly mention (quoted in Chapter II of the book) that the Lord of Tirumalai has combined into one — the forms of Siva and Vishnu.

ಈ ಲೇಖಕರು ಮೂರ್ತಿಯನ್ನು ಶುಕ್ರವಾರದ ಅಭಿಷೇಕವಾಗುವಾಗ ದರ್ಶಿಸಿ ಅಡಿಯಿಂದ ಮುಡಿಯುವರೆಗೂ ವಿವರ ನೀಡಿರುವುದನ್ನು ಅವರ ಪುಸ್ತಕದ ೧೮–೧೯ನೆಯ ಪುಟಗಳಲ್ಲಿ ಮನವರಿಕೆ ಮಾಡಿಕೊಳ್ಳಬಹುದು. ಅದರಲ್ಲಿನ ಕೆಲವು ಸ್ವಾರಸ್ಯಗಳು ಇಂತಿವೆ.

"........................ The Lord's figure is richly adored with flowing locks of hair or Jata Juta and some of these locks of curly hair rest on his shoulders ..... the Lord wearing a Mukuta or Crown which is more than 20 inches high .... The Lord's, image has four arms, the upper two being carved to hold the chakram and conch; the chakram and conch are not integral parts of the main Idol .. .... Mother Lakshmi is carved on the right chest of the Lord in the sitting pose and is an integral part of the mula murthy......... The arms have armlets with finger like projections which

appear to be Nagabharanam or cobra ornament. A cobra is also said to be coiled around the Lord's right arm......... The nipples of the Lord in his chest are button like and are prominent. There is however a Katibhandam or waist band and it is about two inches thick.

ಮತ್ತೆ ಪುಟ ೨೩ ರಲ್ಲಿ ಮತ್ತೊಂದು ಮುಖ್ಯ ಅಂಶವು ಇಂತಿದೆ :

The image has a crescent mark on the head indicating that the image is Siva, if not Kumara Swamy.

ಮೇಲೆ ಶ್ರೀ ಸೀತಾಪತಿಯುವರು ಉದಾಹರಿಸಿರುವ ಶ್ಲೋಕಗಳು ಮೊದಲಾಳ್ವಾರ್‌ಗಳ ತಿರುವಂದಾದಿಗಳಲ್ಲಿ ಈ ಕೆಳಕಂಡಂತೆ ಇವೆ. ಇವುಗಳ ಅರ್ಥವನ್ನು ವಾಚಕರ ಅವಗಾಹನೆಗೆ ನೀಡಲಾಗಿದೆ. ಈ ಅರ್ಥಗಳು ಶ್ರೀ ಅನಂತರಂಗಾಚಾರ್ಯರ ಪುಸ್ತಕಗಳ ಮೇಲೆ ಆಧಾರಿತವಾಗಿದೆ.

ಮೊದಲ ಪಾಶುರ ಪೊಯ್ಗೈಯ್ ಆಳ್ವಾರ್ ಅವರ ಮೊದಲು ತಿರುವಂದಾದಿಯ ಐದನೆಯ ಪಾಶುರ

ಅರನ್ ನಾರಣನ್ ನಾಮಮ್ ಆನ್ ವಿಡ್ಡೈ ಪುಳ್ಳೂರ್ತಿ
ಉರೈನೂಲ್ ಮರ್ರೈ ಉರೆಯುಂ ಕೋಯಿಲ್ – ವರೈನೀರ್
ಕರುಮಂ ಅಳಿಪ್ಪು ಅಳಿಪ್ಪು ಕೈಯ್ಯದು ವೇಲ್ ನೇಮಿ
ಉರುವಂ ಎರಿಕಾರ್ ಮೇನಿಒನ್ಱು

ಹರ ಮತ್ತು ನಾರಾಯಣನೆಂಬ ಹೆಸರು. ಜ್ಞಾನವಿಲ್ಲದ ವೃಷಭ ಮತ್ತು ಗರುತ್ಮಂತ ವಾಹನ; ಆಗಮ, ವೇದಗಳು ಪುಸ್ತಕ ಪ್ರಮಾಣ. ವಾಸಸ್ಥಳ ಕೈಲಾಸ ಮತ್ತು ಮಹಾರ್ಣವವಾದ ಕ್ಷೀರಸಾಗರ. ಕಾರ್ಯ ಸಂಹಾರ, ರಕ್ಷಣೆ ಆಯುಧ ಭಲ್ಲೆ (ವೇಲ್) ಮತ್ತು ಸುದರ್ಶನ ಚಕ್ರ. ಶರೀರ, ಬೆಂಕಿ ಮತ್ತು ಕಾರ್ಮೇಘದಂತೆ. ರುದ್ರನು ಶರೀರ; ನಾರಾಯಣನು ಶರೀರಿ.

ರುದ್ರನ ಶರೀರದಲ್ಲಿ ನಾರಾಯಣನು ನೆಲಸಿ ಅವನ ಚಲನ, ಕಾರ್ಯಗಳಿಗೆ ಪ್ರೇರಕ ಶಕ್ತಿ ಆಗಿದ್ದಾನೆ ಎನ್ನುವ ಭಾವ. ವಿಶಿಷ್ಟಾದ್ವೈತದಲ್ಲಿ ಜೀವ ಶರೀರ ವಾದರೆ ಪರಮಾತ್ಮ ಶರೀರಿ. ಅದ್ವೈತದಲ್ಲಿ ಎಲ್ಲವೂ ಅವನೇ. ಈ ಮುಖ್ಯ ವ್ಯತ್ಯಾಸದಿಂದಲೇ ವಿಶಿಷ್ಟಾದ್ವೈತವನ್ನು ಶಾರೀರಿಕ ಮೀಮಾಂಸೆ ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಇದು ಬಹಳ ಮುಖ್ಯವಾದ ವಿಚಾರ. ಎಂದರೆ ಪರಮಾತ್ಮನಾದ ನಾರಾಯಣನಿಗೆ ಜೀವಾತ್ಮ ಶರೀರ, ವಾಸಸ್ಥಾನ ಎಂದರ್ಥ. ಈ ಸಿದ್ಧಾಂತದಲ್ಲಿ ಅವನಿಲ್ಲದೆ ಇವನಿರಲಾರ ಎಂದರೆ ನಮಗೆಲ್ಲಾ, ರುದ್ರನಿಗೂ ಸಹ ಪರಮಾತ್ಮನಾದ ನಾರಾಯಣನು ಆಧಾರಭೂತ. ನಾರಾಯಣನಿಲ್ಲದೆ

ರುದ್ರನಿಲ್ಲ, ಜೀವವಿಲ್ಲ. ರುದ್ರ ನಾರಾಯಣರು ಒಂದೇ ದೇಹವನಿಸುವುದಿಲ್ಲ. ಎಂದರೆ ನಾರಾಯಣನ ಪರತತ್ವವು ಇಲ್ಲಿ ವ್ಯಕ್ತಗೊಳ್ಳುತ್ತದೆ. ಇದು ವಿಷ್ಣು ಪರವಾದ ಅರ್ಥವೆನ್ನುತ್ತಾರೆ. ವಿಷ್ಣು ಶಿವ ಅಬೇಧವಲ್ಲ ಮೇಲ್ನೋಟಕ್ಕೆ. ಮೊದಲಿನ ಅರ್ಥ ಎಂದರೆ ಇಂಗ್ಲೀಷಿನಲ್ಲಿ ವಿವರಿಸಿರುವ ಅರ್ಥ ಸರಿಯಂತೆ ತೋರಬಹುದು.

ಇನ್ನು ಎರಡನೆಯ ಪಾಶುರ ಪೇಯಾಳ್ವಾರ್ ಅವರ ಮೂರನೆಯ ತಿರುವಂದಾದಿಯ ೬೩ನೆಯ ಪಾಶುರ

ತಾಟ್ ಶಡೈಯುಂ ನೀಳ್ ಮುಡಿಯುಂ ಒಣ್‌ಮುಟಿವುಂ ಶಕ್ಕರಮುಂ
ಶೂಟರವುಂ ಪೊನ್ನಾಣುಂ ತೋನ್‌ಜುಮಾಲ್ – ಶೂಟುಮ್
ತಿರುನ್ದರುವಿಪಾಯುಂ ತಿರುಮಲೈ ಮೇಲ್ ಎನ್ದೈಕ್ಕು
ಇರಂಡುರುವಮೊನ್‌ಜಾಯ್ ಇಶೈಂದ್

ಸಮೃದ್ಧವಾದ ನೀರಿನಿಂದ ಬಳಸಿರುವ ಕಾಲುವೆಯು ಪ್ರವಹಿಸುವ ತಿರುಮಲೆಯು ಮೇಲಿರುವ ನನ್ನ ಸ್ವಾಮಿಗೆ ಕೆಳಕ್ಕೆ ಕಟ್ಟಿದ ಜಟೆಯಿಂದಲೂ, ನೀಳ ಕಿರೀಟದಿಂದಲೂ, ಸುಂದರವಾದ ಶೂಲ ಮತ್ತು ಸುದರ್ಶನ ಚಕ್ರಗಳೂ ಸೊಂಟದ ನಾಗಾಭರಣ ಮತ್ತು ಸ್ವರ್ಣ ಉಡಿದಾರವೂ ಅಲಂಕಾರವಾಗಿದೆ. ಈ ರೀತಿ ಎರಡು ಸ್ವರೂಪವೂ (ಹರಿಹರ) ಕಲೆತು ಈ ಸ್ವಾಮಿಯಲ್ಲಿ ಸೇರಿ ಕೊಂಡಿದೆ. ಇದು ಆಶ್ಚರ್ಯವು.

ಪಿ. ಸೀತಾಪತಿಯವರು ಇದು ಹರಿಹರ ಅಭೇದವನ್ನು ತಿರುಮಲೈ ದೇವರಲ್ಲಿ ಕಾಣಿಸುವ ಪದ್ಯ ಎನ್ನುತ್ತಾರೆ. ನಿಜಕ್ಕೂ ಇದರ ರಚನೆ ವಿಚಿತ್ರ ವಾಗಿದೆ. ಮೇಲಿನ ಅರ್ಥಕ್ಕೆ ಹರಿಹರ ಸ್ವರೂಪಗಳು ಈ ದೇವನಲ್ಲಿ ಒಂದಾಗಿ ಕಲೆತುಕೊಂಡಿವೆ ಎಂದು ತೋರುತ್ತದೆ. ಆದರೆ ಶ್ರೀವೈಷ್ಣವ ವ್ಯಾಖ್ಯಾನದ ಪ್ರಕಾರ ಮೇಲೆ ಹೇಳಿದ ಪ್ರಕಾರವೇ ಇದಕ್ಕೂ ಅರ್ಥ ಮಾಡಬೇಕು. ಎಂದರೆ ಶಿವನು ವಿಷ್ಣುವಿನೊಡನೆ ಶರೀರವಾಗಿ ಇದ್ದುಕೊಂಡು ಈ ವಿಷ್ಣುವು ಶ್ರೀನಿವಾಸನಲ್ಲಿ ಅಂತರ್ಗತನಾಗಿ ಕಾಣಿಸುತ್ತಿದ್ದಾನೆ ಎನ್ನುವ ಅರ್ಥ. ಇಲ್ಲೀಯೂ ಶಿವ ಅಂಗ ವಿಷ್ಣು ಅಂಗಿ. ಈ ಅಂಗಿಯ ಮತ್ತೊಂದು ರೂಪ ಶ್ರೀನಿವಾಸ.

ಮೂರನೆಯ ಪಾಶುರ ಪೊಯ್ಗಯ್ ಆಳ್ವಾರರ ಮೊದಲ್ ತಿರುವಂದಾದಿಯ ೬೫ ನೇ ಪಾಶುರ.

ಪೊನ್ ತಿಗಳುಂ ಮೇನಿ ಪುರಿಶಡೈ ಅಮ್ ಪುಣ್ಣಿಯನುಂ
ನಿನ್‌ಜ ಉಲಗಂ ತಾಯ ನೆಡುಮಾಲುಂ – ಎನ್‌ಜುಂ
ಇರುವರಂಗತ್ತಾಲ್ ತಿರಿವರೇಲುಂ – ಒರುವನ್
ಒರುವನಂಗತ್ತು ಎನ್‌ಜುಂ ಉಳನ್.

ಚಿನ್ನದಂತೆ ಪ್ರಕಾಶಿಸುವ ದೇಹವುಳ್ಳವನು; ನೀಳವಾದ ಜಡೆಯುಳ್ಳವನೂ, ಪುಣ್ಯಶಾಲಿಯಾದ ರುದ್ರನು, ನಿಂತು ಲೋಕವನ್ನು ಅಳೆದ ಸರ್ವೇಶ್ವರನು ಎಲ್ಲೆಲ್ಲೂ ಎರಡು ದೇಹಗಳಿಂದ ಪ್ರತ್ಯೇಕವಾಗಿ ಸಂಚರಿಸುವವರಾದರೂ ಸಹ ಒಬ್ಬನು ಎಂದರೆ ರುದ್ರನು ಸ್ವಾಮಿಯಾದ ನಾರಾಯಣನ ಅಂಗದೊಳಗೆ ಉಳಿದುಕೊಂಡಿದ್ದಾನೆ. ಇಲ್ಲಿ ಅಂಗ ಅಂಗೀಭಾವ ಸ್ಪಷ್ಟವಾಗಿ ಕಂಡು ಬರುತ್ತದೆ.

ನಮ್ಮಾಳ್ವಾರ್ ಹೇಳಿರುವುದೆಂದು ಉದಾಹರಿಸಲ್ಪಟ್ಟಿರುವ ತಿರುವಾಯ್ಮೊಳಿಯ ದ್ವಿತೀಯ ಶತಕದ ದ್ವಿತೀಯ ದಶಕದ ಮೂರನೆಯ ಪಾಶುರ ಇಂತಿದೆ. ( ೨, ೨, ೩ )

ಏಱನೈಪ್ಪೂವನೈ ಪ್ಪೂಮಗಳ್ ತನ್ನೈ,
ವೇಱಿನ್‌ಱಿವಿಣ್‌ತೊಟಿತ್ತನ್ನುಳ್ ವೈತ್ತು
ಮೇಲ್ ತನ್ನೈ ಮಿಾದಿಡ ನಿಮಿರ್ನ್ದು ಮಣ್‌ಕೊಂಡ
ಮಾಲ್ ತನಿಲ್ ಮಿಕ್ಕುಮ್ ಓರ್ ತೇವುಮ್ ಉಳದೇ

ವೃಷಭ ವಾಹನನಾದ ರುದ್ರನನ್ನೂ, ಕಮಲೋದ್ಭವನಾದ ಬ್ರಹ್ಮನನ್ನೂ ಮತ್ತು ಪದ್ಮಜೆಯಾದ ಲಕ್ಷ್ಮಿಯನ್ನೂ ಕೂಡ ಬೇರೆಯೆಂಬಂತೆ ಇಲ್ಲದೆ ತನ್ನ ದೇಹದಲ್ಲಿ ಇಟ್ಟುಕೊಂಡು ಪರಮಪದ ವಾಸಿಗಳು ಸೇವಿಸುವಂತೆ ಊರ್ಧ್ವ ಲೋಕವನ್ನು ಸೀಳಿಕೊಂಡು ಅದು ಕೆಳಗೆ ಸಾರುವಂತೆ ಬೆಳೆದು ನಿಂತು ಭೂಮಿಯನ್ನು ಅಳೆದ ವಿಶ್ವವ್ಯಾಪಿಯಾದ ಸ್ವಾಮಿಗಿಂತ ಬೇರೆಯವರು ಅಧಿಕರು ಎನಿಸಲ್ಪಡುವ ದೈವ ಯಾವುದಾದರೂ ಉಂಟೇ.

ಇದರಲ್ಲಿ ವಿಷ್ಣುವಿನ ಸರ್ವವ್ಯಾಪಿ ಗುಣವನ್ನು ವಿವರಿಸಿದೆ ಎನ್ನುವ ಅಂಶ ವ್ಯಕ್ತಗೊಳ್ಳುತ್ತದೆಯಲ್ಲವೆ.

ಇನ್ನು ೮೯ನೆಯ ಪುಟದಲ್ಲಿ ಪಿ. ಸೀತಾಪತಿಯವರು ಉದಾಹರಿಸಿರುವ ಪಾಶುರ ಪೊಯ್ಗೈಯ್ ಆಳ್ವಾರರ ಮೊದಲ್ ತಿರುವಂದಾದಿಯ ೭೪ನೇ ಪಾಶುರ

ಪಿತ್ತಾನ್ ಪುಳ್ಳೂರ್ನ್ದಾನ್ ಎಯಿಲ್ ಎಱಿತ್ತಾನ್ ಮಾರ್ವಿಡಿಂದಾನ್
ನೀತ್ತಾನ್ ನಿಟಿಲ್ ಮಣಿವಣ್ಣತ್ತಾನ್, ಕೂತ್ತೊರುಪಾಲ್
ಮಂಗೈಯಾನ್ ಪೂಮಗಳಾನ್‌ವಾರ್ ಶಡೈಯಾನ್ ನೀಣ್ಮುಡಿಯಾನ್
ಕಂಗೈಯಾನ್ ನೀಟ್ ಕಟಿಲಾನ್‌ಕಾಪ್ಪು.

ವೃಷಭವಾಹನನೂ, ತ್ರಿಪುರಗಳನ್ನು ಸುಟ್ಟುಹಾಕಿದವನೂ ಭಸ್ಮಲೇಪಾದಿಯಿಂದ ರಂಜಿತನೂ, ಪಾರ್ವತಿಯನ್ನು ದೇಹದಲ್ಲಿ ಧಾರಣ ಮಾಡಿಕೊಂಡವನೂ ಆದ ರುದ್ರನು ಗರುಡ ವಾಹನನೂ, ಹಿರಣ್ಯಕಶಿಪುವಿನ ಎದೆಯನ್ನು ಬಗೆದವನೂ,

ಮಣಿವರ್ಣನೂ ಕಮಲವಾಸಿನಿಯಾದ ಲಕ್ಷ್ಮೀವಲ್ಲಭನೂ, ನೀಳ ಕಿರೀಟವುಳ್ಳವನೂ ದೀರ್ಘ ಶ್ರೀಪಾದಗಳಿಂದ ರಂಜಿತನೂ ಆದ ಸರ್ವೇಶ್ವರನು ರಕ್ಷಕನಾಗಿದ್ದಾನೆ.

ಶ್ರೀ ಪಿ. ಸೀತಾಪತಿಯವರು ಇಂಗ್ಲೀಷಿನಲ್ಲಿ ಉದಾಹರಿಸಿರುವ ವಿವರಿಸಿರುವ ಪಾಶುರಗಳ ತಮಿಳು ರೂಪ ಕನ್ನಡದ ಅರ್ಥ ಸಹಿತವಾಗಿ ಮೇಲೆ ಹೇಳಿದ್ದಾಯಿತು. ಶ್ರೀ ಸೀತಾಪತಿಯವರ ಹೇಳಿಕೆಯಂತೆ ಈ ಎಲ್ಲಾ ಪಾಶುರಗಳಲ್ಲೂ ವೇಂಗಡದೊಡೆಯನಿಗೆ ಸಂಬಂಧಪಟ್ಟ ಅಂಶಗಳಿವೆ ಎಂಬುದಾಗಿ ತಿಳಿಯುತ್ತದೆ. ವೇಂಗಡದೊಡೆಯನು ಶಿವ ಮತ್ತು ವಿಷ್ಣು ಎರಡು ಮೂರ್ತಿಗಳನ್ನು ಒಳಗೊಂಡಿದ್ದಾನೆ ಮತ್ತು ಆದರಿಂದ ಶಿವ ಮತ್ತು ವಿಷ್ಣುವಿನ ಅಬೇಧ ಸ್ವರೂಪವನ್ನು ತೋರಿಸುತ್ತಿದ್ದಾನೆ. ಈ ಅಬೇಧ ಸ್ವರೂಪವನ್ನೇ ಆಳ್ವಾರುಗಳು ತಮ್ಮ ಪಾಶುರಗಳಲ್ಲಿ ಹಾಡಿದ್ದಾರೆ, ವೇಂಗಡದ ಒಡೆಯನನ್ನು ವಿಷಯವನ್ನಾಗಿ ಇಟ್ಟುಕೊಂಡು ಎನ್ನುತ್ತಾರೆ. ಈ ವಿಚಾರದಲ್ಲಿ ಪಿ. ಸೀತಾಪತಿಯವರ ವಾದಕ್ಕೆ ಒದಗುವ ಹಿನ್ನೆಲೆಯ ಬಗ್ಗೆ ನಾಲ್ಕಾರು ಮಾತುಗಳನ್ನು ಆಡಬೇಕೆಂದು ಎನಿಸುತ್ತದೆ.

ಶ್ರೀ ಸೀತಾಪತಿಯವರು ಈ ಸ್ತೋತ್ರ (ಪಾಶುರಗಳ) ವಿವರಣೆಯನ್ನು ಡಾ॥ ಕೃಷ್ಣಸ್ವಾಮಿ ಅಯ್ಯಂಗಾರ್ಯರ ಮತ್ತು ಶ್ರೀ ಟಿ. ಕೆ. ಟಿ. ವೀರ ರಾಘವಾಚಾರ್ ಎಂಬುವವರ 'ಹಿಸ್ಟರಿ ಆಫ್ ತಿರುಪತಿ' ಎಂಬುವ ಒಂದೇ ಹೆಸರಿನ ಎರಡು ಪುಸ್ತಕಗಳ ಆಧಾರದಿಂದ ಪಡೆದಿರುವುದಾಗಿ 'ಶ್ರೀ ವೆಂಕಟೇಶ್ವರ' ಎನ್ನುವ ಪುಸ್ತಕದ ಅಡಿಟಿಪ್ಪಣಿಗಳಲ್ಲಿ ಸೂಚಿಸಿರುತ್ತಾರೆ. ಈ ಈರ್ವರ ಪುಸ್ತಕಗಳು ೧೯೩೨ ಮತ್ತು ೧೯೪೪ನೇ ಇಸವಿಗಳಲ್ಲಿ ಪ್ರಕಟಗೊಂಡಿವೆ. ಶ್ರೀ ಪಿ. ಸೀತಾಪತಿ ಅವರ ಪುಸ್ತಕದ ಮೊದಲನೇ ಆವೃತ್ತಿ ೧೯೭೮ರಲ್ಲಿ ಪ್ರಕಟವಾದದ್ದು. ಇದು ಮೂರು ನಾಲ್ಕು ಆವೃತ್ತಿಗಳನ್ನು ಕಂಡಿದೆ. ಈ ಪುಸ್ತಕದ ವಿವರದಿಂದ ಶ್ರೀ ಸೀತಾಪತಿಯವರು ಮೂಲ ಪಾಶುರಗಳನ್ನು ಪರಿಶೀಲಿಸಿಲ್ಲವೆಂಬುದಾಗಿಯೂ, ಅವರ ಅಭಿಪ್ರಾಯಗಳು ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಶ್ರೀ ಟಿ. ಕೆ. ಟಿ. ವೀರ ರಾಘವಾಚಾರ್ಯರ ವಿಚಾರ ವಾಹಿನಿಯ ಮೇಲೆ ಅವಲಂಬಿತವಾಗಿರುವುದನ್ನೂ ನಾವು ತಿಳಿಯಬಹುದು. ಶ್ರೀ ಎಸ್. ಕೆ. ರಾಮಚಂದ್ರರಾಯರು 'ತಮ್ಮ ತಿರುಪತಿ ತಿಮ್ಮಪ್ಪ'ದಲ್ಲಿ ಈ ಮೇಲ್ಕಂಡ ವಿದ್ವಾಂಸರಿಬ್ಬರ ಬಗೆಗೆ ಅವರ ಪ್ರಾಮಾಣಿಕ ವಸ್ತು ಸಂಗ್ರಹಣೆ ವಿಷಯ ನಿರೂಪಣೆ ಮತ್ತು ಉದಾಹರಣೆಗಳ ಮೇಲೆ ಮೆಚ್ಚುಕೆ ವ್ಯಕ್ತ ಪಡಿಸಿರುವುದನ್ನು ನೋಡಿದಾಗ ಅವರೂ ತಮ್ಮ ಪುಸ್ತಕಕ್ಕೆ ಈ ಮಹನೀಯರ ಗ್ರಂಥ ವಿಷಯಗಳನ್ನು ವಸ್ತುಗಳನ್ನಾಗಿಯೂ, ಪ್ರಮಾಣವಾಗಿಯೂ ಅಂಗೀಕರಿಸಿರುವುದಾಗಿ ತಿಳಿಯುತ್ತದೆ. ಶ್ರೀ ರಾಯರು ತಮ್ಮ ಪುಸ್ತಕದ x ಪುಟದಲ್ಲಿ

ಶ್ರೀ ಟಿ. ಕೆ. ಟಿ. ವೀರ ರಾಘವಾಚಾರ್ಯರ ಬಗೆಗೆ ಮೆಚ್ಚು ನುಡಿಗಳನ್ನು ಈ ರೀತಿ ಹೇಳುತ್ತಾರೆ: "ಗುಡಿಯ ಪ್ರಥಮಾಚಾರ್ಯ ಪರಂಪರೆಗೆ ಸೇರಿದ ಟಿ. ಕೆ. ಟಿ. ವೀರ ರಾಘವಾಚಾರ್ಯರು ಎರಡು ಸಂಪುಟಗಳಲ್ಲಿ ಇದೇ ಹೆಸರಿನಿಂದ (ತಿರುಪತಿಯ ಇತಿಹಾಸ) ಬರೆದ ಗ್ರಂಥಗಳಲ್ಲಿ (೧೯೫೩) ಇತಿಹಾಸ, ಆಗಮ ಪದ್ಧತಿಗಳು ಇವನ್ನು ಕುರಿತ ವಿವರಗಳು ದೊರೆಯುತ್ತವೆ. ವೀರ ರಾಘವಾಚಾರ್ಯರ ಬರಹದಲ್ಲಿ ಗುಡಿಯ ಬಗ್ಗೆ ಆದರವಿದೆ. ವಿವರಗಳನ್ನು ಕುರಿತಂತೆ ತೆರೆದ ಮನಸ್ಸಿನ ಪರಿಶೀಲನೆಯೂ ಇದೆ. ಮನೆತನದಲ್ಲಿ ವೈದಿಕರಾದರೂ ಅವರು ಲೌಕಿಕ ವೃತ್ತಿಯಲ್ಲಿದ್ದರೂ (ಇಂಜಿನಿಯರ್) ಕುರುಡು ನಂಬಿಕೆಗಳನ್ನು ಹರಿಯ ಬಿಡದೆ ಹರಿತವಾದ ವಿಮರ್ಶೆಯ ಮೂಸೆಯಲ್ಲಿ ಎಲ್ಲಾ ವಿವರಗಳನ್ನೂ ಪುಟವಿಟ್ಟು ನೋಡಿದ್ದಾರೆ. ಗುಡಿಗೆ ಸೇರಿದವರಾದರೂ ಅಲ್ಲಿ ನಡೆಯುವ ಅನ್ಯಾಯಗಳನ್ನು ಅಂಜದೆ, ಅಳುಕದೆ ಎತ್ತಿಹಿಡಿದಿದ್ದಾರೆ. ಅವರ ಬರಹದಲ್ಲಿ ಸೊಗಸೂ, ರುಚಿಯೂ ಇದೆ........"

ಮೇಲಿನ ಪಾಶುರಗಳನ್ನೂ, ಶ್ರೀ ಪಿ. ಸೀತಾಪತಿಯವರು ಹೊರಗೆಡಹಿರುವ ಶ್ರೀ ಕೃಷ್ಣಯ್ಯಂಗಾರ್ ಮತ್ತು ವೀರ ರಾಘವಾಚಾರ್ಯ ಅವರುಗಳ ಮೂಲ ಅಭಿಪ್ರಾಯಗಳನ್ನೂ, ಶ್ರೀ ರಾಮಚಂದ್ರರಾಯರ ಬಿಚ್ಚು ಮತ್ತು ಮೆಚ್ಚು ನುಡಿಗಳ ಬೆಳಕಿನಲ್ಲಿ ಪರಿಶೀಲಿಸಿದಾಗ ಈ ಮೆಚ್ಚುಗೆ ಎಷ್ಟರ ಮಟ್ಟಿಗೆ ಅವರು ಗಳನ್ನು ಅರ್ಹರನ್ನಾಗಿ ಮಾಡಿಸಿವೆ ಎಂಬುವುದು ತಿಳಿಯುತ್ತದೆ.

ಏಕೆಂದರೆ ಮೇಲೆ ವಿವರಿತವಾಗಿರುವ ಪಾಶುರಗಳು ಪೊಯ್ಗೈಯ್ ಆಳ್ವಾರ್‌ರ ಮೊದಲ್ ತಿರುವಂದಾದಿಯ ೫, ೯೮ ಮತ್ತು ೭೪ನೆಯ ಪಾಶುರಗಳು, ಪೇಯಾಳ್ವಾರ್ ಅವರ ಮೂರನೆಯ ತಿರುವಂದಾದಿಯ ೬೩ನೆಯ ಪಾಶುರ ಮತ್ತು ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯ ದ್ವಿತೀಯ ಶತಕದ ದ್ವಿತೀಯ ದಶಕದ ೩ನೇ ಪಾಶುರ. ಶ್ರೀ ವೆಂಕಟೇಶ್ವರ ಪುಸ್ತಕದ ಎರಡನೇ ಅಧ್ಯಾಯದಲ್ಲಿ ಪೇಯಾಳ್ವಾರ್ ಅವರ ಎರಡು ಪಾಶುರಗಳನ್ನು ಉದಾಹರಿಸಿರುವುದಾಗಿ ಶ್ರೀ ಪಿ. ಸೀತಾಪತಿಯವರು ಹೇಳಿ ಒಂದನ್ನು ಮಾತ್ರ ಕಾಣಿಸಿದ್ದಾರೆ. ಎರಡನೇ ಆಳ್ವಾರ್ ಅವರ ಒಂದು ಪಾಶುರವನ್ನೂ ಉದಾಹರಿಸಿಲ್ಲ. ಆದರೂ ಈ ಮೂವರು ಆಳ್ವಾರ್‌ಗಳು ತಮ್ಮ ಹಲವು ಪಾಶುರಗಳಲ್ಲಿ ಹರಿಹರ ಅಭೇದವನ್ನು ತಿರುಪತಿಯ ದೇವರಲ್ಲಿ ಗುರುತಿಸಿ ಹಾಡಿದ್ದಾರೆ ಎಂದು ಹೇಳಿದ್ದಾರೆ. ಮೇಲೆ ಉದಾಹರಿಸಿರುವ ಪಾಶುರಗಳಲ್ಲಿ ಪೇಯಾಳ್ವಾರ್ ಅವರ ತಿರುವಂದಾದಿಯ ೬೩ನೇ ಪಾಶುರವೊಂದನ್ನು ಬಿಟ್ಟು ಉಳಿದ ಯಾವ ಪಾಶುರಗಳಲ್ಲೂ ತಿರುಮಲೆಯ ದೈವದ ಪ್ರಸ್ತಾಪ ಇಲ್ಲ. ಇವುಗಳೆಲ್ಲಾ ವಿಷ್ಣುವನ್ನು ಕುರಿತ ಪಾಶುರಗಳು. ಅವನಲ್ಲಿ ಶಿವನ ಅಬೇಧವನ್ನು ವ್ಯಕ್ತಗೊಳಿಸುತ್ತದೆ ಎಂದು

ಹೇಳಲಾಗುವ ಪಾಶುರಗಳು. ಇವು ವೇಂಗಡದ ಒಡೆಯನಿಗೆ ಸಂಬಂಧಿಸಿಲ್ಲ ವೆಂದಾಗ ಶ್ರೀ ಪಿ. ಸೀತಾಪತಿಯವರು ಇದರಲ್ಲಿ ಹೇಗೆ ಶ್ರೀನಿವಾಸನ ಸಂಬಂಧ ವನ್ನು ಕಲ್ಪಿಸಿದರೆಂಬುವುದು ಅರ್ಥವಾಗದ ವಿಷಯ. ಹಾಗೆಯೇ ನಿಷ್ಪಕ್ಷವಾಗಿ ವಿಷಯ ನಿರೂಪಣೆ ಮಾಡುವವರೆಂದು ರಾಯರು ಹೊಗಳುವ ಶ್ರೀ ಕೃಷ್ಣಸ್ವಾಮಯ್ಯಂಗಾರ್ಯರಾಗಲೀ ವೀರ ರಾಘವಾಚಾರ್ಯರಾಗಲೀ ಈ ಎಲ್ಲ ಪಾಶುರಗಳಲ್ಲಿ ವೆಂಕಟೇಶ್ವರನ ಸಂಬಂಧವಿರುವುದಾಗಿ ಹೇಗೆ ಕಂಡುಕೊಂಡ ರೆಂಬುವುದು ಕುತೂಹಲವಾದ ವಿಷಯ. ಇದು ಸರಿಯಲ್ಲ. ಮೂರನೇ ಆಳ್ವಾರ್‌ರ ೬೩ನೇ ಪಾಶುರವೊಂದನ್ನುಳಿದು ಯಾವ ಉದಹರಿಸಲ್ಪಟ್ಟ ಪಾಶುರಗಳೂ ತಿರುಮಲೆಗೆ ಸಂಬಂಧಿಸಲ್ಪಟ್ಟುದಲ್ಲವೆಂದು ಈ ಮೂಲಕ ತಿಳಿಸುತ್ತೇನೆ. ಶ್ರೀ ಪಿ. ಸೀತಾಪತಿಯವರಾಗಲೀ, ಶ್ರೀ ಕೃಷ್ಣಯ್ಯಂಗಾರ್ಯ ರಾಗಲೀ ಅಥವಾ ಶ್ರೀ ವಿಜಯ ರಾಘವಾಚಾರ್ಯರಾಗಲೀ ಏತಕ್ಕೆ ಈ ರೀತಿ ತಪ್ಪು ಹೇಳಿಕೆ ನೀಡಿರುವರೆಂಬುವುದು ಅರ್ಥವಾಗದ ವಿಷಯ.

ಇದಿಷ್ಟೇ ಸಾಲದೆನ್ನುವಂತೆ ಶ್ರೀ ಸೀತಾಪತಿಯವರು ಮತ್ತೊಂದು ತಪ್ಪನ್ನು ಮಾಡಿದ್ದಾರೆ. There are several other verses by the above alwars in the same strain ಎನ್ನುವ ವಾಕ್ಯವನ್ನು ಪರಿಶೀಲಿಸೋಣ.

ಪೋಯ್ಗೈಯ್ ಆಳ್ವಾರ್ ಅವರ ತಿರುಪಂದಾದಿಯಲ್ಲಿ ಶಿವ ವಿಷ್ಣು ವಿಚಾರವಾಗಿ ಬರುವ ಪಾಶುರಗಳೆಂದರೆ ೪, ೫, ೧೫, ೨೮, ೪೬, ೭೪, ೯೭ ಮತ್ತು ೯೮ – ಈ ಎಂಟು ಮಾತ್ರ. ಇವುಗಳಲ್ಲಿ ಪಿ. ಸೀತಾಪತಿಯವರು ೫, ೨೮ ಮತ್ತು ೬೮ ಪಾಶುರಗಳನ್ನು ವಿವರಿಸಿದ್ದಾರೆ. ಆದರೆ ಈ ತಿರುಪಂದಾದಿ ಯಲ್ಲಿ ವೇಂಗಡದ ವಿಷಯವಾಗಿ ಬರುವ ಪಾಶುರಗಳು ಹತ್ತು ಎಂದು ಈ ಹಿಂದೆಯೇ ಪಟ್ಟಿಯಲ್ಲಿ ತಿಳಿಸಿ ಆಗಿದೆ. ಅವು ಯಾವುವೆಂದರೆ ೨೬, ೩೭, ೩೮, ೩೯, ೪೦, ೭೭, ೮೨, ೬೮, ೯೯ ಮತ್ತು ೭೬. ಈ ಪಾಶುರಗಳಿಗೂ ಮೇಲೆ ಕಾಣಿಸಿದ ಎಂಟು ಪಾಶುರಗಳಿಗೂ ಸಂಬಂಧವೇ ಇಲ್ಲದಿರುವಾಗ ಶಿವ ವಿಷ್ಣು ಅಬೇಧದ ವಿಷಯವನ್ನು ವೆಂಕಟೇಶ್ವರನಿಗೆ ಹೇಗೆ ಅನ್ವಯಗೊಳಿಸಿದರು ಆಳ್ವಾರುಗಳು ಎಂಬುವುದನ್ನು ಶ್ರೀ ಸೀತಾಪತಿಯವರೇ ತೋರಿಸಬೇಕಾಗಿದೆ.

ಇದೇ ರೀತಿ ಪೂದತ್ತಾಳ್ವಾರ್ ಅವರ ತಿರುಪಂಡಾದಿಯಲ್ಲಿ ಶಿವನ ವಿಷ್ಣುವಿನ ಪ್ರಸ್ತಾಪ ಬರುವ ಪಾಶುರಗಳು ಮೂರೇ ಮೂರು. ಅವು ೧೨, ೧೭ ಮತ್ತು ೬೩. ಈ ಆಳ್ವಾರ್ ತಿರುವೇಂಗಡದ ಮೇಲೆ ಹಾಡಿರುವ ಪಾಶುರಗಳು ೨೫, ೨೬, ೨೭, ೨೮, ೩೩, ೪೫, ೪೬, ೪೮, ೫೩, ೫೪, ೭೦, ೭ ೭೫ ಮತ್ತು ೧೩ ಪಾಶುರಗಳು. ಇಲ್ಲಿಯೂ ತಿರುವೇಂಗಡದ ಮೇಲೆ

ಹಾಡಿರುವ ಪಾಶುರಗಳೇ ಬೇರೆ, ಶಿವ ವಿಷ್ಣುವಿನ ಪ್ರಸ್ತಾಪ ಬರುವ ಪಾಶುರಗಳೇ ಬೇರೆ ಇರುವುದನ್ನು ಕಾಣಬಹುದು.

ಇನ್ನು ಮೂರನೇ ಆಳ್ವಾರ್ ತಿರುವಂದಾದಿಯಲ್ಲಿ ಶಿವ ವಿಷ್ಣುವಿನ ವಿಚಾರ ಪಾಶುರಗಳು ೨ರಲ್ಲಿ ಮಾತ್ರ. ಅವೇ ೬೩ ಮತ್ತು ೯೭. ಇದರಲ್ಲಿ ಪಾಶುರ ೬೩ ಒಂದರಲ್ಲಿ ಮಾತ್ರ ಶಿವ ವಿಷ್ಣು ಅಬೇಧ ಮತ್ತು ತಿರುಮಲೆಗೆ ಸಂಬಂಧಿಸಿದ ವಿಚಾರ ತಿಳಿದುಬರುತ್ತದೆ.

ಅಂತೂ ಈ ಮೂರು ಆಳ್ವಾರರ ಮೂರು ತಿರುವಂದಾದಿಗಳ ೩೦೦ ಪಾಶುರಗಳಲ್ಲಿ ಹರಿಹರ ಅಬೇಧ ಇರುವ ಮತ್ತು ಅದೇ ಪಾಶುರವು ತಿರು ವೇಂಗಡಕ್ಕೆ ಸಂಬಂಧಿಸಿದಂತೆ ಇರುವುದು ಕೇವಲ ಒಂದೇ ಒಂದು ಪಾಶುರ ಎಂದಾಗ ಶ್ರೀ ಪಿ. ಸೀತಾಪತಿ, ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಟಿ. ಕೆ. ಟಿ. ವೀರ ರಾಘವಾಚಾರ್ಯ ಇವರ ವಾದಗಳು ಸರಿಯಾದ್ದಲ್ಲವೆಂದು ಹೇಳಲೇಬೇಕಾಗುತ್ತದೆ. ರಾಯರು ಶ್ರೀ ಅಯ್ಯಂಗಾರ್ಯ ಮತ್ತು ಟಿ. ಕೆ. ಟಿ. ವೀರ ರಾಘವಾಚಾರ್ಯರನ್ನಾಗಲೀ ಹೇಗೆ 'ದೃಢವಾದಿ' (authority) ಯರನ್ನಾಗಿ ಒಪ್ಪಿದ್ದಾರೆ ಎಂಬುವುದು ಗೋಚರವಾಗದೇ ಇರುವ ವಿಚಾರ. There are several other verses by the Alwars in the same strain ಎಂದು ಹೇಳುವ ಸೀತಾಪತಿ ಅವರ ಹೇಳಿಕೆ ತಪ್ಪಾಗುತ್ತದೆಯಷ್ಟೆ !

ಸೀತಾಪತಿಯವರು ಈ ಹಿಂದೆಯೇ ಹೇಳಿರುವಂತೆ ಈ ವೇಂಗಡದೊಡೆಯನು ವಿಷ್ಣುವೋ, ಶಿವನೋ, ಸುಬ್ರಹ್ಮಣ್ಯನೋ, ಶಕ್ತಿದೇವತೆಯೋ ಎನ್ನುವ ಜಿಜ್ಞಾಸೆ ಬಹಳ ಕಾಲದಿಂದಲೂ ನಡೆದುಬಂದಿದೆ. ಆದರೆ ಬಹಳ ಪ್ರಾಚೀನ ಕಾಲದ ತಮಿಳು ಗ್ರಂಥಗಳಿಂದಲೂ, ಆಳ್ವಾರ್ ಪಾಶುರಗಳಿಂದಲೂ ಈ ವಿಗ್ರಹ ವಿಷ್ಣುವಿನದೇ ಎಂದು ಸ್ಥಿರಪಡುತ್ತದೆ. ಈ ಜಿಜ್ಞಾಸೆ ಏರ್ಪಡುವುದಕ್ಕೆ ಶ್ರೀ ಸೀತಾಪತಿಯವರೇ ಹೇಳುವಂತೆ (i) ವಿಗ್ರಹಕ್ಕೆ ಜಟೆಯಿದೆ. ಜಟೆಯೆಂದರೂ ಸೀತಾಪತಿಯವರೇ ಹೇಳುವಂತೆ ತಲೆಕೂದಲು ಕ್ಷತ್ರಿಯರ ತರಹ ಕತ್ತಿನ ಹಿಂಭಾಗದವರೆಗೂ ಇಳಿಬಿದ್ದಿರುವುದು ಅಥವಾ ಹಬ್ಬಿರುವುದು. (ii) ವಿಗ್ರಹಕ್ಕೆ ನಾಲ್ಕು ಕೈಗಳಿವೆ ಎಂದರೂ ಎರಡು ಕೈಗಳು ಶಂಖ ಚಕ್ರಗಳನ್ನು ಧರಿಸಲು ಇವೆ. ಎಂದರೂ ಶಂಖ ಚಕ್ರಗಳು ವಿಗ್ರಹದ ಅವಿಭಾಜ್ಯ ಅಂಗವಾಗದೇ ಇರುವುದು. (iii) ವಿಗ್ರಹವು ಶೂಲವನ್ನು ಹಿಡಿದಿದೆ ಎನ್ನುವ ಅಂಶ ಶ್ಲೋಕದಲ್ಲಿರುವುದು ; ಶೂಲವು ಕಾಣಸಿಗುವುದಿಲ್ಲ. (iv) ವಿಗ್ರಹದ ಭುಜದ ಮೇಲೆ ನಾಗಾಭರಣವಿರು ವುದು. (v) ನಡುಪಟ್ಟಿಯಲ್ಲಿಯೂ ನಾಗಾಭರಣವು ಉಡಿದಾರದ ಮೇಲೆ ಇರುವುದು. (vi) ಸೀತಾಪತಿಯವರು ಜಟೆಯಲ್ಲಿ ಚಂದ್ರನ ಗುರುತಿದೆ ಎನ್ನುತ್ತಾರೆ. (vii) 'ಅಪ್ಪನ್' ಎನ್ನುವ ಹೆಸರು ಕುಮಾರಸ್ವಾಮಿಗೂ

ಬಳಸಲ್ಪಡುತ್ತದೆಯಂತೆ. (viii) ಸ್ವಾಮಿಪುಷ್ಕರಣಿ ಎನ್ನುವ ಹೆಸರು 'ಕುಮಾರ' ಪದಸೂಚಕವಂತೆ. (ix) ಕುಮಾರಧಾರ ಎನ್ನುವ ತೀರ್ಥವೊಂದು ಉಂಟು.

ಈ ವಿಚಾರದಲ್ಲಿ ಆಸಕ್ತಿ ಉಳ್ಳವರು "ಆಳ್ವಾರುಲ ಮಂಗಳಾಶಾಸನ ಪಾಶುರಮುಲು" ಎನ್ನುವ ಪುಸ್ತಕದಲ್ಲಿ ಪ್ರತಿಯೊಂದು ಅಂಶವನ್ನೂ ವಿಶ್ಲೇಷಿಸಿ ಕಡೆಗೆ ಈ ವಿಗ್ರಹ ವಿಷ್ಣುವಿನದೇ ಎಂದು ಸಿದ್ಧಪಡಿಸಿರುವ ವಿವರಗಳನ್ನು ಓದಿ ಮನಗಾಣಬಹುದು.

ಜೈನ ಕವಿ 'ಐಯನಾರಿದನಾರ್' ಎನ್ನುವವನೇ ತನ್ನ 'ಪರಪ್ಪೊರುಳ್' ಎನ್ನುವ ವೆಣ್ಬಾ ಮಾಲೆಯಲ್ಲಿ "ಪುಲವರಾಟ್ರುಪ್ಪಡೈ" ಎನ್ನುವ ಭಾಗದಲ್ಲಿ

ವೆಱಿಕೊಳ್ ಅಱ್ವೈಯರುವಿ ವೇಂಗಡಚ್ಚೆಲ್ವನ್
ನೆಱಿಕೊಳ್ ಪಡಿತ್ತಾಯ್ ನೀಯುಮ್ – ಪೊಱಿಗಳ್ಕ್ಕ
ಇರುಳೀಯುಂ ಜ್ಞಾಲತ್ತಿಡರೆಲ್ಲಾಂ ನೀಂಗಿ
ಅರುಳೀಯುಂ ಆಱಿಯುವನ್

ಎಂದಿದ್ದಾನೆ. ಆಱಿಯುವನ್ ಎಂದರೆ ಚಕ್ರ ಹಿಡಿದಿರುವವನು, ವಿಷ್ಣು ಎಂದರ್ಥ ಹೇಳುತ್ತಾನೆ.

ಶಿವ ಪುರಾಣ ಬರೆದವರು ಶಿವನೆಂದು ಹಾಡುತ್ತಾರೆ.

ವೇಂಗಡನಾದನ್ನೈ ವೇದಾಂತಕ್ಕೂತ್ತನ್ನೈ
ವೇಂಗಡತ್ತುಳ್ಳೈ ವಿಳ್ಳೈಯಾಡುಂ ನಂದಿಯ್ಯೈ
ವೇಂಗಡಂ ಎನ್ರೇ ವಿಱಗರಿಯಾದವರ್

ಇದು ತಿರಮಲ ನಾಯನಾರ್ ಎನ್ನುವವರು ವರ್ಣಿಸಿರುವ ರೀತಿ. (ತಿರುಮಲೆ ಎನ್ನುವುದು ಈ ಕವಿಯ ಹೆಸರು. ಎಂದರೆ ತಿರುಮಲೆ ಎನ್ನುವ ಹೆಸರು ಈ ಗಿರಿಗೆ ಬಹಳ ಪ್ರಾಚೀನ ಕಾಲದಿಂದಲೇ ಅನ್ವಯಗೊಂಡಿದ್ದೂ ಮಾತ್ರವಲ್ಲದೆ ಜನರಲ್ಲೂ ಪ್ರಖ್ಯಾತವಾಗಿಯೇ ಪ್ರಚಾರಗೊಂಡಿತ್ತು ಎನ್ನುವುದಕ್ಕೆ ಇದೂ ಮತ್ತೊಂದು ಆಧಾರ. ಈ ಕವಿಗಳು ಆಳ್ವಾರ್‌ಗಳ ಕಾಲಕ್ಕೂ ಹಿಂದಿನವರು. ಕ್ರಿ.ಶ. ೧ ರಿಂದ ೪ ಶತಮಾನದವರಿರಬೇಕು.)

ಅರಿಯಾರುಂ ಪೂಂ ಪೋಟಿಲ್ ಶೂಟಿಯ್ ಅಮ್ಮಾತ್ತೂರಮ್ಮಾನ್
ಅರಿಯಾರುಂ ಪೋಗತ್ತಮುದನ್ — ಅರಿಯಾರುಂ
ವೇಂಗಡತ್ತು ಪ್ಯೈಯ್ಯಾನ್ನೈ ಮೇವಾಲುಯಿರೆಲ್ಲಾಂ
ವೇಂಗಡತ್ತು ನೋಯಿಲ್ ಶಿರಂದು

ಎಂದಿದ್ದಾನೆ. ಕಪಿಲದೇವ ನಾಯನಾರ್ ಎನ್ನುವ ಕವಿ ಶಿವ ಪೆರುಮಾನ್ ತಿರುವಂದಾದಿಯಲ್ಲಿ

ಮಿನ್‌ಪ್ಪೋಲುಂ ಶೆಂಜಡೆಯಾನ್ನೈ ಮಾಲೋಡುಂ ಈಂಡಿಶೈನ್ದಾಲ್
ಎನ್ ಪ್ಪೋಲುಂ ಕಾಣ್ಬಾರ್ ಕಟ್ಕ್ ತೋನ್ರಿರೇಲ್ - ತನ್‌ಪ್ಪೋಲುಂ
ಪ್ಪೊರ್ಕುನ್ರುಂ ನೀಲಮಣಿಕ್ಕುನ್ರುಂ ತಾಮುಂಡನೇ
ನಿರ್ಕಿನ್ರ ಪ್ಪೋಲುಂ ನೆಡಿದ್

ಕಾರೆಕಾಲಮ್ಮನು ಹಾಡುವ ರೀತಿ ಇದು. ಆದರೆ ಶೇರಮಾನ್ ಪೆರುಮಾನ್ ಎನ್ನುವ ಕವಿಯು ಈ ದೇವರಲ್ಲಿ ಹರಿಹರ ಅಭೇಧವನ್ನು ಕಂಡಿದ್ದಾನೆ.

ಇಡುಮಾಲ್ ಪಲಂದಾನಿಡಂಬಾಲ್
ತುಟಿಾಯ್ ವಲಪ್ಪಾಲೊಣ್‌ಕೊನ್ರ
ಪಡಿಮಾಲಿಡುನ್ದುಗಿಲ್ ತೋಲ್ ವಲಂ
ಆಟಿಯಿಡಂ ವಲಮಾನ್
ಇಡಮಾಯ್ ತರಿದಾಲ್ ನಲಂಗಾರ್
ಕುಡ ಮಾಲಿಡಯ್ ವಲಂ
ಕೊಕ್ಕರೆಯಾಮೆನ್‌ಗಳ್ ಕೂತ್ತನುಕ್ಕೇ

ಈ ವಿಗ್ರಹವು ಶಂಖ ಚಕ್ರಗಳನ್ನು ಧರಿಸಿರುವುದು ಎಂದು ಹಿಂದಿನಿಂದಲೇ ಪ್ರಸಿದ್ಧವಾಗಿದೆ. ಆದರೆ ಶಿವನ ಜಟೆಯಂತೆ ಸ್ಪಷ್ಟ ಜಟಾಜೂಟವೂ ಅರ್ಧ ಚಂದ್ರವೂ, ಕತ್ತಿನ ಸುತ್ತಲೂ ನಾಗಾಭರಣವೂ, ಹಣೆಯಲ್ಲಿ ಭಸ್ಮ ತ್ರಿಪುಂಡ್ರ, ತ್ರಿಣೇತ್ರವೂ ಇಲ್ಲದಿರುವುದೂ, ಎದುರಿಗೆ ನಂದಿಯಂೂ ಇರದೇ ಇರುವುದು ತ್ರಿಶೂಲ, ಢಮರುಗಗಳು ಲೋಪವಾಗಿರುವುದೂ ಇದು ಶಿವನ ವಿಗ್ರಹವಲ್ಲವೆಂಬುದಕ್ಕೆ ಸಾಕ್ಷ್ಯಗಳೆಂದು ಹಲವರು ವಾದಿಸುತ್ತಾರೆ. ಜೊತೆಗೆ ಶಿವನಿಗೆ ಜಟೆಯೇ ಎತ್ತಿ ಕಾಣುವುದನ್ನು ನಾವು ಎಲ್ಲ ಎಡೆಯಲ್ಲೂ ಕಂಡಿದ್ದೇವೆ. ಶಿವನು ಕಿರೀಟ ಧಾರಣ ಮಾಡಿಕೊಂಡಿರುವ ಲಕ್ಷಣ ಎಲ್ಲೂ ಕಂಡಿಲ್ಲ, ಕೇಳಿಲ್ಲ. ಆದರೆ ಈ ವಿಗ್ರಹಕ್ಕಾದರೋ ಕಿರೀಟವಿದೆ ಎನ್ನುತ್ತಾರೆ. ಮತ್ತೊಂದು ಮುಖ್ಯ ವಿಚಾರ. ಶಿವನು ವಿಗ್ರಹರೂಪದಿಂದ ಯಾವ ಗುಡಿಯಲ್ಲೂ ಪೂಜೆಗೊಳ್ಳದಿರುವುದು. ಅವನ ಲಿಂಗರೂಪಕ್ಕೇ ಎಲ್ಲಾ ಕ್ಷೇತ್ರಗಳಲ್ಲೂ ಪೂಜೆ ಸಲ್ಲಿಸುವುದು ಆಗಮ ಶಾಸ್ತ್ರದಲ್ಲೇ ವಿಧಿವಿಧಾನವಾಗಿ ಪರಿಗಣಿಸಲ್ಪಟ್ಟಿದೆ. ಈಶ್ವರನಿಗೆ ನಾಗಾಭರಣ ತೋಳು ನಡುಗಳಲ್ಲಿ ಇರುವುದಾಗಿ ವರ್ಣಿತವಾಗಿಲ್ಲ. ಈ ಎಲ್ಲ ಲಕ್ಷಣಗಳ ಬೇಧವನ್ನು ಕಂಡಿರುವ ಲಾಕ್ಷಣಿಕರು ಈ ವಿಗ್ರಹ ಶಿವನದಲ್ಲವೆಂದು ನಿರ್ಧರಿಸಿದ್ದಾರೆ.

ಇದು ನಾವೂ ಒಪ್ಪತಕ್ಕ ವಿಚಾರ. ಒಂದು ವಿಷಯ ಮಾತ್ರ ಅಗೋಚರವಾಗಿಯೇ ಉಳಿಯುತ್ತದೆ. ಇದು ಸಮೂದಿಸಲ್ಪಡುವ ಅಂಶ. ಈ ವಿಗ್ರಹದ ಅವಿಭಾಜ್ಯ 'ಅಂಗಗಳೆಂದು ಶಂಖ ಚಕ್ರಗಳನ್ನು ತಿಳಿಸುತ್ತಾರೆ. ಈ ಶಂಖ ಚಕ್ರಗಳನ್ನು ದೇವರ ತಿರುಮಜ್ಜನದ ಸಮಯದಲ್ಲೂ ಕಳೆಯುವುದಿಲ್ಲವೆನ್ನುತ್ತಾರೆ. ಅವುಗಳನ್ನು ರಾಮಾನುಜಾಚಾರ್ಯರು ಈ ವಿಗ್ರಹ ವಿಷ್ಣುವಿನೆಂದು ಸ್ಥಿರಪಡಿಸಲೋಸುಗ ಅವರ ಕಾಲದಲ್ಲಿ ಪ್ರಯಾಸ ಪಟ್ಟು ಅಳವಡಿಸಿದ್ದಾಗಿ ಕಥೆಯಿದೆ. ರಾಮಾನುಜರನ್ನು "ಅಪ್ಪನುಕ್ಕ್ ಚಂಗಾಟಿಯೆಟುತ್ತರುಳುಂ ಪೆರುಮಾಳ್" ಎಂದು ಹೊಗಳುತ್ತಾರೆ. ಆದರೆ ಅವರಿಗಿಂತ ಬಹಳ ಹಿಂದಿನ ಆಳ್ವಾರ್‌ಗಳು ಸ್ಪಷ್ಟವಾಗಿ ವೇಂಗಡದೊಡೆಯನು ಶಂಖಚಕ್ರಧಾರಿಯೆಂದೇ ಹಾಡಿದ್ದಾರೆ. ಹಾಗಾದರೆ ಆಳ್ವಾರುಗಳ ಕಾಲದಲ್ಲಿ ಅವರು ಕುಡ ಶಂಖ ಚಕ್ರಗಳು ಏನಾದವು. ಇಲ್ಲಿ ಆಳ್ವಾರುಗಳು ಹಾಡಿರುವುದೇ ಸುಳ್ಳೆ ? ಇಲ್ಲಿ ಆಳ್ವಾರುಗಳು ಗುರುತಿಸಿದ್ದ ಶಂಖ ಚಕ್ರಗಳನ್ನು ಜೈನ ಬೌದ್ಧ ಶಾಕ್ತೇಯ ಕಾಪಾಲಿಕರು ಪ್ರಾಬಲ್ಯರಾಗಿದ್ದ ಕಾಲದಲ್ಲಿ ನಷ್ಟಗೊಳಿಸಿರಬಹುದಾದ ಸಂದರ್ಭ ಏರ್ಪಟ್ಟಿರುವುದೇ ? ಇದಕ್ಕೆ ಪೂರಕವೆನ್ನುವಂತೆ ಒಂದು ವಿಚಿತ್ರ ಕತೆಯು ಪ್ರಚಾರದಲ್ಲಿದೆ. ಕಲಿಯುಗದಲ್ಲಿ ತನ್ನ ಪರಮ ಭಕ್ತನಾದ ತೊಂಡಮಾನ್ ಚಕ್ರವರ್ತಿಯು ಶತ್ರುನಿಗ್ರಹಕ್ಕಾಗಿ ಬೇಡಿಕೊಳ್ಳಲು ಪರಮ ಕಾರುಣಿಕನಾದ ಶ್ರೀನಿವಾಸನು ತನ್ನ ಶಂಖ ಚಕ್ರಗಳನ್ನೇ ಅವನಿಗೆ ನೀಡಿದನಂತೆ. ಶಂಖ ಚಕ್ರಗಳಿಲ್ಲದ ಸ್ವಾಮಿಯನ್ನು ಕಂಡ ಕಾಳಹಸ್ತಿಯ ಕೆಲವು ಶೈವರು ಆಗ ರಾಜನಾಗಿದ್ದ ಯಾದವರಾಯನೆಂಬುವನ ಮನಸ್ಸನ್ನು ಕೆಡಿಸಿ ತಿರುಮಲೆಯ ದೇವರು ಕುಮಾರಸ್ವಾಮಿ ಎಂಬುದಾಗಿಯೂ, ಶಿವನೆಂಬುದಾಗಿಯೂ, ಹರಿಹರ ಮೂರ್ತಿಯೆಂಬುದಾಗಿಯೂ ತಮ್ಮ ಮನಸ್ಸಿಗೆ ಬಂದಂತೆಲ್ಲಾ ಕಥೆ ಕಟ್ಟಿ ನಂಬಿಸಿ ಆ ದಿವ್ಯ ಕ್ಷೇತ್ರವನ್ನು ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸುತ್ತಿರಲು, ಆ ದಿವ್ಯಕ್ಷೇತ್ರದಲ್ಲಿದ್ದ ಶ್ರೀವೈಷ್ಣವರು ಮಾರ್ಗ ಕಾಣದೆ ರಾಮನುಜಾಚಾರ್ಯರನ್ನು ಶ್ರೀರಂಗದಿಂದ ಕರೆಸಿ ಆ ರಾಜನಿಗೆ ನಿಜಸ್ಥಿತಿ ಅರಿವಾಗುವಂತೆ ಮಾಡಿ ಮತ್ತೆ ಸ್ವಾಮಿಗೆ ಶಂಖ ಚಕ್ರಗಳನ್ನು ಧಾರಣ ಮಾಡಿಸಿ ಶ್ರೀವೈಷ್ಣವ ವಿಗ್ರಹವಾಗುವಂತೆ ಏರ್ಪಡಿಸಿದರು ಎಂಬ ವಿವರಣೆ "ಕೋವಿಲೊಳುಗು" ಎನ್ನುವ ಪುಸ್ತಕದಲ್ಲಿ ವಿದಿತವಾಗಿದೆ. ಇದು ಸ್ವಲ್ಪ ವಿಚಿತ್ರವೂ, ಉತ್ಪ್ರೇಕ್ಷೆಯಿಂದ ಕೂಡಿರುವುದು ಎನಿಸಿದರೂ ಕೂಡ ಇದರಲ್ಲಿ ಸ್ವಲ್ಪವಾದರೂ ಸತ್ಯಾಂಶ ಇರಲೇಬೇಕು ಎನಿಸುತ್ತದೆ. ತೊಂಡಮಾನನ ಕಾಲ ಇಲ್ಲಿಯೂ ಅಸ್ಪಷ್ಟವಾಗಿಯೇ ಉಳಿಯುತ್ತದೆ. ಅಂದರೆ ಆಳ್ವಾರ್‌ಗಳ ಕಾಲದ ನಂತರವೇ ತೊಂಡಮಾನನು ಇದ್ದದ್ದು ? ಮತ್ತೆ ಶ್ರೀನಿವಾಸನು ಮದುವೆ ಮಾಡಿಕೊಂಡ ನಂತರ ತಕ್ಷಣವೇ ತಾನು ಗೃಹಸ್ಥನಾಗಿರುವುದರಿಂದ ತನಗೆ ಒಂದು

ಆಲಯ ಬೇಕಾಗಿದೆ ಎಂದು ಬೇಡಿದನೆಂದು ಸೀತಾಪತಿಯವರ ವಿಚಾರಧಾರೆಯಲ್ಲಿ ತಿಳಿದುಬರುವುದು ಉತ್ಪ್ರೇಕ್ಷೆಯಾಗುವುದಲ್ಲವೆ. ಶ್ರೀ ವೆಂಕಟೇಶ ಮಹಾತ್ಮ್ಯೆ ಆಳ್ವಾರ್ ಕಾಲಕ್ಕೆ ಈಚಿನದೇ ? ಎಲ್ಲವೂ ಗೊಂದಲಮಯವಾಗುತ್ತದೆ. ಅಂತು ಒಂದು ವಿಚಾರ ಸ್ಪಷ್ಟ. ತಿರುಪತಿಯ ಸುತ್ತಮುತ್ತಲಿನ ಶೈವರು ಈ ವಿಗ್ರಹದ ಶಂಖ ಚಕ್ರ ಮತ್ತು ಕೈಗಳಿಗೆ ಭಂಗವನ್ನು ಉಂಟುಮಾಡಿರಬೇಕು ; ಅದನ್ನು ಮತ್ತೆ ರಾಮಾನುಜರು ಪ್ರಯಾಸದಿಂದ ಸರಿಪಡಿಸಿ ವಿಷ್ಣು ವಿಗ್ರಹವನ್ನಾಗಿ ಮತ್ತೆ ಪರಿವರ್ತಿಸಿರಬೇಕು ಎಂದೆನಿಸುತ್ತದೆ. ಆದ್ದರಿಂದಲೇ ಈ ಶಂಖ ಚಕ್ರಗಳನ್ನು ಕಳಚುವುದಿಲ್ಲ ಎಂದು ಊಹಿಸಬೇಕಾಗುತ್ತದೆ. ದೇವರು ಛಿನ್ನ ಹಸ್ತನಾಗಿದ್ದಾನೆಯೋ ಏನೋ ಹೇಳುವವರಾರು ?

ಕಟಿಹಸ್ತನಾದ ಸ್ವಾಮಿಯನ್ನು ಸುಬ್ರಹ್ಮಣ್ಯನೆನ್ನುತ್ತಾರೆ. ಆದರೆ ನವಿಲು ಮತ್ತು ಸ್ಪಷ್ಟವಾದ ಶೂಲ ಇವುಗಳು ಇಲ್ಲದಿರುವುದು ಸುಬ್ರಹ್ಮಣ್ಯನೆಂದು ಸಿದ್ಧಪಡಿಸಲು ಅಸಾಧ್ಯವಾಗಿದೆ.

ಹಾಗಾದರೆ ಈ ವಿಗ್ರಹ ಯಾವುದು ? ವಿಷ್ಣುವೂ ಅಲ್ಲ, ಶಿವನೂ ಅಲ್ಲ, ಸುಬ್ರಹ್ಮಣ್ಯನೂ ಅಲ್ಲ ಎಂದ ಮೇಲೆ ಹೇಗೆ ತೀರ್ಮಾನಿಸುವುದು ? ಇದರ ತಲೆಗೂದಲು ಕತ್ತಿನವರೆಗೂ ಹಬ್ಬಿದೆ. ನಡುಪಟ್ಟಿ ನಾಗಾಭರಣವಿದ್ದೂ ನಡುವಿಗೆ ಕತ್ತಿಯೊಂದು ತೂಗಲ್ಪಟ್ಟಿದೆ. ಎಂದಾಗ ಅದು ಕ್ಷತ್ರಿಯನೋರ್ವನ ವಿಗ್ರಹವೆಂದು ಏತಕ್ಕೆ ಪರಿಗಣಿಸಬಾರದು ಎನ್ನುವ ವಾದವೂ ಇಲ್ಲದಿಲ್ಲ, ಇದಕ್ಕೆ ಎರಡು ಕೈಗಳು ಸ್ಪಷ್ಟವಿದ್ದು ಎರಡು ಕೈಗಳು ಸ್ಪಷ್ಟವಿಲ್ಲದಿರುವುದೂ ಇಂಬು ಗೊಡುತ್ತದೆ ಎನ್ನಬಹುದು. ವೆಂಕಟೇಶ್ವರನ ಚಿತ್ರವನ್ನು ಗಮನವಿಟ್ಟು ನೋಡಿದರೆ ಶಂಖ ಚಕ್ರ ಧರಿಸಿರುವ ಕೈಗಳು ಸರಿಯಾಗಿ ಗೋಚರಗೊಳ್ಳುವುದೇ ಇಲ್ಲ. ಈ ಎರಡು ಕೈಗಳು ಸ್ವಾಭಾವಿಕವಿಲ್ಲದ್ದು, ದೈವತ್ವಕ್ಕೆ ಆ ವಿಗ್ರಹವನ್ನು ಏರಿಸಿರುವುದರಿಂದ ನಂತರ ಸೃಷ್ಟಿಸಲ್ಪಟ್ಟಿತೋ ಎಂಬ ಸಮಸ್ಯೆಗೆ ಎಡೆಗೊಡುತ್ತದೆ.

ಆದರೆ ನಂಬಿಕೆಗೂ ನಾವು ಬೆಲೆ ಕೊಡಬೇಕಾಗುತ್ತದೆ. ಈ ವಿಗ್ರಹ ಜನರ ಅಭೀಷ್ಟವನ್ನು ಪೂರೈಸುತ್ತಿದೆ. ಕೃಪೆಯನ್ನು ನೀಡಿ ಆದರ ಗಳಿಸಿದೆ, ಗಳಿಸುತ್ತಿದೆ ; ಜನರಿಂದ ಪೂಜೆಗೊಳ್ಳುತ್ತಿದೆ ; ಜಾತಿ ಮತ ಬೇಧವಿಲ್ಲದೆ ಭಕ್ತರಿಂದ ಓಲೈಸಿಕೊಳ್ಳುತ್ತಿದೆ, ನಮ್ಮ ದೇವರು ಎನ್ನುವ ಆತ್ಮೀಯ ಭಾವವನ್ನು ಒಳಗೊಂಡಿದೆ. ದಿನೇ ದಿನೇ ಭಕ್ತಾದಿಗಳು ಹೆಚ್ಚುತ್ತಿದ್ದಾರೆ. ಈ ವೈಭವವಂತೂ ಯಾವ ದೇವರಿಗುಂಟು ; ಯಾವ ದೇವರಿಗೆ ಇಲ್ಲ. ಸ್ತೋತ್ರ, ಸಾಹಿತ್ಯ, ಸಂಗೀತ, ವೇದ, ವೇದಾಂತ ಎಲ್ಲದರ ಆಧಾರದಿಂದಲೂ ಪರಮ ಭೋಗ್ಯಭಾಜನನಾಗಿ ಭೂಲೋಕ ವೈಕುಂಠವನ್ನಾಗಿ ಮಾಡಿರುವ ಈ ಮೂರ್ತಿಯನ್ನು ಕ್ಷುಲ್ಲಕವಾಗಿ

ನಾವು ತಾರ್ಕಿಕ ವಾತಾವರಣಕ್ಕೆ ಎಳೆಯುತ್ತಾ ಕಟ್ಟಾಡುವ ಪ್ರಮೇಯವಿಲ್ಲ. ಇದನ್ನೇ ಸೀತಾಪತಿಯವರು ಕೂಡ ತೀರ್ಮಾನವಾಗಿ ಹೇಳಿರುವರು. 'ಅವನು ಎಲ್ಲರನ್ನೂ ಎಂದೆಂದಿಗೂ ಕೃಪೆಮಾಡುತ್ತಾ ಬಾಳಲಿ' ಎಂದು ನಾವೂ ಮಂಗಳಾ ಶಾಸನ ಮಾಡಿ ಈ ಕ್ಷುಣ್ಣ ಭಾವನೆಗಳನ್ನು ಕ್ಷುಲ್ಲಕ ಜನರ ಪಾಲಿಗೇ ಬಿಟ್ಟು ಮುಂದುವರೆಯೋಣವಲ್ಲವೆ ?

"ಅವರವರ್ ತಾಮ್ ತಾಮ್ ಅರಿಂದ ವಾರೇತ್ತಿ ಇವರಿವರ್ ಎಂಬೆರು ತಹಾನೆನ್ಱು" ಎನ್ನುವ ಆಳ್ವಾರ್ ಮಾತು ಒಪ್ಪತಕ್ಕಂತಹುದು !

೮

ಈ 'ವೇಂಗಡ' ಎನ್ನುವ ಪದವಾದರೂ ಹೇಗೆ ಬಂದಿರಬಹುದು ಎನ್ನುವುದೂ ಜಿಜ್ಞಾಸೆಯ ವಿಷಯ. ಶ್ರೀ ರಾಯರೇನೋ ಋಗ್ವೇದ ಮಂತ್ರದಲ್ಲಿ 'ವಿಕಟ' ಎಂಬ ಪ್ರಯೋಗವನ್ನು ತೋರಿಸಿ ಅದರಿಂದ 'ವೇಂಕಟ' ಎಂಬ ಅಪಭ್ರಂಶವಾಗಿ 'ವೇಂಗಡ'ವಾಗಿದೆ ಎನ್ನುತ್ತಾರೆ. 'ವಿಕುಂಠ' ಎನ್ನುವುದರ ರೂಪಾಂತರ ವೈಕುಂಠವಾಗಿ ಅದು ವೇಂಗಡವೆಂದು ಪರಿವರ್ತನೆಗೊಂಡಿರಲೂ ಸಾಧ್ಯ ಎನ್ನುತ್ತಾರೆ. 'ವೇಂಗಡ' ಎನ್ನುವ ಪದಕ್ಕೆ 'ಸುಡುಗಾಡು' ಎನ್ನುವ ಅರ್ಥವ್ಯಾಪ್ತಿಯನ್ನೂ ತೋರಿಸಿದ್ದಾರೆ. ಆದರೆ 'ವೇಂಗಡ' ಎನ್ನುವ ಪದವು ಹೇಗೆ ಮೂಲ ರೂಪವಾಗಿಯೇ ಇದ್ದು ಅರ್ಥವ್ಯಾಪ್ತಿಗೊಂಡಿದೆ ಎನ್ನುವುದನ್ನು ವಿವರಿಸಿಲ್ಲ. ಒಂದು ವೇಳೆ 'ವೈಕುಂಠ' ಎನ್ನುವುದರ ತಮಿಳು ಸಮಾನಪದವೊಂದರ ಅಪಭ್ರಂಶ 'ವೇಂಗಡವೋ' ಎನ್ನುವ ಅನುಮಾನವೂ ಬಾರದೇ ಇರುವುದಿಲ್ಲ. ಏತಕ್ಕೆಂದರೆ ವೈಕುಂಠಕ್ಕೆ ತಮಿಳಿನಲ್ಲಿ 'ವೈಗುಂದಂ' ಎಂದೇ ಇಂದಿಗೂ ಹೇಳುತ್ತಾರೆ. ಈ ವೈಗುಂದಂ ವೇಂಗಡವಾಗುವುದಕ್ಕೆ ಸಾಧ್ಯವೇ ಎಂದು ತಮಿಳು ಭಾಷಾಭಿಜ್ಞರು ತಿಳಿಸಬೇಕಾದ ವಿಚಾರ. ನನಗೆ ತಿಳಿದಂತೆ ಕೆಲವು ಜಿಜ್ಞಾಸೆಗಳನ್ನು ನಾನೂ ಈ ಸಂದರ್ಭದಲ್ಲಿ ವಾಚಕರ ಮುಂದಿಡಲು ಬಯಸುತ್ತೇನೆ. ಇವುಗಳಲ್ಲಿ ಸತ್ಯಾಂಶಗಳೂ ಇರಬಹುದೆಂದು ತೋರುತ್ತದೆ. ಅದರ ಸಾಧ್ಯಾಸಾಧ್ಯತೆಗಳನ್ನು ವಾಚಕರು ವಿಮರ್ಶಿಸಲಿ.

ವೈಕುಂಠ – ವಿಕುಂಠ – ವಿಕಟ – ವೇಂಕಟ – ವೇಂಗಡ ಎಂದು ವೇಂಗಡದ ವ್ಯುತ್ಪತ್ತಿ ಬಂದಿರಲಿಕ್ಕೂ ಸಾಕು. ವೈಕುಂಠ – ವೈಗುಂದಂ – ವೇಂಗಡಂ ಎಂದು ಈ ವೈಕುಂಠ ಪದವು ನೇರವಾಗಿ ತಮಿಳಿಗೇ ಬಂದಿರಲೂ ಸಾಧ್ಯ. ಈ ಪರ್ವತಾಗ್ರವು ಗಗನಚುಂಬಿಯಾಗಿದ್ದು ಇದನ್ನೇ ಜನ ಒಂದು ಕಾಲಕ್ಕೆ ವೈಕುಂಠ

ವೆಂದು ಭಾವಿಸಿ ಹಾಗೆ ಕರೆದಿರತಕ್ಕ ಸಂಭವವೂ ಉಂಟು – ಗ್ರೀಕರಲ್ಲಿ ಒಲಿಂಪಸ್ ಪರ್ವತದ ಅಗ್ರದಲ್ಲಿ ಜೂಸ್ ದೇವನು ನೆಲಸಿದ್ದಂತೆಯೂ, ಅವನ ಪರಿವಾರ ದೇವತೆಗಳೆಲ್ಲಾ ಅಲ್ಲಿಂದಲೇ ಬರುತ್ತಿದ್ದುದಾಗಿಯೂ, ಗ್ರೀಕರು ಒಂದು ಕಾಲಕ್ಕೆ ಆ ಪರ್ವತಕ್ಕೆ ದೇವಲೋಕವೆಂದು ತೀರ್ಮಾನವಿತ್ತಿದ್ದಂತೆ ! ಹಿಮಾಲಯ ಪರ್ವತಾಗ್ರವನ್ನೇ ನಾವು ಶಿವನ ನೆಲೆಯಾದ ಕೈಲಾಸವೆಂಬುದಾಗಿಯೂ, ದೇವತೆಗಳ ನೆಲೆ ಎಂಬುದಾಗಿಯೂ ನಂಬಿಕೆ ಇಟ್ಟುಕೊಂಡಿರುವಂತೆ !

ಶ್ರೀ ಪೇಯಾಳ್ವಾರ್ ಅವರ 'ಮೂನ್ರಾಂ ತಿರುವಂದಾದಿ'ಯಲ್ಲಿ ವೇಂಗಡದ ನಾಮ ನಿರ್ದೇಶನದ ಬಗ್ಗೆ ಈ ಪಾಶುರದಿಂದ ಕೆಲ ಅಂಶಗಳು ಮನಗಾಣಬಹುದು ಎಂದು ನನ್ನ ಅನಿಸಿಕೆ.

ಶಾರ್ನ್ದ ಅಗಡು ತೇಯ್ಪ್ಪ ತಡಾವಿಯ ಕೋಡು ಉಚ್ಚಿವಾಯ್
ಊರ್ನ್ದ ಇಯಂಗು ವೆಣ್ ಮದಿಯಿನ್ ಒಣ್ ಮುಯಲ್ಶೈಶೇರ್ನ್ದ
ತಿನ ವೇಂಗೈ ಪಾರ್ಕುಂ ತಿರುಮಲೈಯೇ ಅಯುನ್
ಪುನ ವೇಂಗೈ ನಾರುಂ ಪೊರುಪ್ಪು

ಈ ಪಾಶುರದಲ್ಲಿ 'ವೇಂಗೈ' ಎನ್ನುವ ಪದವನ್ನು ಎರಡು ಅರ್ಥದಲ್ಲಿ ಉಪಯೋಗಿಸಲಾಗಿದೆ. ಬೆಟ್ಟದ ಮೇಲೆ ಸರಿಯುತ್ತಾ ಕೆಳಗಿಳಿಯುವ ಪೂರ್ಣಚಂದ್ರನು ಬೆಟ್ಟದ ಕೋಡನ್ನು ಸೋಕಲು ಸಾಣೆಯ ಚಕ್ರಕ್ಕೆ ಕೊಟ್ಟ ಕಬ್ಬಿಣದ ತಗಡಿನಂತೆ ಸವೆಯುತ್ತಾ ಬರುತ್ತಿದ್ದಾನಂತೆ. ಆ ಬಿಳಿಯ ಚಂದ್ರಮನು ದೊಡ್ಡದಾಗಿ ಕಾಣಿಸುವಾಗ, ಹೊಟ್ಟೆಯೊಳಗಿನ ಜಿಂಕೆ ಬೆಟ್ಟದ ಕೋಡನ್ನು ಸಮೀಪಿಸುವಾಗ, ಆ ಕೋಡಿನ ಮೇಲೆ ಹಸಿದು ಕುಳಿತ ಹುಲಿಯೊಂದು, ಬೇಟೆಯೊಂದು ಸಮೀಗತವಾಗಲು ಅದನ್ನು ತಿನ್ನಲು ಘರ್ಜಿಸುತ್ತಾ ಮೇಲೇಳುವುದಂತೆ. ಇಂತಹ ಘರ್ಜಿಸುವ ಹುಲಿಯನ್ನು 'ವೇಂಗೈ' ಎಂದಿದ್ದಾರೆ ಆಳ್ವಾರ್. ವೇಂಗೈ ಎಂದರೆ ಹುಲಿ. ಇಂತಹ ದಿವ್ಯ ಪರ್ವತವೇ ತಿರುಮಲೆ ! ಅದರ ಮೇಲೆ ಎಲ್ಲೆಲ್ಲೂ ದಟ್ಟವಾಗಿ ಬೆಳೆದು ಕಂಗೊಳಿಸುವ 'ವೇಂಗೈ' ಎನ್ನುವ ಒಂದು ಜಾತಿಯ ಪುಷ್ಪದ ಪರಿಮಳ ಸಾಂದ್ರವಾಗಿ ಹರಡಿಕೊಂಡು ಆಹ್ಲಾದ ನೀಡುತ್ತಿರುವುದಂತೆ !

'ವೇಂಗೈ' ಎಂದರೆ ಹುಲಿ. ಈ ಪರ್ವತದ ಮೇಲೆ ಹುಲಿಗಳು ಹೇರಳವಾಗಿ ವಾಸಿಸುತ್ತಿದ್ದಿರಬಹುದಾದ ಕಲ್ಪನೆ ಈ ಪಾಶುರದಿಂದ ಲಭಿಸುತ್ತದೆ. ಕಾಡು ದಟ್ಟವಾಗಿ ಬೆಳೆದಿದ್ದು ಆಳ್ವಾರ್ ಪಾಶುರಗಳಲ್ಲಿ ಚಿತ್ರಿತವಾಗಿದೆ. ವೇಂಗಡ ದೊಡೆಯನನ್ನು ಬೇಟೆಗಾರನೆಂಬುದಾಗಿಯೂ ಜನ ಕರೆಯುತ್ತಾರೆ. ಈ ದೇವರು ಒಂದು ಕಾಲಕ್ಕೆ ಕುರುವರಿಗೂ, ಬೇಡರಿಗೂ ದೈವವಾಗಿತ್ತೆಂದೂ

ರಾಮಚಂದ್ರರಾಯರು 'ತಿರುಪತಿ ತಿಮ್ಮಪ್ಪ'ದಲ್ಲಿ ಹೇಳಿದ್ದಾರೆ. ಆದ್ದರಿಂದ ಈ ಕಾಡು ಪ್ರದೇಶದಲ್ಲಿ ಹುಲಿಗಳು ಹೇರಳವಾಗಿ ಸಂಚಾರ ಮಾಡುತ್ತಿದ್ದರೆ ಆಶ್ಚರ್ಯವಿಲ್ಲ. ಈ ಮಲೆಸೀಮೆ ಆಂಧ್ರ ಪ್ರದೇಶದ ವಿಶಾಖಪಟ್ಟಣದಿಂದ ದಕ್ಷಿಣದ ನೀಲಗಿರಿಯವರೆಗೂ ವ್ಯಾಪ್ತಗೊಂಡಿರುವ ಪೂರ್ವ ಘಟ್ಟವೆಂದೂ ಹೇಳುತ್ತಾರೆ. ಅಲ್ಲಿನ ಮುಖ್ಯ ಪ್ರದೇಶಗಳಲ್ಲಿ ದಟ್ಟವಾದ ಅರಣ್ಯ ಇಂದಿಗೂ ವ್ಯಾಪ್ತಿಯಾಗಿದೆ. ಮಂಗಳಗಿರಿ, ಸಿಂಹಾಚಲ, ಅಹೋಬಿಲ, ಶ್ರೀಶೈಲ, ತಿರುಪತಿ ಮುಂದುವರೆದು ಕರ್ನಾಟಕದ ಮಹದೇಶ್ವರನ ಬೆಟ್ಟ, ಬಿಳಿಗಿರಿರಂಗನ ಬೆಟ್ಟದ ಮೂಲಕ ಸಾಗುತ್ತದೆ. ಈ ಪೂರ್ವಘಟ್ಟಗಳಲ್ಲಿ ಹುಲಿಗಳು ಹೇರಳವೆಂದು ಗುರುತಿಸಿದ್ದಾರೆ. ಮಹದೇಶ್ವರ, ಶ್ರೀಶೈಲದ ಮಲ್ಲಿಕಾರ್ಜುನರನ್ನೂ 'ಹುಲಿವಾಹನದಯ್ಯ'ನೆಂದು ಜನ ಇಂದಿಗೂ ಕರೆಯುತ್ತಾರೆ. ಜಾತ್ರೆಗಳಲ್ಲಿ ಹುಲಿವಾಹನ ಮಾಡುತ್ತಾರೆ. ಈಶ್ವರನಿಗೆ ಹುಲಿವಾಹನವುಂಟು. ಸಾತ್ವಿಕಮೂರ್ತಿಯಾದ ವೆಂಕಟೇಶ್ವರನಿಗೆ ಬೇಟೆರಾಯನೆಂಬ ಹೆಸರಿದ್ದರೂ ಹುಲಿವಾಹನವಿಲ್ಲ, ಆದ್ದರಿಂದ ಹುಲಿಗಳು ಹೇರಳವಾಗಿ ವಾಸವಾಗಿದ್ದ ಈ ಬೆಟ್ಟಕ್ಕೆ "ವೇಂಗೈ + ಇಡಂ" ವೇಂಗಿಡಂ ವೇಂಗಡಂ ಎನ್ನುವ ನಾಮ ನಿಷ್ಪತ್ತಿ ಇರುವುದರಲ್ಲಿ ಸಿಂಧುತ್ವವಿದೆ. ಹುಲಿ ವಾಹನದಯ್ಯ ಎನ್ನುವಂತೆಯೇ ಈ ದೇವರಿಗೂ ಹುಲಿ ಸಂಬಂಧವಾದ 'ವೇಂಗಡವನ್' 'ವೇಂಗಡತ್ತಾನ್' ಮೊದಲಾದ ಹೆಸರು ಹುಟ್ಟಿಕೊಂಡಿರ ಬಹುದೇ ?

ಶ್ರೀನಿವಾಸನಿಗೆ ಸಿಂಹವಾಹನ ಮಾಡುವ ವಿಚಾರ ಈಚೆಗೆ ತಿಳಿದು ಬಂದಿತು. ಆದರೆ ಸಿಂಹ ಮೃಗರಾಜ, ಹುಲಿಗಿಂತ ಭಿನ್ನವಾದ ಪ್ರಾಣಿ. ಪ್ರಾಣಿಗಳಲ್ಲಿ ಆನೆ, ಸಿಂಹ ಇವುಗಳಿಗೆ ವಿಶಿಷ್ಟ ಸ್ಥಾನವುಂಟು, ಗೌರವವುಂಟು. ವಿಷ್ಣುವಿನ ಅವತಾರ ವಾದ ನರಸಿಂಹಾವತಾರದಲ್ಲಿ ಆತ ಸಿಂಹರೂಪ ಧರಿಸಿದ್ದ. ಹುಲಿ ಸಿಂಹದಷ್ಟು ಗೌರವ ಪಡೆದಿಲ್ಲ. ಸಿಂಹದ ಗಾಂಭೀರ್ಯ. ವೈಭವ, ಸೊಬಗು, ಆಕರ್ಷಣೆ ಇದಕ್ಕೆ ಇಲ್ಲ. ಇದು ಕುಟಿಲ ಪ್ರಾಣಿಗಳೊಂದಿಗೆ ವರ್ಗೀಕೃತವಾಗಿದೆ. ಆದ್ದರಿಂದ ಸಿಂಹ ರಾಜಸ, ತಾಮಸ ಪ್ರಕೃತಿಗೆ ಸೇರಿದ್ದಲ್ಲ ಎಂದು ತೋರುತ್ತದೆ. ಮತ್ತಾವ ವಿಷ್ಣು ದೇವರುಗಳಿಗೆ ಸಿಂಹವಾಹನವುಂಟೋ ಗೊತ್ತಿಲ್ಲ.

"ಪ್ರನವೇಂಗೈನಾರುಂ ಪೆರುಪ್ಪು" ಎಂದು ಆಳ್ವಾರ್ ವರ್ಣಿಸಿದ್ದಾರೆ ! ಈ ಪರ್ವತದ ಉದ್ದಗಲಕ್ಕೂ ವೇಂಗೈ ಎನ್ನುವ ಸುವಾಸನಾಭರಿತವಾದ ಪುಷ್ಪ ಆವೃತವಾಗಿದ್ದ ಚಿತ್ರ ನಮ್ಮ ಕಣ್ಮುಂದೆ ಸುಳಿಯುತ್ತದೆ. ಈ ಸಂದರ್ಭದಲ್ಲಿ ನನಗೆ ನನ್ನ ಒಂದು ಅನುಭವ ನೆನಪಿಗೆ ಬರುತ್ತದೆ. ನಾನು ಕೊಡಗಿನಲ್ಲಿ ಉದ್ಯೋಗಿಯಾಗಿದ್ದಾಗ ಅಲ್ಲಿನ 'ಪೊಲ್ಲಿಬೆಟ್ಟ' ಎನ್ನುವ ಸ್ಥಳಕ್ಕೆ ಹೋಗಿದ್ದೆ. ಅಲ್ಲಿ ಸುತ್ತಲೂ ಬೆಟ್ಟ ಗುಡ್ಡಗಳು, ಮಧ್ಯೆ ತಗ್ಗಾದ ಭೂಮಿಯಲ್ಲಿ ಊರು.

ಆ ಬೆಟ್ಟಗಳೆಲ್ಲಾ ಕಾಫೀ ಗಿಡಗಳಿಂದ ಆವೃತವಾಗಿದೆ. ಬರೀ ಹಸಿರೇ ಕಣ್ಣಿಗೆ ಹಬ್ಬ ನೀಡುತ್ತದೆ. ಕೊಡಗರು "ಬ್ಲಾಸಮಿಂಗ್ ಸೀಸನ್" (Blossaming Season) ಎಂದು ಕರೆಯುವ ಏಪ್ರಿಲ್ – ಮೇ ತಿಂಗಳಲ್ಲಿ ಈ ಪ್ರಾಂತ್ಯ ಒಟ್ಟಿಗೆ ಹೂ ಬಿಡುತ್ತದೆ. ಈ ಹೂವಿನ ಬಿಳಿಯ ಬಣ್ಣ ಆ ಹಸಿರು ಪ್ರದೇಶವನ್ನೆಲ್ಲಾ ಮರೆಸಿ ಬಿಡುತ್ತದೆ, 'ಘಂ' ಎನ್ನುವ ಸುವಾಸನೆ ಎಲ್ಲೆಡೆಯಿಂದಲೂ ನಮ್ಮ ಮನ ತಣಿಸುತ್ತದೆ. ಈ ದಿವ್ಯದೃಶ್ಯ ನಾಲ್ಕಾರು ದಿನಗಳು ಮಾತ್ರ ಲಭ್ಯ, ಪ್ರತಿವರ್ಷ. ನಮ್ಮನ್ನು ಬೇರೆ ಲೋಕಕ್ಕೇ ಕೊಂಡೊಯ್ಯುತ್ತದೆ. ಈ ತಿರುಮಲೆಯ ಮೇಲೆಯೂ ಒಂದು ಕಾಲಕ್ಕೆ ವೇಂಗೈ ಪುಷ್ಪಗಳು ಹೀಗೆ ರಂಜಿಸುತ್ತಿದ್ದಿರ ಬಹುದಾದ ಚಿತ್ರ ಕಣ್ಣ ಮುಂದೆ ಸುಳಿಯುತ್ತದೆ. ಈ ಪುಷ್ಪಗಳು ಕೇವಲ ಒಂದು ಋತುವಿಗೆ ಮಾತ್ರ ಸೀಮಿತವಾಗದೇ ಸರ್ವದಾ ಆನಂದ ನೀಡುತ್ತಿದ್ದಿತೋ ಏನೋ! ಇದನ್ನು ಊಹಿಸಿ ಕೊಳ್ಳಬಲ್ಲವನೇ ನಿಜಕ್ಕೂ ರಸಋಷಿ! ಅಂತಹ ವನೇ ವೇಂಗಡಕ್ಕೆ 'ವೇಂಗೈ+ಇಡಂ' (ವೇಂಗೈ ಪುಷ್ಪಗಳಿಂದ ನಿಬಿಡವಾದ ಜಾಗ) ಎಂದೇನಾದರೂ ನಾಮಕರಣ ಮಾಡಿದನೆ?

ತಮಿಳಿನಲ್ಲಿ ವಿಜಯ ಗಳಿಸಿದವನನ್ನು 'ವೇಂದನ್' ಎಂದು ಪ್ರಶಂಸಿಸು ತ್ತಾರೆ. ಇದರಿಂದಲೇ ರಾಜ, ಚಕ್ರವರ್ತಿಗಳನ್ನು 'ವೇಂದನ್' ಎಂಬುದಾಗಿ ಕೀರ್ತಿಸುತ್ತಿದ್ದರೇನೋ? 'ವೇಂದನ್' ಎನ್ನುವುದರ ಪರ್ಯಾಯ ಪದ 'ವೇನ್' ಎನ್ನುವುದಾಗಿದ್ದಿತೆ? ವೆಟ್ರಿ, ವೆಟ್ರಿಲೈ ಮುಂತಾದ ವಿಜಯ ಸೂಚಕ ಪದಗಳು ವೇನ್ ಅಥವಾ ವೆನ್ ಧಾತುವಿನಿಂದ ಆವಿರ್ಭವಿಸಿರಬೇಕೆಂದು ನನ್ನ ಊಹೆ. ವೆಟ್ರಿ ಎಂದರೆ ವಿಜಯ. ವೆಟ್ರಿಲೈ ಎಂದರೆ ಯುದ್ಧಕ್ಕೆ ಹೊರಡುವಾಗ ಶೂರರಿಗೆ ನೀಡುತ್ತಿದ್ದ ವೀಳ್ಯ. ಈ ವೇನ್ ಅಥವಾ ವೆನ್ ಧಾತು ವಿಜಯ ಸೂಚಕ ಅರ್ಥದ್ದು. ಹಾಗೆ ವೇಂಗಡಂ 'ವಿಜಯ ಸ್ಥಾನ' ಎನ್ನುವ ಅರ್ಥ ಬರುವ ರೂಪಾಂತರವೇ! ಭಾಷಾಕೋವಿದರು ತಿಳಿಸಬೇಕು.

ಈಚೆಗೆ Lifco ರವರು ಪ್ರಕಟಿಸಿರುವ ತಮಿಳು – ತಮಿಳು – ಇಂಗ್ಲೀಷ್ ನಿಘಂಟನ್ನು ನೋಡುವ ಸಂದರ್ಭದಲ್ಲಿ ವೇಂಗೈ ಎನ್ನುವ ಪದಕ್ಕೆ ನಾಲ್ಕು ಅರ್ಥ ವಿವರಣೆಯನ್ನು ನೋಡಿದೆ. 1) ಬಂಗಾಳದ ಹುಲಿ. 2) ಒಂದು ಬಗೆಯ ಮರ (East Indian kino tree) 3) ವೇಂಗೈ ನಾಡು. Vengai country Comprising the Godavari & Krishna Districts ruled by the cholas in 10th and 11th Centuries 4) ಒರು ಮಲೈ The Vengadam Hill.

ಹುಲಿಯ ವಿಚಾರ ಮೇಲೆ ಹೇಳಿದ್ದಾಯಿತು. ಎರಡನೆಯ ಅರ್ಥ Kino Tree ಎಂದಿದ್ದಾರೆ. ಹೊನ್ನೇ ಮರಕ್ಕೆ ಈ ಹೆಸರೆಂಬುದಾಗಿ "Forest

"Trees" ಎನ್ನುವ ಪುಸ್ತಕದಲ್ಲಿ ಅರಣ್ಯ ಸಸ್ಯವನ್ನು ವರ್ಗೀಕರಿಸಿದ್ದಾರೆ. ಮತ್ತೊಂದು ಜಾತಿಯ ವೃಕ್ಷವಾದ ಪಲಾಶ ಮರವನ್ನು Pulas Kino ಎಂದು ಕರೆಯುತ್ತಾರೆಂಬ ವಿವರಣೆ ಇದೆ. ಪಲಾಶ ಎಂದರೆ ಮುತ್ತುಗದ ಮರ. "when in full blossom, the tree is conspicuous object throughout the above Districts" ಎಂದು ವಿವರಿಸುತ್ತಾರೆ ಗ್ರಂಥಕರ್ತರು. ಆದರೆ ಈ ಎರಡು ಮರಗಳಲ್ಲಿಯೂ ಸುವಾಸನೆಯಾದ ಪುಷ್ಪಗಳು ಬಿಡುವುದಿಲ್ಲ ಎಂದು ನನ್ನ ತಿಳುವಳಿಕೆ. ಮುತ್ತುಗದ ಹೂ ಕೆಂಪಗೆ ಮರವನ್ನೆಲ್ಲಾ ಆಕ್ರಮಿಸಿಕೊಂಡು ಕೆಂಡದಂತೆ ನಿಗಿನಿಗಿಸುತ್ತದೆ ಎಂಬ ವರ್ಣನೆ ಕೇಳಿದ್ದೇನೆ. Mysore University ಯ Dictionary ಯಲ್ಲಿ ಕಿನೋ ಎನ್ನುವ ಪದಕ್ಕೆ 'ಔಷಧಿ ತಯಾರಿಕೆಯಲ್ಲೂ, ಚರ್ಮ ಹದ ಮಾಡುವುದರಲ್ಲಿಯೂ ಉಪಯೋಗಿಸುವ, ಕಾಚನ್ನು ಹೋಲುವ ಹಲವು ಮರಗಳ ಗೋಂದು' ಎಂದಿರುವುದರಿಂದ ವೇಂಗ್ಯೆ ಎನ್ನುವ ಮರ ಯಾವುದೋ ಗೋಂದು ನೀಡುವ ಮರ ಎಂಬುದಾಗಿಯೂ ಅರ್ಥವಾಗುತ್ತದೆ. ಅದು ಯಾವ ಮರವೆಂಬುದು ತಿಳಿಯುವುದಿಲ್ಲ. ಆ ವೃಕ್ಷದ ಹೂಗಳು ದಟ್ಟವಾಗಿ ಬಿಟ್ಟು ಸುವಾಸನೆಯನ್ನು ಸೂಸಬೇಕು. ಅಂತಹ ಮರಗಳು ಬೆಟ್ಟ ಪೂರ್ತಿ ಹೇರಳವಾಗಿ ಬೆಳೆಯಬೇಕು. ಇಂತಹ ಬೆಳೆಯಿಂದ ಕೂಡಿದ ಬೆಟ್ಟಕ್ಕೆ ವೇಂಗಡ ಎನ್ನುವ ಹೆಸರು ಪ್ರಚಾರದಲ್ಲಿರಬೇಕು.

ವೇಂಗ್ಯೆನಾಡು ಎನ್ನುವ ಮತ್ತೊಂದು ವಿವರಣೆ ದೊರೆಯುತ್ತದೆ. ಇದನ್ನು ಚೋಳರು ಆಳುತ್ತಿದ್ದರು. ಅವರ ಕಾಲ ಕ್ರಿ. ಶ. ೧೦ನೇ ಶತಮಾನ – ೧೧ನೇ ಶತಮಾನಗಳು. ಚೋಳರ ಧ್ವಜದಲ್ಲಿ ಹುಲಿಯು ಚಿತ್ರಿತವಾಗುತ್ತಿದ್ದಿತೆಂದು ಕೇಳಿದ್ದೇನೆ. ಆದರೆ ಈ ಚೋಳರ ರಾಜ್ಯ ಗೋದಾವರಿಯಿಂದ ಕೃಷ್ಣೆಯ ಮಧ್ಯವೆಂದು ಬರೆದಿದೆ. ಚೋಳರು ತಂಜಾವೂರು ಪ್ರಾಂತ್ಯದಲ್ಲಿ ಮೊದಲು ಆಳುತ್ತಿದ್ದರೆಂಬುದಾಗಿ ತಮಿಳುನಾಡಿನ ಚರಿತ್ರೆಯಲ್ಲಿ ಗೊತ್ತಾಗುತ್ತದೆ. ಈ ಚೋಳರು ಪ್ರಾಚೀನರು, ಇವರ ಕಾಲ ಕ್ರಿಸ್ತ ಪೂರ್ವಕ್ಕೂ ಸಾಗುತ್ತದೆ ಎನ್ನುತ್ತಾರೆ. ಕಾವೇರಿ ನದೀ ಮುಖಜ ಭೂಮಿಯಲ್ಲಿ ಇವರು ರಾಜ್ಯವಾಳುತ್ತಿದ್ದು, ರೋಂ ಮುಂತಾದ ಪಾಶ್ಚಾತ್ಯ ದೇಶಗಳೊಡನೆ ಆಗಿನ ಕಾಲಕ್ಕೆ ಸಂಪರ್ಕ ಇಟ್ಟುಕೊಂಡಿದ್ದರೆಂದು ತಿಳಿಯುತ್ತದೆ. ಕನ್ನಡದಲ್ಲಿ ಇವರ ರಾಜ್ಯವನ್ನು ವೆಂಗಿನಾಡೆಂದೂ ಕರೆಯುತ್ತಿದ್ದರೆಂದು ಉಲ್ಲೇಖವಾಗಿದೆ. ಆದರೆ ಈ ವೆಂಗಿನಾಡು ಗೋದಾವರಿಯಿಂದ ಕೃಷ್ಣೆಯ ಮಧ್ಯದ ಪ್ರದೇಶಕ್ಕೆ ಸೀಮಿತವಾಗಿದ್ದು ಆಂಧ್ರಪ್ರದೇಶಕ್ಕೆ ಸೇರಿದೆ. ಹುಲಿಯ ಧ್ವಜ ಇದ್ದುದರಿಂದ ಇವರನ್ನು ವೇಂಗ್ಯೆ ಎನ್ನುತ್ತಿದ್ದು ಅದರಿಂದ ವೆಂಗಿನಾಡು ಹುಟ್ಟಿಕೊಂಡಿರಬಹುದೇ ? ಏತಕ್ಕೆಂದರೆ ಹುಲಿಧ್ವಜದವರು ಆಳಿದ ನಾಡು ತಾನೇ ಅದು. ಈ ಚೋಳರು ತಿರುಪತಿ

ಪ್ರಾಂತ್ಯವನ್ನು ಆಳುತ್ತಿದ್ದರೆ ? ಆಗಿನ ಕಾಲಕ್ಕೆ ಅವರು ವೇಂಗಡವೆಂಬ ಹೆಸರನ್ನು ಈ ಪ್ರದೇಶಕ್ಕೆ ನೀಡಿದ್ದರೆ ? ವೇಂಗೈನಾಡಿಗೂ, ಚೋಳರ ಪ್ರಭುತ್ವಕ್ಕೂ, ವೇಂಗಡ ಎನ್ನುವ ಹೆಸರಿಗೂ ಪರಸ್ಪರ ಸಂಬಂಧವಿರಬಹುದೇ ಎನ್ನುವುದು ಪರೀಶೀಲನಾರ್ಹವಾದ ವಿಚಾರ.

ಈ ವಿವರಗಳನ್ನು ಬರೆದ ನಂತರ ನನಗೆ ಶ್ರೀ ಬಿ. ಜಿ. ಎಲ್. ಸ್ವಾಮಿ ಅವರ 'ಹಸುರು ಹೊನ್ನು' ಎನ್ನುವ ಪುಸ್ತಕದಲ್ಲಿ ಇದೇ ರೀತಿಯ ಪ್ರಸ್ತಾಪವು ಇರುವುದೆಂದು ತಿಳಿದು ಬಂದಿತು. ಅದರಲ್ಲಿನ ೬೪ನೆಯ ಪುಟದಿಂದ ೯೭ನೆಯ ಪುಟದವರೆಗೆ ವೇಂಗೈ ಎನ್ನುವ ವಿವರಣೆಯನ್ನು ಬಹಳ ಸ್ವಾರಸ್ಯವಾಗಿ ನಿರೂಪಿಸಿದ್ದಾರ. ಆದರೆ ಅವರಿಗೆ ಪೇಯಾಳ್ವಾರ್ ಅವರ ಈ ಮೇಲೆ ತಿಳಿಸಿದ ಪಾಶುರವೂ ಸಿಕ್ಕಿದ್ದರೆ ಇನ್ನೂ ಅಷ್ಟು ವಿವರ ಒದಗಿಸುತ್ತಿದ್ದರೋ ಏನೋ ? ತಮಿಳು ನಾಡಿನ ಗಡಿ ವಡವೇಂಗಡದವರೆಗೂ ಬೆಳೆದು ಪ್ರಾಯಶಃ ಅದರಾಚೆಗೆ ಈ ವೇಂಗೈ ಮರಗಳು ಅಥವಾ ಹೊನ್ನೇ ಮರಗಳು ಬೆಳೆಯುತ್ತಿರಲಿಲ್ಲವೆಂದು ಅವರು ಅಭಿಪ್ರಾಯ ಪಟ್ಟಿದ್ದಾರೆ. ಇವರು ವೇಂಗೈ ಎನ್ನುವುದು ಬೇಂಗ ಅಥವಾ ಹೊನ್ನೆ ಎನ್ನುತ್ತಾರೆ. ಇದೇ ಲೇಖಕರ 'ಶಾಸನಗಳಲ್ಲಿನ ಗಿಡ ಮರಗಳು' ಎನ್ನುವ ಪುಸ್ತಕದಲ್ಲಿ 'ಲಾಂಛನ ಸಸ್ಯಗಳು' ಅಧ್ಯಾಯದಲ್ಲಿ, ವಾಗೈ (ಬಾಗೇ) ಎನ್ನುವ ವೃಕ್ಷಗಳನ್ನು ವರ್ಣಿಸಿ 'ಅದರ ಹೂವನ್ನು ವಿಜಯ ಲಾಂಛನ ವಾಗಿ – ಗ್ರೀಕರು ಆಲಿವ್ ಬಳ್ಳಿಯನ್ನು ವಿಜಯ ಸೂಚಕವಾಗಿ ತಲೆಸುತ್ತ ಕಿರೀಟ ದಂತೆ ಧರಿಸುತ್ತಿದ್ದ ರೀತಿಯಲ್ಲಿ – ತಮಿಳುನಾಡಿನ ಅರಸರು ಅಲಂಕಾರ ಮಾಡಿ ಕೊಳ್ಳುತ್ತಿದ್ದರು ಎಂದಿದ್ದಾರೆ (ಪುಟ ೬೪ – ೬೫). ಈ ವಾಗೈ – ವೇಂಗೈ (ವಿಜಯ ಸೂಚಕ) ಎನ್ನುವ ಅರ್ಥ ಹೊಂದಿ ಪರಿವರ್ತನೆ ಹೊಂದಿರ ಬಹುದಾದ ಸಂಭವವುಂಟಲ್ಲವೆ ? ಈ ಬಾಗೇ ಹೂವನ್ನು ಶಿರೀಷವೆಂದು ಸಂಸ್ಕೃತ ದಲ್ಲಿ ಕರೆಯುತ್ತಾರಂತೆ. ಈ ಶಿರೀಷ ಪುಷ್ಪಗಳನ್ನು ಕವಿಗಳು ಬಹಳ ಹೊಗಳಿ ದ್ದಾರೆ. ದೈವಸ್ತುತಿಗಳಲ್ಲೂ ಇದಕ್ಕೆ ಒಂದು ಪ್ರಾಶಸ್ತ್ಯವಿದೆ. ವೇಂಗೈ ಸುವಾಸನಾಭರಿತ ಪುಷ್ಪ ಎಂದು ಆಳ್ವಾರ್ ತಿಳಿಸಿರುವುದರಿಂದ ಮೇಲಿನ ಪುಷ್ಪ ಗಳಲ್ಲಿ ಯಾವುದು ವೇಂಗೈ ಎನ್ನುವುದನ್ನು ಅಧ್ಯಯನ ಮಾಡಿ ತಿಳಿಯಬೇಕೆಂದು ನನ್ನ ಅಭಿಪ್ರಾಯ.

ಶ್ರೀ ಬಿ. ಜಿ. ಎಲ್. ಸ್ವಾಮಿ ಅವರ 'ಹಸುರು ಹೊನ್ನಿ' ನಿಂದ ಮತ್ತೊಂದು ಮುಖ್ಯ ಅಂಶ ಹೊರ ಬೀಳುತ್ತದೆ. ಇದು ಸ್ವಲ್ಪ ಮಟ್ಟಿಗೆ ತಿರುಮಲೆಯ ಇತಿಹಾಸಕ್ಕೆ ಹೊಂದಿಕೊಳ್ಳುತ್ತದೆ ಎಂದು ನನ್ನ ತೀರ್ಮಾನ.

ಮುರುಗನು ವಳ್ಳಿಯ ಕಾದಲನ್ನು ಪರೀಕ್ಷಿಸುವ ಸಲುವಾಗಿ ವೇಂಗೈ ವೃಕ್ಷ ವಾಗಿ ನಿಂತನಂತೆ ! ಈ ಮರವನ್ನು ವೇದಶಾಸ್ತ್ರಾಗಮಗಳ ಮರುರೂಪವೆನ್ನುತ್ತಾ

ರಂತೆ! ವಳ್ಳಿ, ಆ ಮರವನ್ನು ಕಡಿಯಲು ಹೋದ ತನ್ನ ಊರವರನ್ನು ತಡೆದು, ಮುರದ ರೂಪದ ತನ್ನ ಪ್ರಿಯನನ್ನು ಗುರುತಿಸಿ ವರಿಸಿದ್ದರಿಂದ ವಳ್ಳಿಯ ಊರವರಾದ ಕೊರವರಿಗೆ ವೇಂಗೈ ವೃಕ್ಷ ಇಂದಿಗೂ ಪೂಜನೀಯವಂತೆ! ಇದು ಅವರಿಗೆ ದೈವಸದೃಶ. ಮುರುಗನಿಗೆ ಪ್ರಿಯವೆನಿಸುವುದು ಎರಡು – ಒಂದು ಮಲೆ, ಮತ್ತೊಂದು ವೇಂಗೈ ಮರ. ಆದ್ದರಿಂದಲೇ ವೇಂಗೈ ಮರಗಳಿಂದ ಆವೃತವಾದ ಮಲೆಯ ಮೇಲೆ ಮುರುಗನು ಖಂಡಿತವಾಗಿಯೂ ನೆಲಸಿರುವನೆಂಬ ನಂಬಿಕೆ ಕೊರವರಿಗೆ! ಮುರುಗನ ಪ್ರಾಚೀನ ನೆಲೆಗಳಲ್ಲಿ ಈ ಲಕ್ಷಣ ಇರುವುದಂತೆ!

ಕುರವರು ಆಳ್ವಾರ್ ಪ್ರಬಂಧಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದ್ದಾರೆ. ಕುರವರು ವಳ್ಳಿಯ ನಾಡವರು. ಶ್ರೀ ರಾಮಚಂದ್ರರಾಯರು 'ತಿರುಪತಿ ತಿಮ್ಮಪ್ಪದಲ್ಲಿ' ಹೇಳಿರುವಂತೆ ಕನ್ನಡ ನಾಡಿನ ಕುರುಬರಲ್ಲ. ಇವರು ಕೊರವ – ಕೊರವಂಜಿ ಜಾತಿಯ ಒಂದು ರೀತಿಯ ಕಾಡು ಕುರುಬರು ಅಥವಾ ಕಾಡು ಬೇಡರು. ಇವರು ತಿರುಮಲೆಯ ಮೇಲೆ ವಾಸವಾಗಿದ್ದರು ಎಂದು ಆಳ್ವಾರ್ ಪ್ರಬಂಧಗಳಲ್ಲಿ ಪ್ರಸ್ತಾಪವಿದೆ. ತಿರುಮಲೆಯಲ್ಲಿ ವೇಂಗೈ ವೃಕ್ಷಗಳು ಬೆಳೆದಿದ್ದುವು. ಅಥವಾ ಇವರೇ ಬೆಳೆಸಿದ್ದರೂ ಇರಬಹುದು, ಇಲ್ಲ ಪ್ರಾಕೃತಿಕವಾಗಿಯೇ ಬೆಳೆದಿದ್ದುವೋ ಬಲ್ಲವರು ಯಾರು? ಅಂತೂ ವೇಂಗೈ ಇರುವ ಬೆಟ್ಟದಲ್ಲಿ ಮುರುಗನಿರಲೇ ಬೇಕೆಂಬ ನಿಯಮದಂತೆ ತಿರುವೇಂಗಡದ ಮೇಲಿನ ದೇವರಲ್ಲೂ ಅವರು ಮುರುಗನನ್ನು ಗುರುತಿಸಿದ್ದರಲ್ಲಿ ಆಶ್ಚರ್ಯವೇನು? ಪ್ರಾಚೀನ ತಮಿಳು ಗ್ರಂಥದಲ್ಲಿ ಕೆಲವದರಲ್ಲಿ ಈ ದೇವನನ್ನು ಸ್ಕಂದನೆಂದು ಹೇಳಿರುವುದರ ಸಾಮಂಜಸ್ಯವನ್ನು ಈ ವಾದವು ಪುಷ್ಟೀಕರಿಸುವುದಿಲ್ಲವೆ? ಆದರೆ ಸ್ಕಂದ ಪುರಾಣಗಳಲ್ಲಿ ಅವರು ಮುರುಗಕ್ಷೇತ್ರಗಳನ್ನು ಕೇವಲ ಆರು ಎಂದೇ ನಿರ್ಧರಿಸಿದ್ದಾರೆ. ಅಥವಾ ವಿಷ್ಣು ದೇವರಾಗಿದ್ದ ಈತನನ್ನು ಕುರವರು ಅಥವಾ ಶೈವರು ಈ ವೇಂಗೈ ಮರಗಳ ಇರುವಿಕೆಯಿಂದಾಗಿ ಕಂದನನ್ನಾಗಿ ಪರಿವರ್ತಿಸಲು ಯತ್ನಿಸಿದ್ದರೂ ಸಾಧ್ಯವೆಂದು ಹೇಳಬಹುದಲ್ಲವೇ? ಇದನ್ನು ಮುಂದೆ ವಿವರವಾಗಿ ಪ್ರಸ್ತಾಪ ಮಾಡಿದ್ದೇನೆ. ಹೀಗೆ ವೇಂಗಡದೊಡೆಯನು ಸ್ಕಂದ ಅಥವಾ ಶೈವ ವಿಗ್ರಹವಾಗಿ ಕೆಲವು ಕಾಲ ಉಳಿದಿದ್ದರೆ ಆಶ್ಚರ್ಯವಿಲ್ಲ!

ಈ ಮೇಲಿನ ವಿಚಾರಗಳು ತಿರುವೇಂಗಡ, ತಿರುವೇಂಗಡದ ಒಡೆಯನ ವಿಚಾರವಾಗಿ ಪುರಾಣಗಳು, ಹಲವಾರು ಮಹನೀಯರುಗಳಿಂದ ರಚಿತವಾಗಿರತಕ್ಕ ಪುಸ್ತಕಗಳು, ಆಳ್ವಾರ್ ದಿವ್ಯ ಪ್ರಬಂಧಗಳು – ಇವುಗಳೆಲ್ಲದರಲ್ಲಿ ಕಂಡುಬರುವ ಮಲೆ ವೈಭವ, ವಿಚಾರ, ಮಲೆಯ ಹೆಸರಿನ ಹಿಂದಿನ ಇತಿಹಾಸ, ವಿವಿಧ ಪುಸ್ತಕಗಳಲ್ಲಿನ ಜಿಜ್ಞಾಸೆ, ಹಿಂದಿನ ತಮಿಳು ಕಾವ್ಯಗಳಲ್ಲಿ ಯಾವ ರೀತಿ ಚರ್ಚಿಸಲ್ಪಟ್ಟಿರು

ಭ್ರಷ್ಟ-ಮುಂತಾದ ಕುತೂಹಲಕಾರಿ ವಿಚಾರಗಳು, ಇವೆಲ್ಲವನ್ನೂ ಚರ್ಚಿಸಿದ್ದಾಯಿತು. ಇವುಗಳಿಂದ ಹೊಸ ವಿಚಾರಗಳು ತಿಳಿದವು. ಆದರೂ ನಾವು ಇಷ್ಟೇ ಮತ್ತು ಹೀಗೇ ಎನ್ನುವುದು ಮೂರ್ಖತನ. ನಮಗೆ ತಿಳಿಯದ ವಿಚಾರಗಳು ಇನ್ನೂ ಹಲವು ಇರಬಹುದು. ಅವುಗಳು ಎಲ್ಲೆಲ್ಲಿ ಅಭುಕ್ತವಾಗಿ ಅಡಗಿರುವುದೋ ಅಧ್ಯಯನ ಶೀಲರು ಅವಲೋಕಿಸಿ ಮುಂದೆಯೂ ಈ ವಿಚಾರದಲ್ಲಿ ಅಪೂರ್ವ ವಸ್ತುಗಳನ್ನು ಅಧಿಕವಾಗಿ ಹೊರ ತೆಗೆದು ಜನರ ಅವಗಾಹನೆಗಾಗಿ ಇಡಲಿ ಎಂದು ನಮ್ರತೆಯಿಂದ ಹಾರೈಸುತ್ತೇನೆ.

ಇನ್ನು ಮುಂದೆ, ಮೊದಲೇ ತಿಳಿಸಿದಂತೆ ಆಳ್ವಾರುಗಳು ಈ ದೇವನನ್ನು ಯಾವ ಯಾವ ದೃಷ್ಟಿಕೋನಗಳಿಂದ ದರ್ಶಿಸಿ ಅನುಭವಗಳನ್ನು ಪಡೆದು ಆ ದೇವರಿಗೆ ಮಂಗಳಾಶಾಸನ ಮಾಡಿ ಕೃತಾರ್ಥರಾಗಿದ್ದಾರೆಂಬುದನ್ನು ಪರಿಶೀಲಿಸೋಣ.

ಆಳ್ವಾರ್ ಪಾಶುರಗಳ ವಿಶ್ಲೇಷಣೆಯನ್ನು ಈ ಪುಸ್ತಕದ ಎರಡನೆಯ ಭಾಗವಾಗಿ ವಿಭಾಗಿಸಿರುತ್ತೇನೆ.

---

೧

ಪೊಯ್ಗೈಯ್ ಆಳ್ವಾರ್ ಅವರು ತಮ್ಮ 'ಮೊದಲ್ ತಿರುವಂದಾದಿ'ಯ ೧೦೦ ಪಾಶುರಗಳಲ್ಲಿ ೧೦ ಪಾಶುರಗಳನ್ನು ತಿರುವೇಂಗಡವನ್ನು ಕೀರ್ತಿಸಲು ಉಪಯೋಗ ಮಾಡಿದ್ದಾರೆ. ಅವುಗಳ ಅರ್ಥವನ್ನು ಗ್ರಹಿಸೋಣ.

ಈ ಆಳ್ವಾರ್ ವೇಂಗಡವನ್ನು ಕುರಿತು, ಎಂದರೆ ಈ ಬೆಟ್ಟದ ಮೇಲೆ ೨೬, ೩೭, ೩೮, ೩೯, ೪೦, ೮೨ ಪಾಶುರಗಳಲ್ಲಿ ಹಾಡಿದ್ದಾರೆ. ೭೬ನೆಯ ಪಾಶುರದಲ್ಲಿ ತಿರುವೇಂಗಡವೆಂದು ಸಂಬೋಧನೆ ಮಾಡಿದ್ದಾರೆ. ೭೭ನೇ ಪಾಶುರದಲ್ಲಿ ವೇಂಗಡವನ್ನು ಇತರ ದಿವ್ಯಕ್ಷೇತ್ರಗಳೊಂದಿಗೆ ಅಭ್ಯಾಸ ಮಾಡಿದ್ದಾರೆ. ವೇಂಗಡತ್ತಾಯ್, ವೇಂಗಡತ್ತುಮೇಯಾನ್ ಎನಿಸುವ ವೇಂಗಡದ ಆದಿ ದೈವವನ್ನು ೭೮ ಮತ್ತು ೯೯ನೆಯ ಪಾಶುರಗಳಲ್ಲಿ ಕೀರ್ತಿಸುತ್ತಾರೆ. ೭೬ನೆಯ ಪಾಶುರದಲ್ಲಿ 'ವೇಂಗಡವೂ ವೇಂಗಡದ ಒಡೆಯನೂ ಒಂದೇ' ಎನ್ನುವ ಭಾವ ಗ್ರಹಣ ಅನುಭವವಿದೆ.

ಐಶ್ವರ್ಯಾಪೇಕ್ಷಿಗಳೂ, ಕೈವಲ್ಯಾರ್ಥಿಗಳೂ, ಭಗವತ್ಕಾಮಿಗಳೂ ಸಹ ಪಾಪವನ್ನು ನಾಶಪಡಿಸತಕ್ಕ ವೇಂಗಡವನ್ನೇ ಆಶ್ರಯಿಸುವುದು. ನಿತ್ಯ ಸೂರಿಗಳ ಮನಸ್ಸನ್ನು ಉಜ್ವಲಗೊಳಿಸುವುದು ವೇಂಗಡ. ಎಂದರೆ ಎಲ್ಲಾ ಜೀವರು, ನಿತ್ಯರಿಂದ ಆಶ್ರಯಿಸಲ್ಪಡುವ ದಿವ್ಯಧಾಮ ಇದು. ಎಲ್ಲ ವಿಧವಾದ ಅಪೇಕ್ಷೆಗಳನ್ನು ಪೂರೈಸುವ ದಿವ್ಯ ಮಹಿಮೆ ಇದಕ್ಕಿರುವುದು. ಇದು ವರಪ್ರಸಾದಿ ! (೨೬) ತಮ್ಮ ಉಜ್ಜೀವನಕ್ಕೆ ಉಪಾಯವರಿಯದೆ, ಉಪಾಯಾಂತರಗಳಿಗೆ ವಶವಾಗದೆ, ಸೂಕ್ಷ್ಮವೇದಾರ್ಥಗಳನ್ನರಿತ ಜ್ಞಾನಿಗಳು ಪ್ರತಿದಿನ ಧೂಪ, ದೀಪ, ಪುಷ್ಪ, ತೀರ್ಥ, ಪರಿಕರಗಳನ್ನು ಕೊಂಡು ದಿಕ್ಕು ದಿಕ್ಕುಗಳಿಂದಲೂ ಸಂದಣಿಸಿ ಆಶ್ರಯಿಸುವ ಪರ್ವತ ವೇಂಗಡ ! ಬಿಳಿದಾದ ಪಾಂಚಜನ್ಯವನ್ನು ಊದಿದ ಬಾಯನ್ನುಳ್ಳ ಸ್ವಾಮಿಯು ಅಭಿಮಾನಿಸಿ ನೆಲಸಿದ ನೆಲ, ವೇಂಗಡ, (೩೭) ದೊಡ್ಡ ಆನೆಗಳನ್ನು ಹಿಡಿಯಲು ಕುರವರಿಂದ ಎಸೆಯಲ್ಪಟ್ಟ ಮಾಣಿಕ್ಯಗಳನ್ನು, ಅವು ಮಿಂಚುವಾಗ ಆಗಸದ ಮಿಂಚೆಂಬ ಭ್ರಾಂತಿಯಿಂದ 'ಮಳೆಯೆಲ್ಲಿ ಶೀಘ್ರವಾಗಿ ಬಂದುಬಿಡುವುದೋ' ಎನ್ನುವ ಭಯಾತುರಗಳಿಂದ ಹಾವುಗಳು ಬೇಗನೆ ಹುತ್ತಗಳನ್ನು ಸೇರಿಕೊಳ್ಳುವಂತೆ

ಸೊಗಸುವ ವೇಂಗಡ ! ದೇವತೆಗಳು ಅಹಮಹಮಿಕೆಯಿಂದ ದೇವನನ್ನು ಸೇವಿಸಲು ಓಡೋಡಿ ಬರುವ ಅಭಿಮಾನ ಸ್ಥಳವೇ ವೇಂಗಡ ! (೩೮) ಭೂಮಿಯನ್ನು ಉದ್ಧರಿಸಿದನು ; ಬೆಟ್ಟವನ್ನು ಮೇಲೆತ್ತಿ ಕಾಪಾಡಿದನು ; ಭಯಂಕರಾಕಾರನಾಗಿದ್ದ ಕಂಸನನ್ನು ಕೊಂದನು ; ಉಲ್ಲೋಲಕಲ್ಲೋಲವಾದ ಜಲಧಿಯಲ್ಲಿ ಶಯನಿಸಿದನು. ಈ ಮಹಿಮೆಗಳನ್ನೆಲ್ಲ ಭೂಲೋಕದ ಜನ ತಿಳಿದೂ ಇರುತ್ತಾರೆ ; ತಿಳಿಯದೆಯೂ ಇರುತ್ತಾರೆ. ಆದರೆ ಅವನ ಉತ್ಕರ್ಷವು ಎಲ್ಲರಿಗೂ ತಿಳಿಯುವಂತೆ ಪ್ರಕಾಶಿಸುವುದು ವೇಂಗಡದಲ್ಲಿಯೇ ಎಂದಾಗ ವೇಂಗಡದ ಮಹಿಮೆಗೆ ಸರಿಯುಂಟೆ, ಸಮಾನವುಂಟೆ ? (೩೯) ಹೊಲವನ್ನು ಮೇಯಲು ಬಂದ ಆನೆ, ಬಿಲ್ಲು ಬಾಣಗಳಿಂದ ಸುಸಜ್ಜಿತರಾಗಿ ಪಂಜುಗಳನ್ನು ಉರಿಸುತ್ತಾ ಮೇಲೆ ಎರಗಿ ಬರುವ ಕುರವರನ್ನು ಕಂಡು ಭೀತಿಯಿಂದ ಪಲಾಯನ ಮಾಡುತ್ತಿರಲು, ಎದುರಿನ ಆಗಸದಲ್ಲಿ ಉದುರುವ ಉಲ್ಕೆಯು ಅದರ ಕಣ್ಣಿಗೆ ಕುರವರು ಎಸೆದ ದೊಂದಿಯೋ ಎಂಬ ಭ್ರಾಂತಿಯನ್ನು ಉಂಟುಮಾಡಿ ಆ ಆನೆ ಮತ್ತೂ ಭಯದಿಂದ ಮತ್ತೊಂದು ದಿಕ್ಕಿಗೆ ಪಲಾಯನ ಮಾಡುವುದಂತೆ ವೇಂಗಡದ ಮೇಲೆ ! ಹಿಂದೆ ಹಿರಣ್ಯಕಶಿಪುವನ್ನು ಸಂಹಾರ ಮಾಡಿದ ನಂತರ ಶಾಂತವಾದ ತಾಣವನ್ನು ಅರಿಸಿಕೊಂಡು ಬಂದ ದೇವನು ಈ ಸೌಂದರ್ಯಮಯವಾದ ಪ್ರದೇಶಕ್ಕೆ ಮಾರುಹೋಗಿ ಇಲ್ಲಿಯೇ ನಿಂತುಬಿಟ್ಟನು. ಅಂತಹ ಸುಂದರವಾದ ಜಾಗ ವೇಂಗಡ ! (೪೦) ಪರಮಪದವನ್ನೇ ಬೀಡಾಗಿ ಉಳ್ಳ ಪರಮಾತ್ಮನು ವೇಂಗಡದ ಸೊಬಗಿಗೆ ಸೋತು ಅದಕ್ಕಿಂತ ಇದೇ ಚೆನ್ನು ಎಂದು ಭಾವಿಸಿ ಇಲ್ಲಿ ನೆಲಸಿದ. ವೇದಪ್ರತಿಪಾದ್ಯನಾದ ಸ್ವಾಮಿಯ ಮಹಿಮೆಯನ್ನರಿಯಲು ಯುಗ ಯುಗಾಂತರಗಳಿಂದಲೂ ಪ್ರಯತ್ನ ನಡೆದೇ ಇದೆ. ಆದರೆ ಅವನ ಶಕ್ತಿ ಸಾಮರ್ಥ್ಯ ಇನ್ನೂ ಒಗಟಾಗಿಯೇ ಉಳಿದಿದೆ. ಇವನ ಸ್ವರೂಪ ಮತ್ತು ನೆಲೆಗಳನ್ನು ಅರಿತವರು ಯಾರು ? ವೇಂಗಡದ ಮೇಲೆ ನಿಂತ ಅವನನ್ನು ಅರಿತಿರುವ ನಾವೇ, ಈ ಹಿಂದೆ ತಪಸ್ಸು ಮಾಡಿಯೂ ಅವನನ್ನು ಪಡೆಯದ ಋಷಿಮುನಿಗಳಿಗಿಂತ ಎಷ್ಟೋ ಮೇಲಲ್ಲವೆ ? ಆ ಪರಮಾತ್ಮನಾದರೋ ಅವರೆಲ್ಲರಿಗಿಂತ ನಮಗೇ ಸಮೀಪಸ್ಥನೂ, ಸರ್ವಸುಲಭನೂ ಆಗಿದ್ದಾನೆ. ಇದು ಸಾಧ್ಯವಾಗಿರುವುದು ಅವನು ವೇಂಗಡದ ಮೇಲೆ ನೆಲಸಿರುವುದರಿಂದ ಅಲ್ಲವೆ ? (೪೧) ಭಕ್ತಿಯಿಂದ ಅವನನ್ನು ಆಶ್ರಯಿಸಿದವರು, ವೇದದಲ್ಲಿ ಉಕ್ತವಾಗಿರುವ ಸ್ವರೂಪವನ್ನು ಪಡೆಯುತ್ತಾರೆ. ಭೂಮಿಯನ್ನು ಅಳೆದ ಕಲ್ಯಾಣಗುಣಗಣಭರಿತನಾಗಿರುವ ಪರಮಾತ್ಮನ ಸ್ವರೂಪವೇ ತಿರುವೇಂಗಡ ! ದೋಷ ಲೋಪವಿಲ್ಲದೆ ಆಶ್ರಿತರಿಗೆ ಪರಮಪದವನ್ನು ನೀಡಬಲ್ಲ ಸಾಮರ್ಥ್ಯ ವೇಂಗಡಕ್ಕೆ ಇರುತ್ತದೆ ! (೪೨) ವೇಂಗಡ, ವೇ ಕಾ, (ಕಾಂಚಿಪುರದ 'ಯಥೋಕ್ತಕಾರಿ' ಎನ್ನುವ ದೇವರ ಸನ್ನಿಧಿ)

ಪರಮಪದ ಮತ್ತು ನೀರು ಮತ್ತು ಪುಷ್ಪಗಳಿಂದ ಸಮೃದ್ಧಗೊಂಡ ತಿರುಕ್ಕೋವಲೂರ್ ಕ್ಷೇತ್ರಗಳಲ್ಲಿ ದೇವನು ನಿಂತಿದ್ದಾನೆ, ಕುಳಿತಿದ್ದಾನೆ, ಶಯನಿಸಿದ್ದಾನೆ ಮತ್ತು ಸಂಚಾರ ಮಾಡುತ್ತಿದ್ದಾನೆ. ಈ ದಿವ್ಯ ಕ್ಷೇತ್ರಗಳನೂ ಅಲ್ಲಿನ ಸ್ವಾಮಿಯ ಸ್ವರೂಪ ರೂಪ ಗುಣ ವಿಭವಾದಿಗಳನ್ನೂ ನೆನೆದರೇ ಸಾಕು ಭವ ರೋಗಾದಿ ಬಾಧೆಗಳೆಲ್ಲವೂ ಪರಿಹಾರಗೊಳ್ಳುತ್ತವೆ. (೭೭) ಕತ್ತಿಯ ಅಲಗಿನಂತೆ ಪ್ರಕಾಶಮಾನವಾಗಿರುವ ಕಣ್ಣಿನ ಪ್ರಕಾಶವನ್ನುಳ್ಳ ಸ್ತ್ರೀಯರು ದ್ವಾದಶಿಯ ಪವಿತ್ರದಿನದಂದು ಹೂಮಾಲೆಗಳಿಂದ ಸುಸಜ್ಜಿತರಾಗಿ ಬಂದು ಪರಮಾತ್ಮನಿಗೆ ಭಕ್ತಿಯಿಂದ ಸಮರ್ಪಿಸುವ ಧೂಪದ ಹೊಗೆಯು ಆಕಾಶವನ್ನೆಲ್ಲಾ ಆಕ್ರಮಿಸಿಕೊಂಡು ಅಲ್ಲಿನ ನಕ್ಷತ್ರಗಳನ್ನು ಅದರ ದಟ್ಟ ಆವರಣದಿಂದ ಮುಚ್ಚಿ ಬಿಟ್ಟಿದೆ. ಇಂತಹ ದಿವ್ಯ ಮಹಿಮೆಯನ್ನುಳ್ಳ ದೇವನು ಹಿಂದೊಮ್ಮೆ ಮಾಯಾಮೃಗವನ್ನು ಕೊಂದು ಹಾಕಿದನು. ಅವನೇ ನೆಲಸಿರುವ ದಿವ್ಯಧಾಮ ವೇಂಗಡ (೮೨) ಒಳ್ಳೆಯ ಮನಸ್ಸೇ! ಆ ಪುರುಷೋತ್ತಮನು ನಮ್ಮ ಉಳಿಯುವಿಕೆಗೆ ಕಾರಣನಾಗಿದ್ದಾನೆ. ಯಾವಾಗಲೂ ನಮ್ಮನ್ನು ಕಾಪಾಡುತ್ತಾನೆ. ಧ್ಯಾನಿಸುವವರ ಮನಸ್ಸಿನಲ್ಲಿ ಮನೆ ಮಾಡಿಕೊಂಡಿರುವವನು ಅವನು. ಕ್ಷೀರ ಸಾಗರದಲ್ಲಿಯೂ, ವೇಂಗಡಲ್ಲಿಯೂ ಇರುವವನೇ, ನಮ್ಮ ಹೃದಯದಲ್ಲೂ ನೆಲಸಿರುವುದು. ನಾವೆಷ್ಟು ಧನ್ಯಜೀವಿಗಳು! (೯೯).

ಇನ್ನು 'ಎರಡನೆಯ ತಿರುವಂದಾದಿ'ಯನ್ನು ಗಮನಿಸೋಣ. ಇದನ್ನು ಪೂದತ್ತಾಳ್ವಾರ್ ರಚಿಸಿದ್ದಾರೆ. ಇದೂ ನೂರು ಪಾಶುರಗಳ ಪ್ರಬಂಧ. ೧೩ ಪಾಶುರಗಳಲ್ಲಿ ವೇಂಗಡದ ಪ್ರಸ್ತಾಪವಿದೆ. ಈ ಆಳ್ವಾರ್ ೨೫, ೪೬, ೫೩, ೫೪ ಪಾಶುರಗಳಲ್ಲಿ ವೇಂಗಡವನ್ನು ವರ್ಣಿಸಿದ್ದಾರೆ. ತಿರುವೇಂಗಡಂ ಎಂದು ೭೫ನೇ ಪಾಶುರದಲ್ಲಿ ನಾಮನಿರ್ದೇಶ ಮಾಡಿದ್ದಾರೆ. ೨೮, ೪೫ನೇ ಪಾಶುರ ಗಳಲ್ಲಿ ವೇಂಗಡತ್ತಾನ್ ಎಂದು ಕರೆಯಲ್ಪಡುವ ತಿರುವೇಂಗಡದೊಡೆಯನ ಪ್ರಶಂಸೆಯಿದೆ. ವೇಂಗಡವನ್ ಎಂದು ೩೩, ೩೭ನೇ ಪಾಶುರಗಳಲ್ಲಿ ಕೀರ್ತಿಸಲ್ಪ ಟ್ಟಿದೆ. ೪೮ನೇ ಪಾಶುರದಲ್ಲಿ ಶೋಲೈಮಲೆ ಎಂದು ಹೊಸದಾಗಿ ವೇಂಗಡವನ್ನು ಕರೆದಿದ್ದಾರೆ. ೭೦ನೇ ಪಾಶುರದಲ್ಲಿ "ತಣ್‌ಪೊರುಪ್ಪು" "ಶೀತಳವಾದ ಬೆಟ್ಟ" ವೆಂಬುದಾಗಿ ವೇಂಗಡವನ್ನು ಶ್ಲಾಘಿಸಿದ್ದಾರೆ. ವೇಂಗಡದೊಡೆಯನನ್ನು "ಪತಿ" ಎಂಬುದಾಗಿ ಹೊಸ ಸಂಬೋಧನೆಯೊಡನೆ ೨೬, ೨೭ನೇ ಪಾಶುರಗಳಲ್ಲಿ ಹಾಡಿದ್ದಾರೆ. ಬಿದಿರುಕಾಡಿನಿಂದ ತುಂಬಿದ ವೇಂಗಡವನ್ನು 'ಶೋಲೈ ಮಲೈ' (ಉದ್ಯಾನದಿಂದ ಕೂಡಿದ ಬೆಟ್ಟ) ಎಂದೂ, ಅಬ್ಬಿ, ಜಲಪಾತ, ಕಾಲುವೆಗಳಿಂದ ಕೂಡಿದ ಈ ತಾಣವನ್ನು 'ತಣ್ ಪೊರುಪ್ಪು' ಎಂದು ನಿರ್ದೇಶನ ಮಾಡಿರುವುದೂ, 'ಪತಿ' ಎನ್ನುವ ಹೊಸ ಸಂಬೋಧನೆಯಿಂದ ಸ್ವಾಮಿಯನ್ನು ನಮಿಸಿರುವುದೂ ಈ ಆಳ್ವಾರರ ವೈಶಿಷ್ಟ್ಯಗಳು. ಸಾಮಾನ್ಯವಾಗಿ 'ಶೋಲೈ ಮಲೈ' ಎನ್ನುವುದು

ತಿರುವಮಾಲಿರುಂಶೋಲೈಗೆ ಅನ್ವಯ. ಆಳ್ವಾರ್ ಇಲ್ಲಿ ತಿರುಮಲೆಯನ್ನು ಆ ರೀತಿ ಕರೆದಿರುವುದು ನೋಡಿದರೆ ಈ ಎರಡು ಬೆಟ್ಟಗಳನ್ನೂ, ಪರಮಾತ್ಮನು ಒಲಿದಿರುವುದರಿಂದಲೇ ಒಂದೇ ಹೆಸರಿನಿಂದಲೂ, ವಡವೇಂಗಡಂ, ತೆನ್‌ವೇಂಗಡಂ ಎಂಬುದಾಗಿಯೂ ಗುರುತಿಸಿದ್ದಿರಬಹುದಾದ ಭಾವವೇರ್ಪಡುತ್ತದೆ. ಆದರೆ ತಿರುವಮಾಲಿರುಂಶೋಲೈ ಅನ್ನು ತೆನ್‌ವೇಂಗಡವೆಂದೋ, ವೇಂಗಡವೆಂದೋ ಕರೆದಿಲ್ಲ. ತಿರುಮಲೆಯನ್ನು ವಡವೇಂಗಡವೆಂದು ನಿರ್ದೇಶಿಸಿರುವುದರಿಂದ ಅದಕ್ಕೆ ಒಂದು 'ತೆನ್' ಇರಬೇಕೆಂಬುದಾಗಿ ವಾದಮಾಡುವ ದೆಸೆಯಿಂದ ಹೇಳಿದ್ದೇನೆ ಅಷ್ಟೆ !

ನಿತ್ಯಸೂರಿಗಳಿಂದ ಸ್ತುತಿಸಲ್ಪಡುವ ಅನಾದಿ ಕೀರ್ತಿತನಾದ ಸರ್ವೇಶ್ವರನು ಲಂಕೆಗೆ ಹೋಗಿ ರಾವಣನನ್ನು ಸಂಹರಿಸಿದನು. ನಂತರ ಭಕ್ತರ ಉದ್ಧಾರಕ್ಕೆಂದೇ ಅವನು ಬಂದು ನಿಂತಿರುವುದು ಬಿದಿರು ಮೆಳೆಗಳಿಂದ ಕೂಡಿ, ದೊಡ್ಡದೂ, ವಿಸ್ತಾರವೂ, ತಂಪೂ ಆದ ಶಿಖರಗಳನ್ನು ಉಳ್ಳ ಈ ವೇಂಗಡದ ಗಿರಿಯಲ್ಲಿಯೇ ಅಲ್ಲವೆ ! (೨೫) ಸನ್ಮಾರ್ಗ ವಿರೋಧಿಗಳು ಎನಿಸಲ್ಪಡುವ 'ಪಂಚಭೂತ ಪಂಚೇಂದ್ರಿಯ'ಗಳನ್ನು ಸ್ವಾಧೀನ ಪಡಿಸಿಕೊಂಡು, ಪ್ರೀತಿಯಿಂದ ದೇವನನ್ನು ನಮಸ್ಕರಿಸಬೇಕೆಂದು ನಾಮುಂದು, ತಾಮುಂದು ಎಂದು ತಳ್ಳಾಡುತ್ತಿರುವ ಮರ್ತ್ಯರನ್ನು ಕ್ಷೀರಸಾಗರ ಶಾಯಿಯಾದ ಪರಮಾತ್ಮನು, ತನ್ನ ದರ್ಶನಕ್ಕೆಂದೇ ಕಾದು ನಿಂತಿರುವ ಬ್ರಹ್ಮಾದಿ ದೇವತೆಗಳಿಗೆ ಅನುಗ್ರಹಿಸುವಂತೆಯೇ ಕರುಣಿಸಬೇಕೆಂಬ ವ್ಯಾಜದಿಂದ ಇಲ್ಲಿ ನಿತ್ಯವಾಸ ಮಾಡುತ್ತಿದ್ದಾನೆ. ಅಂತಹ 'ಪತಿ'ಯ ವೇಂಗಡ ನಿಜಕ್ಕೂ ಪವಿತ್ರವೇ ಸರಿ ! (೨೬) ನಿತ್ಯ ಸೂರಿಗಳಿಗೆ ಪವಿತ್ರವಾದ ವೈಕುಂಠದಂತೆ, ಮರ್ತ್ಯರಿಗೆ ಭೂಲೋಕದಲ್ಲಿನ ವೈಕುಂಠ ಇದು. ವೇಂಗಡದಲ್ಲೇ ನಿಂತರೂ ಕೂಡ ವ್ಯಾಪಕ ವಾಗಿ ಸಂಚಾರ ಮಾಡುವ ಮನಸ್ಸು ಪರಮಾತ್ಮನನ್ನು ಹುಡುಕುತ್ತಾ ಚಂದ್ರ ನನ್ನೂ ಆಗಸವನ್ನೂ ಮೀರಿ, ಸುಂದರ ವೃಕ್ಷವನ್ನು ಆಶ್ರಯಿಸುವ ಬಳ್ಳಿಯಂತೆ ಮುಂದು ಮುಂದಕ್ಕೆ ಸಾಗುತ್ತಲೇ ಇದೆ. (೨೭) ಭಕ್ತರಿಂದಲೂ, ದೇವತೆ ಗಳಿಂದಲೂ ಏಕರೂಪದಲ್ಲಿ ಸ್ತುತಿಸಲ್ಪಡುತ್ತಾನೆ ನಮ್ಮ ಸ್ವಾಮಿ ! ಸಾಗರದಲ್ಲಿ ಶಯನಿಸಿದ್ದಾನೆ. ಹಿಂದೆ ಕುದುರೆಯಂತೆ ಬಂದ ಕೇಶಿಯನ್ನು ಬಾಯಿ ಸೀಳಿ ಕೊಂದ ಬಾಲಕನೇ ಈತ. ಇವನೇ ಅಭೇಧ್ಯವಾದ ಮದಿಲುಗಳಿಂದ ಆವರಿಸಲ್ಪಟ್ಟು ಮೆರೆಯುವ ಶ್ರೀರಂಗಕ್ಷೇತ್ರದಲ್ಲಿಯೂ ನೆಲಸಿರುವುದು. ಇವನೇ ನನ್ನ ಮನಸ್ಸಿನಲ್ಲಿಯೂ ಸರ್ವದಾ ನೆಲೆಗೊಂಡಿರುವುದು (೨೮) ಮನಸ್ಸು ತುಲಸೀಮಾಲಾಧರನನ್ನೇ ನೆನೆಯುತ್ತಿರುವುದು. ಅವನ ನಾಮಸಂಕೀರ್ತನಕ್ಕೆ ತಹತಹಿಸುತ್ತಿರುವುದು. ಅಂಗವು ಅವನಿಗೆ ನಮಿಸುತ್ತಿದೆ. ಬಾಯಿಯೋ ಬಿದಿರು ಮೆಳೆಗಳಿಂದ ನಿಬಿಡವಾದ ಬೆಟ್ಟದ ಮೇಲೆ ನಿಂತ ತೇಜೋವಿಶಿಷ್ಟನಾದ

ವೇಂಗಡದೊಡೆಯನ ಶ್ರೀ ಮೂರ್ತಿಯ ಸ್ವಭಾವ ಲಾವಣ್ಯಾದಿಗಳನ್ನೇ ಸಂಕೀರ್ತಿಸಲು ಆಶಿಸುತ್ತಿರುವುದು (೩೩) ವೇದಪ್ರತಿಪಾದ್ಯನೂ, ವೇಂಗಡದಲ್ಲಿ ನೆಲಸಿರುವವನೂ, ನಿತ್ಯ ಸೂರಿಗಳ ಮಣಿಮುಕುಟಗಳಿಂದ ಅಲಂಕರಿಸಲ್ಪಟ್ಟ ದಿವ್ಯಪಾದಗಳನ್ನು ಉಳ್ಳವನೂ ಆದ ಸ್ವಾಮಿಯನ್ನು ಆಶ್ರಯಿಸಿದ ನಂತರ ಐಶ್ವರ್ಯದ ಗರ್ವವೆಲ್ಲಾ ಕ್ವಚಿತ್ತಾಗಿ ಏರ್ಪಡುತ್ತದೆ. ನೆನ್ನೆ ಇದ್ದಿತು ಇಂದು ಇಲ್ಲವಲ್ಲಾ ಎನ್ನುವ ಈಪ್ಸಿತಾದಿ ಬಾಧೆಗಳು ಅಂತಹವರ ಹತ್ತಿರ ಸುಳಿಯು ವುದೇ ಇಲ್ಲ ಖಂಡಿತ ! (೪೫) ಶ್ರೀರಂಗ, ತಿರುಕ್ಕೋಟ್ಟಿಯೂರ್‌ಗಳು ವಾಸ ಸ್ಥಳಗಳಾದುವು. ಆದರೂ ಹಲವು ಕಾಲದಿಂದ ವಾಸ ಮಾಡುತ್ತಿರುವುದು ವೇಂಗಡ ! ಮತ್ತು ತೋಪುಗಳಿಂದ ಕಂಗೊಳಿಸುತ್ತಿರುವ ತಿರುನೀರ್ಮಲೆ (೪೬) ನಾಲ್ಕು ವೇದಗಳನ್ನು ಪ್ರಕಾಶಪಡಿಸಿದೆ ; ವೇದ ಪುರುಷನೆನಿಸಿಕೊಂಡೆ ; ಸಂಸ್ಕೃತಿ ಇತಿಹಾಸಗಳನ್ನೆಲ್ಲಾ ಅಧ್ಯಯನ ಮಾಡಿಸಿದೆ ; ಶ್ರೀದೇವಿಯ ಬಾಹು ಗಳಿಂದ ಸಂಶ್ಲೇಷೆಗೊಂಡಿರುವ ; ಆಶ್ರಿತರಲ್ಲೂ ವ್ಯಾಮೋಹದಿಂದಿರುವೆ ; ಬಿದಿರು ಮೆಳೆಗಳು ದಟ್ಟಯಿಸಿದ ವೇಂಗಡದ ಬೆಟ್ಟದಲ್ಲಿ ಉನ್ನತವಾದ ತೋಪು ಗಳಿಂದ ಆವರಿಸಲ್ಪಟ್ಟು ಇರುವ ಈ ತಾಣವನ್ನು ಆಶಿಸಿ ನಿನ್ನದನ್ನಾಗಿಸಿಕೊಂಡೆ, (೪೮) ವೇಂಗಡವನ್ನು ಆಶ್ರಯಿಸಿ ಬಂದ ತಪೋಧನರು ತಪೋಮುದ್ರೆಯಲ್ಲಿ ಅಲುಗಾಡದೇ ನಿಂತಿರಲು ಅವರ ಮೈಗಳನ್ನು ಬಳ್ಳಿಗಳು, ಇವು ಸಣ್ಣ ಬೆಟ್ಟ ಗುಡ್ಡಗಳೋ ಎಂಬ ಭ್ರಾಂತಿಯಿಂದ ಆವರಿಸಿಕೊಂಡು ಅವರ ಶಿರೋ ಪ್ರಾಂತ್ಯವನ್ನೂ ಮುಚ್ಚಿಕೊಂಡಿತು. ಇಂತಹ ವಿಚಿತ್ರ ವ್ಯಾಪಾರವಾಗುತ್ತಿದ್ದರೂ ವಿಚಲಿತರಾಗದೇ ಇದ್ದಾರೆ, ಆ ಯೋಗಿಗಳು. ಇವರಂತಹ ಭಕ್ತಿಮಾರ್ಗಿಗಳಿಂದ ತುಂಬಿರುವ, ತಟಾಕಾದಿ ದಿವ್ಯತೀರ್ಥಗಳಿಂದ ಕಂಗೊಳಿಸುವ ವೇಂಗಡವನ್ನೇ ಅಲ್ಲವೇ ನಾನೂ ಆಶ್ರಯಿಸಿ ಶ್ರೇಯಸ್ಸನ್ನು ಹೊಂದುವುದು (೫೩) ಬೆಟ್ಟಗಳೆಂದು ಇಷ್ಟಪಡುವ ಜಾಗಗಳೆರಡು – ಒಂದು ವೇಂಗಡ ಮತ್ತೊಂದು ತಿರುಮಾಲಿರುಂ ಶೋಲೈ. ಇವನ್ನು ನೀನು ವಾಸಕ್ಕೆ ಯೋಗ್ಯವೆಂದು ಅಂಗೀಕರಿಸಿದೆ. ಆದರೂ ನಿನ್ನ ಹೃದಯಾಂತರಾಳದಿಂದ ಅಭಿಮಾನಿಸಿ ಭಕ್ತರ ಹೃದಯುವನ್ನು ನಿನ್ನ ಮಂದಿರವನ್ನಾಗಿಸಿಕೊಂಡಿರುವೆಯಲ್ಲ ! ನಿನ್ನ ಹೃದಯುವನ್ನು ಈ ರೀತಿ ಅಪಹರಿಸಿರುವ ಈ ಮೂರು ಕೋವಿಲ್‌ಗಳಲ್ಲಿ ತಂಗಿರುವುದರಿಂದ ನಿನ್ನ ಹಳೆಯ ವಾಸಸ್ಥಾನವಾದ ಕ್ಷೀರಾಬ್ಧಿಯನ್ನು ಎಲ್ಲಿ ತ್ಯಜಿಸಿ ಬಿಡುವೆಯೋ ಎನ್ನುವ ಭಯ ನನಗುಂಟಾಗಿದೆ. ದಯುವಿಟ್ಟು ಆ ರೀತಿ ಮಾಡಿಬಿಡಬೇಡ ! (೫೪) ಭಕ್ತರ ಹೃದಯ, ತಂಜಾ ಊರಿನ ಮಾಮಣಿಕ್ಕೋಯಿಲ್, ಶ್ರೀರಂಗ, ತಿರುತಣ್ಣಾಲ್, ಶೀತಲವಾದ ತಿರುವೇಂಗಡ, ಕ್ಷೀರಸಾಗರ, ಮಹಾಬಲಿಪುರ (ಮಾಮಲ್ಲೈ) ತಿರುಕ್ಕೋವಲೂರ್ ಮತ್ತು ಪ್ರಾಕಾರಗಳಿಂದ ಮೆರೆಯುವ ಕುಂಭಕೋಣ ಇವೆಲ್ಲಾ ಶತ್ರುನಿರಸನ (ಅರಿಷಡ್ವರ್ಗಗಳೆಂಬ, ಭಗವದಾಶ್ರಯಕ್ಕೆ ವಿರೋಧ

ಪಾಗಿರುವ ಗುಣಗಳು) ಮಾಡಬಲ್ಲ ದಿವ್ಯಕ್ಷೇತ್ರಗಳು. ಮಹಾವಿಷ್ಣುವಿನ ನೆಲೆಗಳು (೭೦) ಬ್ರಾಹ್ಮೀ ಮುಹೂರ್ತದಲ್ಲಿ ಎದ್ದ ಕಪಿಗಳು ತೀರ್ಥದಲ್ಲಿ ಮಿಂದು, ಆಗತಾನೇ ಬಿರಿಯುತ್ತಿರುವ ಪುಷ್ಪಗಳನ್ನು ತಿರಿದು ತಂದು ನಿನ್ನ ಪಾದಗಳನ್ನು ಅರ್ಚಿಸುತ್ತಿವೆ. ಹಾಗೆಯೇ ನನ್ನ ಮನಸ್ಸೇ! ನೀನೂ ಕೂಡ ಸುಂದರವಾದ ವೇಂಗಡದೊಡೆಯನ ನಾಮಗಳನ್ನು ಅನುಸಂಧಾನ ಮಾಡಿಕೊಂಡು ಅವನ ದಿವ್ಯ ಮಂಗಳ ವಿಗ್ರಹದ ಪದತಲದಲ್ಲಿ ಪುಷ್ಪಗಳನ್ನು ಅರ್ಚಿಸಿ ಧನ್ಯತೆಯನ್ನು ಪಡೆದುಕೊ (೭೨) ಘನವಾದ ಆಕೃತಿಯನ್ನು ಕೊಂಡ ಹೆಣ್ಣಾನೆಯ ಮುಂದೆ ನಿಂತು, ಪ್ರೀತಿಯಿಂದ, ಎರಡು ಗಿಣ್ಣುಳ್ಳ ಚಿಕ್ಕ ಚಿಕ್ಕ ಬಿದಿರು ತುಂಡನ್ನು ಗಿಡದಿಂದ ಸಿಗಿದು ಬಿಡಿಸಿ, ಎಳೆಯದಾಗಿರುವುದನ್ನೇ ಆರಿಸಿ ತಂದು, ಅಲ್ಲಿಯೇ ಸಿಗುವ ಜೇನಿನಲ್ಲಿ ಅದ್ದಿ, ಸೊಂಡಲಿನಲ್ಲಿ ಅದಕ್ಕೆ ನೀಡುತ್ತಿರುವ, ಕುಂಭಸ್ಥಳಗಳಲ್ಲಿ ಮದಜಲ ಒಸರುತ್ತಿರುವ ಗಂಡಾನೆಗಳಿಂದ ಶೋಭಿಸುವ ಮತ್ತು ಮೇಘವರ್ಣದ ಮೈ ಕಾಂತಿಯಿಂದ ರಂಜಿಸುವ ಸರ್ವೇಶ್ವರನು ವಾಸಮಾಡುವ ವೇಂಗಡವೆಂಬ ದಿವ್ಯ ಪರ್ವತವನ್ನು ಕಂಡು ಧನ್ಯರಾಗಿರಿ. (೭೫)

ಮುಂದಿನದು ಪೇಯಾಳ್ವಾರ್ ಅವರ 'ಮೂನ್ರಾಂತಿರುವಂದಾದಿ'. ಇದೂ ಸಹ ನೂರು ಪಾಶುರಗಳನ್ನು ಒಳಗೊಂಡ ದಿವ್ಯಪ್ರಬಂಧ. ೧೯ ಪಾಶುರಗಳಲ್ಲಿ ವೇಂಗಡವನ್ನು ಹಾಡಿದ್ದಾರೆ. ಇವರೇ ಮೊತ್ತಮೊದಲಿಗೆ ವೇಂಗಡವನ್ನು ತಿರುಮಲೆ (ಶ್ರೇಷ್ಠವಾದ ಬೆಟ್ಟ) ಎಂದು ಕರೆದಿರುವುದು ಮತ್ತು ವಿಚಿತ್ರವೆಂಬಂತೆ ಶಿವ ಮತ್ತು ವಿಷ್ಣುಮೂರ್ತಿಗಳು ಈ ವೇಂಕಟೇಶನ ದಿವ್ಯ ಮಂಗಳ ವಿಗ್ರಹದಲ್ಲಿ ಒಂದಾಗಿ ಸೇರಿದ್ದಾರೆ ಎನ್ನುವ ಅರ್ಥಮಾಡಿದ್ದಾರೆ. ಮೊದಲ ಇಬ್ಬರು ಆಳ್ವಾರುಗಳಿಗಿಂತ ಹೆಚ್ಚಿನ ಪಾಶುರಗಳನ್ನು ವೇಂಗಡಕ್ಕೆ ಅಂಕಿತಗೊಳಿಸಿ ಪ್ರಕೀರ್ತಿಸಿ ದ್ದಾರೆ. ಪ್ರಕೃತಿವರ್ಣನೆಗೆ ಬಹುಪಾಲು ಪಾಶುರಗಳನ್ನು ಅಥವಾ ಪಾಶುರಗಳ ಬಹುಪಾಲನ್ನು ಮೀಸಲಿರಿಸಿದ್ದಾರೆ. ಇವರದು ಅಲಂಕಾರಿಕ ಶೈಲಿ. ಕಾಡುಪ್ರಾಣಿ ಗಳ ವರ್ಣನೆ, ವಿಚಿತ್ರ ಜನಜೀವನ ಇವೆಲ್ಲಾ ಅಧ್ಯಯನ ಯೋಗ್ಯವಾದ ಇವರ ಕಾವ್ಯವಸ್ತುಗಳು. ಈ ಎಲ್ಲಾದೃಷ್ಟಿಗಳಿಂದ ಪೇಯಾಳ್ವಾರ್ ಈ ಮೂವರಲ್ಲಿ ಮೊದಲಿಗರಾಗಿ ನಿಲ್ಲುತ್ತಾರೆ. ಈ ಹತ್ತೊಂಭತ್ತು ಪಾಶುರಗಳಲ್ಲಿ ೧೩ ಪಾಶುರ ಗಳಲ್ಲಿ ವೇಂಗಡವನ್ನೂ ಮೂರು ಪಾಶುರಗಳಲ್ಲಿ 'ವೇಂಗಡತ್ತಾನ್' ಮತ್ತು ಒಂದು ಪಾಶುರದಲ್ಲಿ 'ವೇಂಗಡವನ್ನೈ' ಅನ್ನೂ ಬಣ್ಣಿಸಿದ್ದಾರೆ. 'ತಿರುಮಲೆ' ಎಂಬುದಾಗಿ ಎರಡು ಪಾಶುರಗಳಲ್ಲಿ ಈ ಬೆಟ್ಟವನ್ನು ನಿರ್ದೇಶಿಸಿದ್ದಾರೆ. ನಾಯಕಿಯು ವೇಂಗಡದೊಡೆಯನ ವಿರಹದಿಂದ ಬಾಧೆ ಪಡುವುದನ್ನು ಅವಳ ತಾಯಿಯೋ ಸಖಿಯೋ ಹೇಳುವಂತೆ ಬರುವ ಒಂದು ಪಾಶುರವು ರಮ್ಯವಾಗಿದೆ. ಇಂತಹ ಪದ್ಯಪ್ರಕಾರ ಮೊತ್ತಮೊದಲಿಗೆ ಇಲ್ಲಿ ಕಾಣಿಸಿಕೊಳ್ಳುತ್ತದೆ: ಸೊಗಸಾದ ಕಲ್ಪನೆ, ನಾಲ್ರಾಯಿರ ದಿವ್ಯಪ್ರಬಂಧ ಸಾಹಿತ್ಯ ಪ್ರಪಂಚದಲ್ಲಿ !

ಚತುರ್ವೇದಪ್ರತಿಪಾದ್ಯನಾದವನೂ ದೇವತೆಗಳ ಮುಕುಟಸ್ಪರ್ಶ ಹೊಂದಿದ ಪಾದಗಳನ್ನುಳ್ಳವನೂ ಆದ ವೇಂಗಡದೊಡೆಯನನ್ನು ಆಶ್ರಯಿಸಿ ಮನಸ್ಸಿಟ್ಟು ವಾಸಿಸು. ಯುವತಿಯರ ತೋಳ್ಬಳಸಿನ ಆಸೆಯನ್ನು ತೊರೆಯಲು ಇದೊಂದೇ ಮಾರ್ಗ. (೧೪) ಕಾಂಚೀಪುರವೂ, ವೇಂಗಡವೂ, ವೆಃಕಾವೂ ತಿರುವೆಳುಕ್ಕೈಪಾಡಿಯೂ, ತುಳಸೀಮಾಲಾಧರನಾದ ಭಗವಂತನ ವಾಸಸ್ಥಳಗಳು, ಅವನಲ್ಲೇ ನೆಲೆಗೊಂಡಿರುವ ನನ್ನ ಮನಸ್ಸು – ಕೆಂಪಾದ ಕಣ್ಣುಳ್ಳ ಆದಿಶೇಷನನ್ನು ಅವನು ನಿಮಿಷ ಮಾತ್ರವೂ ಅಗಲಿರದಂತೆ – ಅವನಿಂದ ಬೇರ್ಪಡುವುದಿಲ್ಲ. (೨೮) ಕ್ಷೀರಸಾಗರ, ಕುಂಭಕೋಣ, ವೇಂಗಡ, ಋಜುಮನಸ್ಸು, ವಿಶಾಲವಾದ ಪರಮಪದ, ಪರಮಪ್ರಮಾಣವೆನಿಸುವ ವೇದ, ತಿರುಪ್ಪಾಡಕ ಕ್ಷೇತ್ರ, ಆದಿಶೇಷ ಇವುಗಳೇ ತುಳಸೀಮಾಲಾಧರನಾದ ಹರಿಯ ಆತ್ಮಾಪ್ತವಾಸಸ್ಥಾನಗಳು (೩೦) ಕುರುಕ್ಕತ್ತೀಮರವನ್ನು ಮುರಿದ ಗೋಪಾಲಬಾಲನಾದ ಶ್ರೀ ಕೃಷ್ಣನು ಕ್ಷೀರ ಸಾಗರವನ್ನೂ, ವೇಂಗಡವನ್ನೂ, ಆದಿಶೇಷನನ್ನೂ, ತಂಪಾದ ಪರಮಪದವನ್ನೂ, ಶಾಸ್ತ್ರವೆನ್ನುವ ಸಾಗರವನ್ನೂ, ನನ್ನ ಹೃದಯವನ್ನೂ, ಮನಸ್ಸನ್ನೂ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡಿರುವನು (೩೨) ಸರ್ವರಿಗೂ ಸ್ವಾಮಿಯೂ, ಭೂಮ್ಯಾಕಾಶಾದಿಗಳನ್ನು ವ್ಯಾಪಿಸಿಕೊಂಡಿರುವ ಅಂತರ್ಯಾಮಿಯೂ, ಎಂಟು ದಿಕ್ಕುಗಳನ್ನೇ ಶರೀರವನ್ನಾಗಿ ಉಳ್ಳವನೂ, ವೇದದ ತಿರುಳಾದವನೂ, ವೇದಪ್ರತಿಪಾದ್ಯನೂ, ನಿತ್ಯ ವಿಭೂತಿಗಳಿಗೆ ಯಜಮಾನನೂ ಆದ ದೇವನು, ಚಂದ್ರನನ್ನು ಸೋಕುವ ಗಿರಿಯಗ್ರವನ್ನುಳ್ಳ ತಿರುಮಲೆಯ ಮೇಲಿನಿಂದ ಪ್ರವಹಿಸುವ ಝುರಿ ಜಲಪಾತಗಳ ನಡುವೆ ನಿಂತಿರುವಂತೆಯೇ ನನ್ನ ಹೃದಯಾಂತರಾಳದಲ್ಲೂ ನೆಲಸಿರುತ್ತಾನೆ (೩೯) ಒಳ್ಳೆಯ ಮನಸ್ಸೇ! ದೇವರಲ್ಲೆಲ್ಲಾ ಅವನು ಉತ್ತಮನು, ಎಂಬುದನ್ನು ನೀನು ಅರಿತಿರುವೆ ತಾನೆ! ಅವನು ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ನೆಲೆಗೊಂಡಿದ್ದಾನೆ. ಧ್ಯಾನಿಸುವವರ ಹೃದಯದಲ್ಲಿದ್ದಾನೆ. ಆಕಾಶವು ಸಂಕೋಚಗೊಳ್ಳುವಂತೆ ಚಾಚಿದ ಉನ್ನತ ಶಿಖರಗಳನ್ನು ಮೇಲೆತ್ತಿ, ಜಲಪಾತಗಳಿಂದ ರಂಜಿಸುವ ವೇಂಗಡದ ಸ್ವಾಮಿಯೇ ಆತನು. ಆತ ಭೂಲೋಕವನ್ನು ಅಳೆದು ತೋರಿಸಿದನೆಂದರೆ ಅದು ತಪ್ಪು. ಅವನು ತನ್ನನ್ನು ತಾನೇ ಅಳೆದುಕೊಂಡು ತೋರಿಸಿದ್ದು. [ಅವನನ್ನು ಹೇಗೆ ಅಳೆದು ತೋರಿಸಲು ಅಸಾಧ್ಯವೋ (ಅಪ್ರಮೇಯ) ಹಾಗೆಯೇ ಈ ಪ್ರಪಂಚವನ್ನೂ ಅಳೆದು ತೋರಿಸಲು ಸಾಧ್ಯವಿಲ್ಲ] (೪೦) ಮದವೇರಿದ ಗಂಡಾನೆಯು ಹೆಣ್ಣಾನೆಯೊಡನೆ ಕ್ರೀಡಿಸುತ್ತಾ, ಪ್ರಣಯ ಕಲಹದ ದೆಸೆಯಿಂದ ಬೇರ್ಪಟ್ಟು ಅಲೆಯುತ್ತಿರುವಾಗ, ಎದುರಿನ ಪರ್ವತದ ರತ್ನಭಿತ್ತಿಯಲ್ಲಿ ಪ್ರತಿಫಲಿತವಾದ ತನ್ನ ಪ್ರತಿಬಿಂಬವನ್ನೇ ತನ್ನ ಎದುರಾಳಿ ಎಂಬುದಾಗಿ ಬಗೆದು, ಅದರೊಡನೆ ತಿವಿದಾಡಲು ತನ್ನ ಕೊಂಬನ್ನು ಆ ಪರ್ವತ ಭಿತ್ತಿಗೆ ತಿವಿಯಲು ಆ ಪರ್ವತದಿಂದ ಮುತ್ತು

ರತ್ನಗಳು ಕೆಳಗೆ ಉದುರಿಸುತ್ತಲೂ ಚೆಲ್ಲಾಡಿ ಸೌಂದರ್ಯವನ್ನು ಏರ್ಪಡಿಸುವು ದಂತೆ. ಇಂತಹ ವೇಂಗಡ ಈ ಪರ್ವತ. ಹಿಂದೊಂದು ದಿನ ವರಾಹಾರೂಪಿಯಾಗಿ ಪರಮಾತ್ಮನು ಅಸುರನನ್ನು ತನ್ನ ಕೋರೆದಾಡೆಯಿಂದ ಕೊಂದು ಭೂಮಿ ಯನ್ನು ಎತ್ತಿ ತಂದನಲ್ಲ. ಆ ಸ್ವಾಮಿಯ ವಾಸಸ್ಥಾನವೇ ವೇಂಗಡ! (೪೫) ಸ್ವಚ್ಛವಾದ ಶಿಲಾತಲದ ಮೇಲೆ ಕುಳಿತ ಹೆಣ್ಣುಕಪಿಯು ತನ್ನ ಪ್ರೇಮಿಯನ್ನು ಆಕಾಶದಲ್ಲಿ ಪ್ರಕಾಶಿಸುತ್ತಿರುವ ಬಿಳಿಯ ಚಂದ್ರಮನನ್ನು ಕಂಡು, ಕನ್ನಡಿಯೆಂದು ಬಗೆದು, ಅದನ್ನು ತಂದುಕೊಡು ಎಂಬುದಾಗಿ ಪೀಡಿಸುತ್ತಿರುವು ದಂತೆ! ಇಂತಹ ಸೊಬಗಿನ ತಾಣ ವೇಂಗಡ. ಅಂದು ತನ್ನ ಬುದ್ಧಿಚಾತುರ್ಯ ದಿಂದ ಭೂಮಿಯನ್ನು ಬೇಡಿ ಸ್ವಾಧೀನಕ್ಕೆ ಪಡೆದುಕೊಂಡು ಪರಮಾತ್ಮನು ನೆಲಸಿದ ದಿವ್ಯಧಾಮ ಇದು (೫೮) ನನ್ನ ಮನಸ್ಸನ್ನು ಆಕ್ರಮಿಸುವುದಕ್ಕೆ ಮೊದಲು (ಎಂದರೆ ನನ್ನನ್ನು ಅನುಗ್ರಹಿಸುವುದಕ್ಕೆ ಮೊದಲು) ವೈಕುಂಠ ವಾಸನಾಗಿದ್ದ ಸ್ವಾಮಿಗೆ ವೇಂಗಡ, ಕ್ಷೀರಾಬ್ಧಿ, ದುಂಬಿಗಳ ಹಿಂಡು, ನಾದ ಸಂಪತ್ತಿನಿಂದ ಮೆರೆಯುವ ರಮಣೀಯ ಆರಾಮಗಳಿಂದ ರಂಜಿತವಾದ ಪೂಂಕೊಡಿಗ್ಗೈ ಎನ್ನುವ ದಿವ್ಯ ದೇಶವೂ, ನಿತ್ಯಯೌವ್ವನ ಶಾಲಿಯಾದ ಆತನಿಗೆ ತಿರುವಿಣ್ಣಗರ್ ಎನ್ನುವ ಕ್ಷೇತ್ರಗಳು ದೇಗುಲವಾಗಿದ್ದಂತೆಯೇ ಸರಿ. (ಕೋಯಿಲ್ ಎನ್ನುವ ಪದವನ್ನು ಇವರು ಹಲವು ಕಡೆಗಳಲ್ಲಿ ಬಳಸಿದ್ದಾರೆ) (೬೧) ತಿರುವಿಣ್ಣಗರ್, ವೆಃಕಾ, ವಿಸ್ತಾರವಾದ ಜಲಾಶಯಗಳಿಂದ ಕಂಗೊಳಿಸುವ ತಿರುವೇಂಗಡ, ಭೂಲೋಕ ವೈಕುಂಠವಾದ ಮಾಳಿಗೆಗಳಿಂದ ಶೋಭಿಸುವ ತಿರುವೆಳುಕ್ಕೈ, ಶ್ಲಾಘ್ಯವಾದ ಕುಂಭಕೋಣ, ಜೇನುಗಳಿಂದ ಆವೃತವಾದ ಶ್ರೀರಂಗ, ದಕ್ಷಿಣದ ತಿರುಕ್ಕೋಟ್ಟಿಯೂರ್ ಇವುಗಳು ತನ್ನ ಅಂಗೈಯಿಂದ ದಾನಜಲ ಸ್ವೀಕರಿಸಿದ ಸ್ವಾಮಿಯು ಸೌಲಭ್ಯದಿಂದ ನೆಲಸಿರುವ ತಂಗುದಾಣಗಳು. (೬೨) ಸುತ್ತುವರಿದ ಸಮೃದ್ಧ ಜಲದ ಕಾಲುವೆಗಳಿಂದ ನಳನಳಿಸುವ ತಿರುವೇಂಗಡದ ಸ್ವಾಮಿಯಲ್ಲಿ ಕೆಳಗೆ ಕಟ್ಟಿದ ಜಟೆ, ನೀಳವಾದ ಕಿರೀಟ, ಸುಂದರವಾದ ಶೂಲ, ಚಕ್ರ, ಸೊಂಟದಲ್ಲಿ ಸುತ್ತಿದ ನಾಗಾಭರಣ, ಸ್ವರ್ಣ ಉಡಿದಾರ ಇವುಗಳೆಲ್ಲವೂ ರಂಜನೀಯ. ಹರಿಹರ ಇವರಿಬ್ಬರ ರೂಪವೂ ಒಂದಾಗಿಯೇ ಸೇರಿದಂತಿದೆ ಈತನ ಶ್ರೀಮೂರ್ತಿ (೬೩) ಕಾಲುವೆಯ ನೀರಿನಲ್ಲಿ ಬಗ್ಗಿ ನೋಡಿದ ಗಂಡುಕಪಿಯು ತನ್ನ ಪ್ರತಿಬಿಂಬವನ್ನೇ ತನ್ನ ಪ್ರತಿದ್ವಂದ್ವಿ ಎಂಬುದಾಗಿ ಭಾವಿಸಿ 'ಹೋಗಿ ಮರದ ಮೇಲಿನ ಹಣ್ಣನ್ನು ಕಿತ್ತುತರಬೇಕೆಂದು' ಅದಕ್ಕೆ ಆಜ್ಞಾಪಿಸಿ ಅದಕ್ಕಾಗಿ ಕೈನೀಡಿ ಕಾದು ಕುಳಿತುಕೊಂಡಿರುವ ಸೊಬಗನ್ನು ವೇಂಗಡದಲ್ಲಿ ಕಾಣಬಹುದು. ಹಿಂದೆ ಕರುವಿನ ರೂಪ ಧರಿಸಿ ಬಂದ ವತ್ಸಾಸುರನನ್ನು ಕೋಪದಿಂದ ಕವಣೆ ಬೀಸಿದಂತೆ ಮೇಲೆಸೆದು ಮರದಿಂದ ಹಣ್ಣುಗಳನ್ನು ಕೆಳಕ್ಕೆ ಉದುರಿಸಿ

ಕರುವನ್ನು ಸಾಯಿಸಿದ ಸರ್ವೇಶ್ವರನು ಅಭಿಮಾನಿಸಿ ನೆಲಸಿದ ಪರ್ವತ ಇದು! (೭೮) "ನನ್ನ ಮಗಳು ಪರ್ವತ! ಪರ್ವತ! ಎಂದು ಕನವರಿಸಿ ಹಂಬಲಿಸುತ್ತಾ ಹಾಡುವ ಪರ್ವತ ಇದು. ತನ್ನ ಕಪ್ಪಾದ ಕೂದಲಿಗೆ ಕುಲಮರ್ಯಾದೆಗೆ ಲಕ್ಷಣ ವೆಂದುಕೊಂಡು ದೇವರು ಧರಿಸಿ, ಕಳೆದ ತುಳಸಿಯನ್ನೇ ಧಾರಣ ಮಾಡುವುದು. ಮಲ್ಲರನ್ನು ಕೊಂದ ದೀರ್ಘ ಬಾಹುಗಳನ್ನುಳ್ಳ ಸರ್ವೇಶ್ವರನು ಪವಡಿಸಿರುವ ಕ್ಷೀರಾಬ್ಧಿಯಲ್ಲಿಯೇ ಸ್ನಾನ ಮಾಡಬೇಕೆಂದು ಹಟ ಹಿಡಿಯುತ್ತಿದ್ದಾಳೆ. ಹಾಗೆ ಮಾಡುವುದರಿಂದ ಅವಳಿಗೆ ನೆಮ್ಮದಿ ಏರ್ಪಡುವುದಂತೆ! ಪರಮಾತ್ಮನ ಸಂಪರ್ಕ ವಿರುವ ವಸ್ತುಗಳನ್ನು ಸೋಕಿಸಿಕೊಂಡು ತನ್ನ ವಿರಹ ತಾಪವನ್ನು ಕೊರೆಗೈಯ್ಯಲು ಆಶಿಸುತ್ತಾಳೆ. ಹೀಗೆ ಉನ್ಮತ್ತೆಯಾಗಿ ವೇಂಗಡದೊಡೆಯನನ್ನೇ ಸರ್ವಕಾಲದಲ್ಲೂ ನೆನೆದು ಹಲುಬುತ್ತಾಳಲ್ಲಾ, ನಾನೇನು ಮಾಡಲಿ" (೭೯) ಗಂಡ ಸ್ಥಳದಿಂದ ಮದ ಜಲದ ಧಾರೆಯು ಸ್ರೋತವಾಗಿ ಹರಿದಿಳಿಯಲು ಅದನ್ನೇ ತೀರ್ಥವೆಂದು ತಿಳಿದು ಅದರಿಂದ ಬಾಯಿ ಮುಕ್ಕಳಿಸಿಕೊಂಡು, ಪರ್ವತದ ಝರಿಯಂತೆ ಅದು ಪ್ರವಹಿಸಿ ಬರಲು ಅದರಿಂದ ಕಾಲು ತೊಳೆದುಕೊಂಡು, ಅಧಿಕ ಮದವನ್ನುಂಟು ಮಾಡುವ ಮಕರಂದದಿಂದ ರಂಜಿಸುವ ಅರಳಿದ ಸುಮಗಳನ್ನು ಆನೆಯು ತನ್ನ ಸೊಂಡಲಿನಲ್ಲಿ ಕಿತ್ತು ಮಹಾಬಲಶಾಲಿ ಎಂದೆನಿಸಿದ ವೇಂಗಡದೊಡೆಯನಿಗೆ ಅರ್ಪಿಸಿ ನಮಿಸಿ ಕೃತಾರ್ಥಗೊಳ್ಳುತ್ತದೆ. ಎಂತಹ ಧನ್ಯಜೀವಿ ಅದು! (೮೦) ಆನೆಯು ಸೊಂಡಿಲನ್ನೆತ್ತಿ ಸಾಗುತ್ತಿರುವಾಗ ಆಗಸದಲ್ಲಿ ಅತಿ ಕೆಳಗೆ ಸಾಗುವ ಕಾರ್ಮೇಘವನ್ನು ನಿರುಕಿಸಿ ಅದು ತನ್ನ ಶತ್ರುವಾದ ಆನೆಯೆಂದು ಬಗೆದು ಅದನ್ನೇ ತನ್ನ ಗಂಡಸ್ಥಳದಿಂದ ಗುದ್ದಲು, ಮೋಡವು ಚದುರಿದಾಗ ಎದುರಾಳಿಯು ಕೆಳಗೆ ಬಿದ್ದನೆಂಬುದಾಗಿ ಅಟ್ಟಹಾಸದಿಂದ ಜೋರಾಗಿ ಘೀಳಿಡಲು ಆನೆಯ ದಂತವು ಪ್ರಕಾಶದಿಂದ ಹೊಳೆಯುತ್ತಿದೆ. ಅದನ್ನು ಕಂಡು ಮೇಲೆ ಹೋಗುವ ಶರಭವು (ವ್ಯಾಳಿಯು) ಮೇಲಿಂದ ಎರಗಿಬಂದು ಆ ದಂತವನ್ನು ತಿರುಚಿ ಆನೆಯನ್ನು ಸಾಯಿಸಿ ಅಟ್ಟಹಾಸ ಮಾಡುವುದಂತೆ! ಇಂತಹ ಸೊಬಗಿನ ವೇಂಗಡದಲ್ಲಿ ಹಿಂದೆ ವತ್ಸಾಸುರನನ್ನು ಬೇಲದ ಮರಕ್ಕೆ ಎಸೆದು ಸಾಯಿಸಿದ ಕೃಷ್ಣ ಪರಮಾತ್ಮನ ಬೇರೊಂದು ರೂಪವಾದ ಸ್ವಾಮಿಯು ನೆಲೆಸಿರುವನು. (೮೧) 'ವೇಂಗಡವೇ ಗತಿ' ಎಂದು ಭಕ್ತಿಭಾವದಿಂದ ಅಲ್ಲಿಗೆ ಸಾಗುವ ಕುರವ ಸ್ತ್ರೀಯರ ಅಂದವಾದ ಬಳೆಗಳ ಅಲಂಕೃತ ಕರಗಳಲ್ಲಿ ಹಿಡಿಯಲ್ಪಟ್ಟ ಬಿದಿರುಕೋಲುಗಳು ಆಗಸಕ್ಕೆ ಸೋಕುವು ದಂತೆ! ಅಲ್ಲಿ ಚಂದ್ರನನ್ನು ಹಿಡಿಯಲು ಬಂದ ರಾಹುವನ್ನು ಆ ಕೋಲುಗಳು ಚುಚ್ಚಲು ಆತ ಹೆದರಿ ಓಡಿಹೋಗುವನಂತೆ! ಚಂದ್ರನು ಅತಿಶಯ ವಿಜಯ ಕಾಂತಿಯಿಂದ ನಲಿಯುವನಂತೆ! ಇಂತಹ ಸೊಗಸಾದ ವೇಂಗಡವೇ, ಸರ್ವೋತ್ತಮರೂ ಚಿರಯೌವ್ವನ ಭಾಗ್ಯಶಾಲಿಗಳಾದ ನಿತ್ಯಸೂರಿಗಳನ್ನು ಆಳುವ

ಪರಮಾತ್ಮನ ನೆಲೆ (೭೨) ಏಳು ಕುದುರೆಗಳನ್ನು ರಥಕ್ಕೆ ಹೂಡಿ ಓಡಿಸುತ್ತಾ ಬರುವ ಸೂರ್ಯನು ಎದುರಿಗೆ ವೇಂಗಡದ ಶಿಖರವೂ, ಅದರ ಮೇಲೆ ನಿಂತಿರುವ ಸ್ವಾಮಿಯೂ ಕಂಡುಬರಲು ಸ್ವಾಮಿಯ ಬಲವಂದು ಪಕ್ಕದಿಂದ ರಥವನ್ನು ಓಡಿಸಿಕೊಂಡು ಮುಂದುವರಿಯುವನಂತೆ! ಇಂತಹ ಸ್ವಾಮಿಯೇ ಒಮ್ಮೆ ಗೋಕುಲದಲ್ಲಿ ಕುಂಭ ನರ್ತನ ಮಾಡಿ ಜನರ ಮನಸ್ಸನ್ನು ಅಪಹರಿಸಿದುದು. ಈ ಸರ್ವೇಶ್ವರನ ನಾಮಸ್ಮರಣೆಯನ್ನು, ಆಭರಣಯುಕ್ತವಾದ ಶ್ರೀಪಾದಗಳನ್ನೂ, ಕೀರ್ತಿಸುತ್ತ ನಾಲಿಗೆಯು ತನ್ನ ಸಂಪತ್ತನ್ನು ಕಂಡುಕೊಂಡಲ್ಲಿ ಅದಕ್ಕಿಂತ ಹೆಚ್ಚಿಗೆ ಏನು ಬೇಕಾಗಿದೆ? (೭೩) ತಿರುಮಲೆಯ ವಿಶಾಲವಾದ ಕೋಡಿನ ಮೇಲ್ಭಾಗಕ್ಕೆ ಆಕಾಶದಿಂದ ಚಂದ್ರನು ಸರಿದು ಬಂದು ಸೋಕಿದಾಗ ಸಾಣೆಯ ಚಕ್ರಕ್ಕೆ ಕಬ್ಬಿಣವು ಸೋಕಿದಾಗ ಅದು ಸವೆಯುತ್ತಾ ಬರುವಂತೆ ಚಂದ್ರಮನು ಸವೆಯುವನಂತೆ. ಆ ದೊಡ್ಡದಾದ ಬಿಳಿದಾದ ಚಂದ್ರನ ಮೈಯ್ಯಲ್ಲಿ ಕುಳಿತ ಮನೋಜ್ಞವಾದ ಜಿಂಕೆಯನ್ನು ಕಂಡು ಕೋಡಿನ ಮೇಲೆ ಹಸಿದು ಕುಳಿತ ಹುಲಿಯು ತನ್ನ ಆಹಾರವೊಂದು ಸಮೀಪವರ್ತಿಯಾಗುತ್ತಿರುವುದನ್ನು ಕಂಡು ಕೋಪದಿಂದ ಘರ್ಜಿಸಿ ಎದ್ದು ಎಗರಲು ಸಿದ್ಧವಾಗುವುದಂತೆ! ಇಂತಹ ಸುಂದರವಾದ ವೇಂಗಡವು ಶ್ರೀಕೃಷ್ಣನ ವಾಸಸ್ಥಳ. ಇಲ್ಲಿ ವೇಂಗೈ ಪುಷ್ಪಗಳ ಸುಗಂಧ ಎಲ್ಲೆಡೆಯನ್ನು ಆವರಿಸಿಕೊಂಡಿದೆ. (೭೫) ವೃದ್ಧರಾದ ಕುರವರು ಓಡಾಡಲು ಶಕ್ತಿಯಿಲ್ಲದೆ ಕಾಡುಹಂದಿಗಳು ಸುಳಿಯುವುದನ್ನೇ ಕಾದು ಕುಳಿತಿರುವರಂತೆ. ಕಾಡುಹಂದಿಗಳು ತಮ್ಮ ಆಹಾರಕ್ಕಾಗಿ ನೆಲವನ್ನು ಕೋರೆಯದಾಡೆಗಳಿಂದ ಅಗೆದಾಗ ನೆಲವು ಉತ್ತಂತಾಗುತ್ತದೆಯಲ್ಲವೆ? ನೆಲದಲ್ಲಿರುವ ಬಿದಿರುಚೂರುಗಳು ಬೇರಿನೊಡನೆ ಮೇಲೆ ಕಿತ್ತು ಎರಚಲ್ಪಡುತ್ತದೆ. ಈ ಕುರುಬರೂ ಸಹ ಆ ಉತ್ತಪ್ರದೇಶದಲ್ಲಿ ಧಾನ್ಯಗಳನ್ನು ಎರಚುತ್ತಾರೆ. ಹೀಗೆ ಅವರು ಧಾನ್ಯದ ಗಿಡಗಳನ್ನು ಬೆಳೆಯುವಾಗ ಸಂಗಡ ಆ ಬಿದಿರುಗಳೂ ಗಿಡವಾಗಿ ಮರವಾಗಿ ಗಗನಕ್ಕೆ ಎದ್ದು ನಿಲ್ಲುತ್ತವೆ. ಕುರವರು ಬಿತ್ತಿದ್ದ ಪೈರುಗಳೂ ಫಲಭಾರದಿಂದ ಕಂಗೊಳಿಸುತ್ತವೆ. ಇಂತಹ ಮಧುರವಾದ ವೇಂಗಡದಲ್ಲಿ ಒಂದು ಕಾಲಕ್ಕೆ ತನ್ನ ವೇಣುನಾದದ ಇಂಪನ್ನು ಲೋಕಕ್ಕೆ ಉಣಬಡಿಸಿ ಮರುಳು ಮಾಡಿದ ಶ್ರೀಕೃಷ್ಣನು ಈಗ ವೇಂಗಡದೊಡೆಯನ ರೂಪದಿಂದ ನೆಲೆಸಿದ್ದಾನೆ. ಇಂತಹ ಪರ್ವತ ಶ್ರೇಷ್ಠವೇ ಇದು. (೮೯)

ಈ ಮೂವರು ಆಳ್ವಾರ್‌ಗಳು ವರ್ಣಿಸಿರುವ ಶೈಲಿ ವಿಲಕ್ಷಣವಾದದ್ದು, ಹಲವಾರು ವಸ್ತು ವಿನ್ಯಾಸಗಳಿಂದ ಕೂಡಿದ್ದು. ಇವುಗಳಲ್ಲಿ ಕೇವಲ ವಿಷ್ಣು ಭಕ್ತಿ, ಶರಣಾಗತಿ ಪ್ರಪತ್ತಿ, ದೇವನ ಲೀಲಾ ವೈಭವ ಮುಂತಾದ ವಿಷಯಗಳನ್ನು ನಾವು ಕಾಣುವುದಕ್ಕಿಂತ ಮಿಗಿಲಾದ ಪ್ರಕೃತಿ ವರ್ಣನೆ, ವೇಂಗಡದ ಮೇಲಿನ ಅದ್ಭುತ ದೃಶ್ಯ, ಜನಜೀವನ, ಪ್ರಾಣಿ ವೈಭವ, ವನ್ಯಜೀವಿಗಳೊಡನೆ ಮಾನವನ

ಸಹಬಾಳ್ವೆ, ಅವುಗಳಿಂದ ರಕ್ಷಣೆಯ ಉಪಾಯುಗಳು, ಜನರ ನಾಗರೀಕತೆ ಹುಂತಾದ ಮಜಲುಗಳನ್ನು ಕಾಣಬಹುದಾಗಿದೆ. ಈ ಮೂರು ಆಳ್ವಾರುಗಳಲ್ಲಿ ವೇಂಗಡದ ನಿಸರ್ಗ ಸೌಂದರ್ಯವನ್ನು ನಮ್ಮ ಮುಂದೆ ತೆರೆದಿಡಲು ಮೂರನೆಯ ಆಳ್ವಾರೇ ಅತಿ ಸಮರ್ಥರು ಎಂದು ನಾವು ತೀರ್ಮಾನಿಸಬಹುದು. ಇವರ ಪಾಶುರಗಳು ಅಲಂಕಾರಿಕವಾಗಿದೆ. ಆದರೆ ಅಷ್ಟೊಂದು ಅಲಂಕಾರಗಳನ್ನು, ಬಳಸದವರು ಮಧ್ಯದ ಪೂದತ್ತಾಳ್ವಾರ್ ಅವರು. ಮೊದಲನೆಯ ಆಳ್ವಾರ್ ಅವರ ವರ್ಣನೆ ಮೂರನೆಯವರಷ್ಟು ಅಬ್ಬರವಿಲ್ಲದಿದ್ದರೂ ಅವರೂ ರಸಿಕರೇ ಎಂದು ಹೇಳಲು ಸಾಕಷ್ಟು ಪರಿಕರಗಳು ಇವೆ. ಎರಡನೆಯ ಆಳ್ವಾರ್ ಹಿಂದೆ ಬಿದ್ದಿಲ್ಲ. ಕಡೆಯ ಎರಡು ಪಾಶುರಗಳೇ ಸಾಕು ಅವರ ರಸಿಕತೆಯನ್ನು ಪ್ರಕಾಶ ಪಡಿಸಲು. ಅಂತೂ ಮೂರು ಆಳ್ವಾರರಿಗೂ ಆನೆಗಳು, ಬಿದರು ಕಾಡುಗಳು ವರ್ಣನೆಗೆ ನಿಲುಕುವ ವಸ್ತುಗಳಾಗಿವೆ.

ಮತ್ತೆ ಭಕ್ತಿವರ್ಣನೆಯು, ಪರಮಾತ್ಮನ ವಿಚಾರಗಳನ್ನು ಅಭಿವ್ಯಕ್ತ ಪಡಿಸಲು ಉಪಯೋಗಿಸಿರುವ ವಿನ್ಯಾಸ, ಶೈಲಿ, ವಿಚಾರ ಮೂವರಲ್ಲೂ ಒಂದೇ ರೀತಿಯದು. ಮೂವರೂ ಮಾತನಾಡಿಕೊಂಡೇ ಬರೆದಿರುವಂತಿದೆ. ಇಲ್ಲ ಒಬ್ಬರ ವಿಚಾರ ಸರಣಿಯನ್ನೇ ಮತ್ತೊಬ್ಬರು ದ್ವಿಪ್ರತಿ ಮಾಡಿದಂತಿದೆ. ವಿಶೇಷವೇನೂ ಕಂಡುಬರುವುದಿಲ್ಲ.

ಪೇಯ್ಯ್ ಆಳ್ವಾರ್ ಪ್ರಕೃತಿ ಚಿತ್ರ ಇಂತಿದೆ. ಆನೆಗಳನ್ನು ಹಿಡಿಯಲು ಕುರವರು ಮಾಣಿಕ್ಯಗಳನ್ನು ಎಸೆಯುವರಂತೆ. ಅವು ಸೂರ್ಯ ಪ್ರಕಾಶಕ್ಕೆ ಫಳಕ್ಕನೆ ಮಿಂಚಿದಾಗ ಮಳೆಗಾಲದ ಮಿಂಚೋ ಎಂಬ ಭ್ರಾಂತಿಯಿಂದ ಹಾವುಗಳು ಹೆದರಿ ಹುತ್ತವನ್ನು ಸೇರಿಕೊಳ್ಳುವುದಂತೆ! ಹೊಲವನ್ನು ಕಾಯಲು ಪಂಜು ಹಿಡಿದು ಕುಳಿತ ಕುರವರು ಬಿಲ್ಲುಬಾಣಗಳಿಂದ ಸಜ್ಜಾಗಿಯೂ ಕಾದಿರುತ್ತಾರೆ. ಆನೆಗಳು ಬಂದೇ ಬರುತ್ತವೆ. ಕುರವರ ಪಂಜು ಕಂಡು ಭಯದಿಂದ ಓಡುತ್ತವೆ. ಎದುರಿನ ಆಗಸದಲ್ಲಿ ಉಲ್ಕೆಯೊಂದು ಬೀಳುತ್ತದೆ. ಆನೆಗಳು ಕುರವರು ತಮ್ಮತ್ತ ಎಸೆದ ದೊಂದಿ ಮೇಲೆ ರಗುತ್ತಿದೆಯೆಂದು ಚೆಲ್ಲಾಪಿಲ್ಲಿಯಾಗಿ ಮತ್ತೊಂದು ದಿಕ್ಕಿಗೆ ಓಡುತ್ತದೆ. ಇವು ಒಂದು ತೆರನಾದ ವರ್ಣನೆಯಾದರೆ ಮತ್ತೊಂದು ಸುಂದರ ವರ್ಣನೆ ಈ ರೀತಿ ಇದೆ. ಕತ್ತಿಯ ಮೊನೆಯ ತೀಕ್ಷ್ಣ ದೃಷ್ಟಿಯ (ಚಂಚಲ ನೇತ್ರದ) ಸ್ತ್ರೀಯರು ದ್ವಾದಶಿಯ ಜಾತ್ರೆಗೆಂದು ಫಲ ಪುಷ್ಪಾದಿಗಳೊಡನೆ ಸಜ್ಜಾಗಿ ಬಂದು ದೇವರಿಗೆ ಹಾಕಿದ ಧೂಪದ ಹೊಗೆ ಗಗನವನ್ನೆಲ್ಲಾ ಆಕ್ರಮಿಸಿ ನಕ್ಷತ್ರಗಳನ್ನೂ ಮುಚ್ಚಿಬಿಡುವುದಂತೆ! 'ಪೂದತ್ತಾಳ್ವಾರ್' ವರ್ಣನೆಗಳಲ್ಲಿ ಬಿದಿರು ಕಾಡಿನ ವರ್ಣನೆಯಿದೆ. ತೋಟ, ಜಲಪಾತ, ಕಾಲುವೆ, ಝರಿಗಳ ಸಂಭ್ರಮವಿದೆ. ತಪಸ್ವಿಗಳು ಯೋಗ ಭಂಗಿಯಲ್ಲಿ ಅಲುಗಾಡದೆ ನಿಂತಾಗ ಅವರು ಒಂದು ಬೆಟ್ಟವೆಂದು ತಿಳಿದ ಹೂ ಬಳ್ಳಿಗಳು

ಅವರನ್ನು ಸುತ್ತಿ ಬಳಸಿ ತಲೆಗಳನ್ನೂ ಮುಚ್ಚಿ ಹೂ ಬಿಡಲು ಆರಂಭಿಸುತ್ತವೆ. ಆದರೂ ಆ ಯೋಗಿಗಳಿಗೆ ಅದರ ಪರಿವೆಯೇ ಇರುವುದಿಲ್ಲವಂತೆ! ಬ್ರಾಹ್ಮಿ ಮುಹೂರ್ತದಲ್ಲಿ ಎದ್ದ ಕಪಿಗಳು ತೀರ್ಥದಲ್ಲಿ ಮಿಂದು ಆಗ ಅರಳುವ ಹೂವನ್ನು ತಿರಿದು ತಂದು ಸ್ವಾಮಿಗೆ ಅರ್ಚಿಸುವುವಂತೆ! ಹೆಣ್ಣಾನೆಯ ಒಲವನ್ನು ಗಳಿಸಲು ಗಂಡಾನೆ ಹಸಿರು ಬಿದಿರನ್ನು ಸಣ್ಣಗೆ ಕಡಿದು ಜೇನಿನಲ್ಲಿ ಅದ್ದಿ ಅದಕ್ಕೆ ನೀಡುತ್ತಾ ಆನಂದಪಡುವುದಂತೆ !

ಪೇಯಾಳ್ವಾರ್ ಅವರ ಪ್ರಕಾರ ಚಂದ್ರನು ಪರ್ವತ ಶಿಖರದ ಹತ್ತಿರವೇ ಬರುತ್ತಾನೆ. ಅವರಿಗೂ ಜಲಪಾತ ಗಿರಿಯ ಝರಿ ಇವುಗಳಿಂದ ಸಂತೋಷ ವೇರ್ಪಟ್ಟಿದೆ. ಇವರೂ ಆನೆಯ ಆಟಗಳಿಗೆ ಮಾರುಹೋಗಿದ್ದಾರೆ. ಮದ ವೇರಿದ ಆನೆ ಹೆಣ್ಣಾನೆಯೊಂದಿಗೆ ಕ್ರೀಡಿಸಿದ ನಂತರ ಏಕೋ ಏನೋ ಕಲಹ ಮಾಡಿ ಅದರಿಂದ ಬೇರ್ಪಟ್ಟು ಅಲೆಯುತ್ತಿರುತ್ತದೆ. ಆ ಕೋಪದಲ್ಲಿ ಎದುರಿನ ಪರ್ವತದ ರತ್ನಮಯ ಭಿತ್ತಿಯಲ್ಲಿ ಅದರ ಪ್ರತಿಬಿಂಬ ಕಾಣಲು ಅದೊಂದು ಬೇರೆಯ ಆನೆ – ತನ್ನ ಪ್ರತಿಸ್ಪರ್ಧಿ ಎಂಬುದಾಗಿ ಭಾವಿಸಿ ಅದರೊಡನೆಯೇ, ಸೆಣಸಲಾರಂಭಿಸುತ್ತದೆ. ಕೋಪದಿಂದ ತನ್ನ ಕೊಂಬನ್ನು ಎದುರಿನ ಆನೆಯನ್ನು ಇರಿಯುವೆನೆಂಬ ಭಾವದಿಂದ ಕೋಡಿಗೆ ಚುಚ್ಚುತ್ತದೆ. ಆ ಘರ್ಷಣೆಯಿಂದ ಎದುರಿನ ರತ್ನಭಿತ್ತಿಯಿಂದ ಮುತ್ತು ಮಣಿಗಳು ಕೆಳಗೆ ಚೆಲ್ಲಾಡುವುದಂತೆ! ಹೆಣ್ಣುಕಪಿಯೊಂದು ತನ್ನ ಪ್ರಿಯನನ್ನು ಪ್ರಣಯಾಲಾಪಗಳ ನಡುವೆ ಆಕಾಶದಲ್ಲಿನ ಚಂದ್ರನು ಕನ್ನಡಿಯಂತೆ ತೋರಲು ಅದನ್ನು ತಂದುಕೊಡಬೇಕೆಂದು ಬಲಾತ್ಕರಿಸುತ್ತದೆ, ರಾಮನನ್ನು ಸೀತೆಯು ಜಿಂಕೆಗಾಗಿ ಯಾಚಿಸಿದಂತೆ! ಮದಜಲವು ಗಂಡಸ್ಥಳದಿಂದ ಧಾರಾಕಾರವಾಗಿ ಸುರಿಯಲು ಅದನ್ನೇ ಝರಿಯ ನೀರೆಂದು ಭಾವಿಸಿ ಆನೆ ಬಾಯಿ ಮುಕ್ಕಳಿಸಿ ಕಾಲು ತೊಳೆದು ಶುಚಿರ್ಭೂತವಾಗಿ ಕೊಳದಿಂದ ಅರಳುವ ಹೂವನ್ನು ಕಿತ್ತು ನಿಷ್ಠಭಕ್ತನಂತೆ ದೇವರಿಗೆ ಅರ್ಪಿಸುವ ದೃಶ್ಯ ನಿಜಕ್ಕೂ ಮನೋಜ್ಞ! ಮತ್ತೊಂದು ಆನೆಯು ಕಾರ್ಮೇಘವನ್ನು ತನ್ನ ಪ್ರತಿಸ್ಪರ್ಧಿಯೆಂದು ಬಗೆದು ಅದನ್ನು ಗುದ್ದಲು ಮೋಡವು ಕರಗಿದಾಗ ತನ್ನ ಎದುರಾಳಿ ಸೋತನೆಂಬ ವಿಜಯೋನ್ಮಾದದಿಂದ ಘೀಳಿಡಲು ಅದರ ದಂತ ಫಳಕ್ಕನೆ ಹೊಳೆಯಲು ಆ ಸಮಯವನ್ನೇ ಹೊಂಚುಹಾಕುತ್ತಿದ್ದ ಶರಭವು ಮೇಲಿನಿಂದ ಎರಗಿ ಆನೆಯನ್ನು ಎಗರಿಸಿಕೊಂಡು ಸಾಯಿಸುವುದಂತೆ! ಸುಂದರ ಕುರವ ಸ್ತ್ರೀಯರು ದೇವರನ್ನು ಸೇವಿಸಲು ವೇಂಗಡವನ್ನು ಸೇರಿದಾಗ ಅವರು ಪ್ರಾಣಿಗಳ ಉಪಟಳದಿಂದ ಪಾರಾಗಲು ತಂದಿರುವ ಬಿದುರುಕೋಲುಗಳು ಗಗನಕ್ಕೆ ಸೋಕಿ ಚಂದ್ರನನ್ನು ಹಿಡಿಯಲು ಬಂದ ರಾಹುವನ್ನು ಚುಚ್ಚುವುದಂತೆ. ಇದರಿಂದ ಕಂಗೆಟ್ಟು ರಾಹುವು ಓಡಿದಾಗ ಚಂದ್ರನು ಸಂತೋಷದಿಂದ ಮತ್ತೂ ಕಾಂತಿಯಿಂದ ಬೆಳಗುವನಂತೆ!

ಇದು ಚಂದ್ರನ ವರ್ಣನೆಯಾದರೆ ಸೂರ್ಯನ ವರ್ಣನೆ ಬೇಡವೆ ? ನಮ್ಮ ಸಮಸ್ಯೆಯನ್ನು ಎದುರು ನೋಡಿಯೇ ಆಳ್ವಾರ್ ಅದನ್ನೂ ಸಿದ್ಧಪಡಿಸಿಕೊಂಡಿರುತ್ತಾರೆ. ಸೂರ್ಯನು ತನ್ನ ತೇರಿನಲ್ಲಿ ಪ್ರತಿಷ್ಠೆಯೊಡನೆ ಬರುವಾಗ ಎದುರಿಗೆ ತಿರುಮಲೆಯ ಶಿಖರ, ಮೇಲಿನ ದೇಗುಲವನ್ನು ಕಾಣುತ್ತಾನೆ. ಅವನಿಗೆ ದೇವನಲ್ಲಿ ಭಕ್ತಿ ಉತ್ಪನ್ನವಾಗಿ ತನ್ನ ಗರ್ವವನ್ನು ಒತ್ತಟ್ಟಿಗೆ ಅಟ್ಟಿ ಭಕ್ತನ ಸೌಲಭ್ಯ ಗುಣದಿಂದ ತನ್ನ ತೇರನ್ನು ದೇವರಿಗೆ ಬಲಗೊಂಡು ಹೋಗುವಂತೆ ಏರ್ಪಾಡು ಮಾಡುತ್ತಾನೆ ! ಇದೊಂದು ಮನೋಜ್ಞ ಭಾವನೆಯೇ ಸರಿ ! ಸಾಣೆಯ ಕಲ್ಲಿಗೆ ಕಬ್ಬಿಣದ ಸಲಕರಣೆ ಸೋಕಿದಾಗ ತೇಯುವಂತೆ ವೇಂಗಡದ ಶಿಖರದ ಕೋಡಿಗೆ ಪೂರ್ಣಚಂದ್ರನು ಸೋಕಿ ಸ್ವಲ್ಪ ಸ್ವಲ್ಪವಾಗಿ ಕರಗುತ್ತಾನೆ. ಕೆಳಗೆ ಇಳಿಯುವ ಚಂದ್ರ ಹಿರಿಯದಾಗಿ ಕಾಣುವುದು ಸಹಜ ಪ್ರಾಕೃತಿಕ ವ್ಯಾಪಾರ ತಾನೆ. ಅದರ ಒಡಲಿನಲ್ಲಿನ ಜಿಂಕೆಯ ಗುರುತೂ ಕೂಡ ದೊಡ್ಡದಾಗಿ ಕಾಣುತ್ತದೆ. ಪರ್ವತಾಗ್ರದಲ್ಲಿ ಹಸಿದು ಕಂಗೆಟ್ಟ ಹುಲಿಯು ಜಿಂಕೆಯನ್ನು ಕಂಡು ತನಗೆ ಆಹಾರ ದೊರಕಿದ ಸಂತೋಷಕ್ಕೆ ಘರ್ಜಿಸುತ್ತಾ ಮೈಮುರಿದು ಮೇಲೇಳುತ್ತದೆ. ಬೆಟ್ಟದ ಮೇಲೆ ದಟ್ಟವಾಗಿ ಹಬ್ಬಿರುವ ವೇಂಗೈ ಪುಷ್ಪದ ನರುಗಂಪು ಆ ಪ್ರಾಂತ್ಯವನ್ನೆಲ್ಲಾ ಆವರಿಸಿರುತ್ತದೆ. ಬೇರು ತಿನ್ನಲು ಬಂದ ಕಾಡುಹಂದಿಗಳು ನೆಲವನ್ನೆಲ್ಲಾ ಕೆದಕಲು ನೆಲವು ಉತ್ತು ಬಿತ್ತಿದಂತೆ ಆಗುವುದಲ್ಲದೆ ಅದರೊಳಗೆ ಅಡಗಿದ್ದ ಬಿದುರು ಕಡ್ಡಿಗಳು ಬೇರಿನೊಂದಿಗೆ ಮೇಲೆ ಬೀಳುತ್ತದೆ. ಈ ಉತ್ತ ನೆಲಕ್ಕೇ ವೃದ್ಧ ಕುರವರು ಕಾಳುಗಳನ್ನು ಚೆಲ್ಲಿ ಬೆಳೆಯನ್ನು ತೆಗೆಯುತ್ತಾರೆ. ಈ ಧಾನ್ಯದ ಬೆಳೆ, ನೆಲ ಕಚ್ಚಿ ಬೆಳೆದ ಬಿದುರು ಮೆಳೆಗಳ ಮಧ್ಯೆ ಕಂಗೊಳಿಸುತ್ತದೆ.

ಇಂತಹ ಸುಂದರ ಚಿತ್ರಗಳನ್ನು ಇದರ ಮಧ್ಯೆ ಭಕ್ತಿ ಪುಷ್ಪಗಳಿಂದ ಸಂಭ್ರಮಿಸುವ ವೇಂಗಡದೊಡೆಯನನ್ನು ಕಂಡೇ ರಾಮಾನುಜರು ಈ ಆಳ್ವಾರ್ ಪಾಶುರಗಳಿಂದ ಪರವಶರಾಗಿ 'ಶೆಂದಮಿಳ್ ಪಾಡುವಾರ್ ವಣಂಗುಂ ದೈವಂ' ಎಂದು ಉದ್ಗಾರ ಹೊರಡಿಸಿದ್ದರಲ್ಲಿ ಆಶ್ಚರ್ಯವೇನು ? ಇಂತಹ ಸುಂದರ ಪಾಶುರಗಳನ್ನು ದೇವಸ್ಥಾನದ ಅಧ್ಯಾಯನೋತ್ಸವದಲ್ಲಿ ಪ್ರಥಮವಾಗಿ ಅನುಸಂಧಾನ ಮಾಡಲು ಏರ್ಪಾಡು ಮಾಡಿದ್ದರಲ್ಲಿ ವಿಶೇಷವೇಕಿಲ್ಲ ?

ಈ ಮೂವರ ಕಾಲಕ್ಕೆ ತಿರುವೇಂಗಡವು ಸುಸಂಸ್ಕೃತ ಸ್ಥಿತಿಯಲ್ಲಿ ಮುಂದುವರಿದಿತ್ತು. ಮೊದಲನೇ ಆಳ್ವಾರ್ ಮೂರನೆಯ ಆಳ್ವಾರ್ ವನ್ಯಮೃಗಗಳನ್ನು ವಿವರಿಸಿದ್ದಾರೆ. ಎರಡನೆಯ ಆಳ್ವಾರ್ ಬರಿಯ ಬಿದಿರುಮೆಳೆ, ಕಪಿಗಳನ್ನು ಮಾತ್ರ ವಿವರಿಸಿದ್ದಾರೆ. ಆನೆಯ ಒಂದು ಪಾಶುರವಿದೆ. ಮೊದಲನೆಯ ಆಳ್ವಾರ್ ಕಾಲಕ್ಕೆ ಆನೆಯನ್ನು ಹಿಡಿಯುವ ಕುರವರು ಆನೆಯಿಂದ ತಮ್ಮನ್ನೂ ತಮ್ಮ ಪೈರುಪಚ್ಚೆಗಳನ್ನೂ ರಕ್ಷಿಸುವ ಸಾಹಸದ ವಿವರಣೆಯಿದೆ. ಎರಡನೆಯ ಆಳ್ವಾರ್

ಕಾಲಕ್ಕೆ ವೇಂಗಡದ ಮೇಲೆ ತೋಟಗಳೂ, ಕಾಲುವೆಗಳೂ ಇರುವ ವಿವರಣೆ ಇದೆ. ಇದನ್ನು ಕಂಡಾಗ ಮೂರನೆಯವರು ಮತ್ತು ಮೊದಲನೆಯವರು ಮೊದಲೂ ತಿರುವೇಂಗಡವನ್ನು ದರ್ಶಿಸಿದ್ದರು. ಅವರ ಕಾಲದಲ್ಲಿ ಇನ್ನೂ ಜನ ಪ್ರಾಣಿಗಳಿಂದ ರಕ್ಷಣೆ ಹೊಂದಲು ಕಷ್ಟಪಡುತ್ತಿದ್ದರು. ಇನ್ನೂ ಕಾಡಾಗಿಯೇ ಇದ್ದ ಕಾಲ. ಆದರೆ ಎರಡನೆಯ ಆಳ್ವಾರ್ ಕಡೆಯದಾಗಿ ವೇಂಗಡಕ್ಕೆ ಬಂದವರು. ಈ ವಿಚಾರಗಳಲ್ಲಿ ಸಾಕಷ್ಟು ಸುಧಾರಿತ ಪರಿಸ್ಥಿತಿಯನ್ನು ಕಂಡಿದ್ದರು. ಅವರ ಕಾಲಕ್ಕೆ ವೇಂಗಡದಲ್ಲಿ ಕಾಡು ತರಿಯಲ್ಪಟ್ಟು ಜನ ನೆಮ್ಮದಿಯ ಬಾಳನ್ನು ಕಾಣಲು ತೊಡಗಿದ್ದರು ಎಂಬುವುದು ಈ ತಿರುವಂದಾದಿಗಳಿಂದ ಕಂಡುಬರುವ ಅಂಶ. ಈ ಎರಡನೆಯ ಆಳ್ವಾರ್ ತಮ್ಮ ಪ್ರಬಂಧದಲ್ಲಿ 'ಮಾಮಲ್ಲೈ' ಎಂದು ಮಹಾಬಲಿಪುರವನ್ನು ಕರೆದಿರುವುದೂ ಒಂದು ಗಮನಾರ್ಹ ವಿಚಾರವೇ ಸರಿ. ಏತಕ್ಕೆಂದರೆ ಮಾಮಲ್ಲನೆಂಬ ಬಿರುದನ್ನು ಬಳಸಿ ಪಲ್ಲವ ನರಸಿಂಹವರ್ಮನು ತನ್ನ ವಿಜಯೋತ್ಸವದ ಸೂಚಕವಾಗಿ ಮಹಾಬಲಿಪುರವನ್ನು ಮಾಮಲ್ಲಪುರವೆಂದು ಕರೆದ. ಅದಕ್ಕೆ ಮೊದಲು ಮಹಾಬಲಿಪುರಕ್ಕೆ ಈ ಹೆಸರು ಇರಲಿಲ್ಲ. ನರಸಿಂಹವರ್ಮನ ಕಾಲ ಕ್ರಿ. ಶ. ೬೩೦ ರಿಂದ ೬೬೮. ಆದ್ದರಿಂದ ಪೂದತ್ತಾಳ್ವಾರ್ ಕಾಲ ನರಸಿಂಹವರ್ಮನ ಕಾಲವೋ, ಇಲ್ಲ ಅವನ ನಂತರದ್ದೋ ಇರಬೇಕೆಂಬುದಾಗಿ ಊಹಿಸಲು ಸಾಧ್ಯವಾಗುತ್ತದೆ. ಮೊದಲು ಮತ್ತು ಮೂರನೆಯವರ ಕಾಲ ಇದಕ್ಕೆ ಮೊದಲೋ ಅಥವಾ ಇದೇ ಸಮಯವೋ ಎಂದು ಕಲ್ಪಿಸಬಹುದು. ಆದರೆ ಎರಡನೆಯ ಆಳ್ವಾರ್ ತಿರುಮಲೆಯನ್ನು ದರ್ಶಿಸಿದಾಗ ಮೊದಲನೆಯ ಮತ್ತು ಮೂರನೆಯ ಆಳ್ವಾರ್ ತಿರುಮಲೆಯನ್ನು ದರ್ಶಿಸಿ ಬಹಳ ಕಾಲವೇ ಆಗಿತ್ತು ಎಂಬುವುದು ಮೇಲಿನ ಪಾಶುರಗಳಿಂದ ಕಂಡುಬರಬಹುದಾದ ವಿಚಾರ.

ಆಳ್ವಾರುಗಳು ಕಟ್ಟಾ ವಿಷ್ಣು ಭಕ್ತರೇ ಆದರೂ ಅವರು ಕೆಲವು ಪಾಶುರಗಳಲ್ಲಿ ಹರಿಹರ ಅಬೇಧವನ್ನು ವ್ಯಕ್ತಪಡಿಸುತ್ತಾರೆ. ಇದೊಂದು ವಿಚಿತ್ರ ಸನ್ನಿವೇಶವೇ ಸರಿ. "ಅರನ್ ನಾರಣನ್ ನಾಮಮ್" "ಎತ್ತಾನ್ ಪುಳ್ಳೂರ್ನ್ದಾನ್" "ಪೊನ್ ತಿಗಳುಂಮೇನಿ ಪುರಿಶಡೈ" "ತಾಳ್ ಶಡೈಯುಂ ನೀಣ್ಮುಡಿಯುಂ" ಮುಂತಾದ ಪಾಶುರಗಳಿಗೆ ಶ್ರೀವೈಷ್ಣವರೇನೋ, ವಿಷ್ಣು ಶರೀರಿ, ಶಿವ ಶರೀರ ಎಂದು ಅರ್ಥ ಮಾಡಿ ಮುಗಿಸುತ್ತಾರೆ. ಈ ಅರ್ಥ ಈ ಪಾಶುರಗಳಿಂದ ಸ್ಪಷ್ಟವಾಗಿ ಮೂಡುವುದೇ, ಈ ರೀತಿ ಅರ್ಥ ಮಾಡುವುದರಿಂದ ತೃಪ್ತಿ ಏರ್ಪಡುತ್ತದೆಯೇ, ಈ ಅರ್ಥವೇ ಆಳ್ವಾರ್‌ಗಳ ಅಭಿಪ್ರಾಯವೇ ಎನ್ನುವುದು ಅಸ್ಪಷ್ಟವಾಗುತ್ತದೆ. ಕೆಲವೊಮ್ಮೆ ಇಂದ್ರ, ಶಿವ, ಬ್ರಹ್ಮಾದಿಗಳು ವಿಷ್ಣುವಿನ ಅಧೀನ ಎನ್ನುವ ಅರ್ಥವುಳ್ಳ ಪಾಶುರಗಳು ಬಂದರೂ "ತಾಳ್ ಶಡೈಯುಂ" ಮುಂತಾದ ಪಾಶುರಗಳಲ್ಲಿ ಈ ಸ್ಪಷ್ಟವಾದ ಅರ್ಥ ವ್ಯಕ್ತಪಡುವುದಿಲ್ಲ. ಈ

ಗೊಂದಲ ಈ ಮೂರು ಆಳ್ವಾರ್ ಪಾಶುರಗಳು ಮತ್ತು ತಿರುವಾಯ್ಮೊಳಿಯಲ್ಲಿ ಒಂದೆರಡು ಕಡೆ ಕಂಡುಬರುತ್ತದೆ. ಇದಕ್ಕೆ ಒಂದು ರೀತಿಯ ಸಮಾಧಾನ ಹೇಳಬಹುದೆಂದು ಎನಿಸುತ್ತಿದೆ.

ಈ ಆಳ್ವಾರುಗಳ ಕಾಲಕ್ಕೆ ಶೈವ ಮತ ಪ್ರಾಬಲ್ಯವಾಗಿದ್ದಿತು. ಎಲ್ಲೆಲ್ಲಿಯೂ ಶಿವಾಲಯಗಳೇ ಏಳುತ್ತಿದ್ದ ಕಾಲ. ಸಾಲದ್ದಕ್ಕೆ ರಾಜ ಮಹಾರಾಜರೇ ಈ ಶೈವಮತ ಪ್ರಸಾರಣ ಕಾರ್ಯಕ್ಕೆ ಟೊಂಕ ಕಟ್ಟಿದ್ದರು. ಪೆರಿಯ ಪುರಾಣದಲ್ಲಿ ಸೌಂದರನಂಬಿಗೆ ಈಶ್ವರನು ಹೇಳುವ ಮಾತು ಇದು: "ಎಲ್ಲೆಲ್ಲಿ ನಿಚ್ಚಂ ಶಿವಾಲಯಂ ಗಳುಂಟಾದಲ್ಲಿ ಅಲ್ಲಲ್ಲಿ ಸಹಸ್ರ ನಂದಿಯುಂಡಿಗೆಗಳಂ ಈವೆಂ" ಎನ್ನುತ್ತಾನೆ. ಮತ್ತೆ ನಂಬಿಗೆ "ಹಾಡಯ್ಯ ಹಾಡೆನುತ ತಾಳಮಂ ಕುಡಲು" ಎಂದು ತನ್ನನ್ನು ಸಂಕೀರ್ತಿಸುವಂತೆ ತಾನೇ ಹೇಳುತ್ತಾನೆ. ಶಿವನು ಈ ರೀತಿ ತನ್ನ ಆಲಯಗಳನ್ನು ಕಟ್ಟಬೇಕೆಂದು ಅಪೇಕ್ಷೆ ಪಡುವುದೂ, ತನ್ನನ್ನು ಹಾಡಬೇಕೆಂದು ವಿಧಾಯಕ ಮಾಡುವುದೂ ಉತ್ಪ್ರೇಕ್ಷೆ ಎನಿಸಿದರೂ ಇದರ ಹಿನ್ನೆಲೆಯನ್ನು ವಿಚಾರ ಮಾಡಿದಾಗ ಅಂದಿನ ರಾಜರೇ ಶೈವ ಮತ ಹರಡಲು ಎಷ್ಟೊಂದು ಆಸ್ಥೆ ವಹಿಸಿದ್ದರು ಎನ್ನುವುದರ ಅರಿವು ಉಂಟಾಗುತ್ತದೆ. ಆದರೆ ವೈಷ್ಣವ ಧರ್ಮ ಪ್ರಚಾರಕ್ಕೋ ಈ ಪ್ರೋತ್ಸಾಹ ಎಲ್ಲಿ ಇದ್ದಿತು. ವೈಷ್ಣವರೂ ಶೈವರಷ್ಟು ಅಧಿಕ ಸಂಖ್ಯೆಯಲ್ಲಿಯೂ ಇರಲಿಲ್ಲ. ಶೈವರನ್ನು ಸ್ಪರ್ಧಿಸುವ ಎದೆಗಾರಿಕೆಯೂ ಇರಲಿಲ್ಲ. ಈ ಶೈವರ ಕಿರುಕುಳಗಳ ಮಧ್ಯೆ ವೈಷ್ಣವ ಧರ್ಮ ಉಳಿದದ್ದೇ ಹೆಚ್ಚು ! ಪೆರಿಯಾಳ್ವಾರ್ ಕಾಲಕ್ಕೂ ಈ ಪಿಡುಗು ಇಲ್ಲದೆ ಇರಲಿಲ್ಲ. ಅವರು ಮಹಾವಿಷ್ಣುವಿನ ಪಾರಮ್ಯವನ್ನು ಸಭೆಯಲ್ಲಿ ಸ್ಥಾಪಿಸಿದಾಗ ಅವರಿಗೆ ಹೆದರಿಕೆ "ಎಲ್ಲಿ ಈ ಎದುರಾಳಿ ಗಳು ಕಲೆತು ವಿಷ್ಣುವಿಗೆ ಕೇಡೆಸಗುವರೋ !" ಎಂಬುದಾಗಿ. ಅದಕ್ಕೆ ಅವರು 'ಪಲ್ಲಾಂಡ್' ರಚಿಸಿ ವಿಷ್ಣುವಿಗೆ ರಕ್ಷೆಯನ್ನು ಕೋರಿದ್ದು. ರಾಮಾನುಜರ ಕಾಲಕ್ಕೂ ಈ ಶೈವರ ಕಿರುಕುಳ ತಪ್ಪಿದ್ದಲ್ಲ. ರಾಮಾನುಜರನ್ನೇ ಕೊಲ್ಲಲು ಪ್ರಯತ್ನಿಸಿದರು. ಈ ರೀತಿ ಎಂದಿನಿಂದಲೂ ಭಯಪೂರಿತ ವಾತಾವರಣದಲ್ಲೇ ಬೆಳೆದು ಬಂದು ಶ್ರೀವೈಷ್ಣವ ಸಿದ್ಧಾಂತ, ಆಳ್ವಾರ್, ಮೊದಲಾಳ್ವಾರ್‌ಗಳು ತಮ್ಮ ಸಾಹಿತ್ಯವನ್ನು ರಕ್ಷಿಸುವ ಸಲುವಾಗಿ, ಶೈವರ ಮನವೊಲಿಸಲು ತಮ್ಮ ಪ್ರಬಂಧದಲ್ಲಿ ಅಲ್ಲಲ್ಲಿ ಶಿವ, ವಿಷ್ಣು ಅಬೇಧದ ಪಾಶುರಗಳನ್ನು ಸೇರಿಸಿರಬಹುದಾದ ಅನುಮಾನ ಏರ್ಪಡುತ್ತದೆ. ಇದನ್ನು ಸಂಶೋಧಕರು ಅಧ್ಯಯನ ನಡೆಸಿ ನಿರ್ಣಯಿಸ ಬೇಕಾಗಿದೆ. ಇದೂ ಅಲ್ಲದೆ ಈ ಮೊದಲಾಳ್ವಾರ್ ಕಾಲದಿಂದಲೇ ಶ್ರೀವೈಷ್ಣವ ಅಥವಾ ವೈಷ್ಣವ ಪಂಥದ ಪ್ರಾರಂಭವಾಗಿದ್ದರಿಂದ ಆ ಕಾಲದಲ್ಲಿ ಇದಕ್ಕೊಂದು ಸ್ಪಷ್ಟವಾದ ರೂಪರೇಷೆ ಇನ್ನೂ ಬಂದಿರಲಿಲ್ಲವಾಗಿ ಅವರ ಪ್ರಬಂಧಗಳಲ್ಲಿ ಇಂತಹ ಗೊಂದಲಕ್ಕೆಡೆಯಾಗಿರಬೇಕು. ಅಂತೂ ಒಂದು ಮಾತ್ರ ನಿಷ್ಕೃಷ್ಟವಾಗಿ

ಹೇಳಬಹುದು. ಅವರ ಪಾಶುರಗಳೆಲ್ಲಾ ವಿಷ್ಣುವಿನ ಪಾರಮ್ಯವನ್ನೂ, ಅವನ ವೈಭವವನ್ನೂ ವಿವರಿಸುವುದರಲ್ಲಿ ಯಶಸ್ಸನ್ನು ಗಳಿಸಿದೆ. ಎಂತಲೇ ಶ್ರೀವೈಷ್ಣವ ಆಚಾರ್ಯರು ಅವರನ್ನು ತಮ್ಮ ಪಂಥದ ಮಾರ್ಗದರ್ಶಕರನ್ನಾಗಿ ಸ್ವೀಕರಿಸಿದ್ದುದು.

೨

ಈ ಮೂವರ ನಂತರದವರು ತಿರುಮಳಿಶೈ ಆಳ್ವಾರ್. ಇವರ "ತಿರುಚ್ಚಂದ ವಿರುತ್ತಂ" ೧೨೦ ಪಾಶುರಗಳಿಂದ ಕೂಡಿದ ಅದ್ಭುತವಾದ ಚಿತ್ರ ಪ್ರಬಂಧ. ಅದರಲ್ಲಿ ಮೂರು ಪಾಶುರಗಳು ತಿರುವೇಂಗಡವನ್ನು ಕುರಿತದ್ದು. ಇವರ ಶೈಲಿ ಅನುಪಮ ; ಭಾವಧಾರೆ ಕ್ಲಿಷ್ಟ, ಭಕ್ತಿ ಅತ್ಯುಚ್ಚತಮ. ೪೮, ೬೦ ಮತ್ತು ೪೧ನೆಯ ಪಾಶುರಗಳಲ್ಲಿ ತಿರುಮಲೆಯನ್ನು ಆಳ್ವಾರ್ ಹಾಡಿದ್ದಾರೆ.

ತಿರುವೇಂಗಡದ ಮೇಲೆ ನಿಂತಿರುವಂತೆಯೇ ಪರಮ ಪದದಲ್ಲಿಯೂ ವಾಸಿಸುತ್ತಾ ಕ್ಷೀರ ಸಮುದ್ರದಲ್ಲಿಯೂ ಇರುತ್ತೀಯೆ. ನೀರಿನಲ್ಲಿಯೂ, ನೆಲದ ಮೇಲೂ ಅವತರಿಸಿ ಪ್ರಳಯಕ್ಕೊಳಗಾದಾಗ ಭೂಮಿಯನ್ನು ಕಾಪಾಡಿ, ಭೂಮಿಗೆ ಆಪತ್ತು ಒದಗಿದಾಗ ರಕ್ಷಿಸಿ, ಜೀವರಾಶಿಗಳನ್ನು ಸೃಷ್ಟಿಸಿ, ಅವುಗಳ ಭಕ್ತಿಗೆ ಅನುಸಾರವಾಗಿ ದಿವ್ಯಮೂರ್ತಿಗಳನ್ನು ಅನುಗ್ರಹಿಸಿ ಕಾಪಾಡಿದೆ. ನನಗೂ ಹಾಗೆಯೇ ಅನುಗ್ರಹ ಮಾಡು (೪೮) ರಾತ್ರಿ ವೇಳೆ ಬಹಳವಾಗಿ ಮಂಜು ಬಿದ್ದುದರ ಪರಿಣಾಮವಾಗಿ ಎತ್ತರಕ್ಕೆ ಬೆಳೆದು ನಿಂತ ಬಿದುರುಗಳು, ಮರದ ಮೇಲೆ ಮಂಜು ಸಂಚಯವಾದುದರಿಂದ ಆ ಭಾರಕ್ಕೆ ಬಾಗಿ ನೆಲಕ್ಕೆ ಸೋಕಿದುವಂತೆ. ಯಥಾ ಪ್ರಕಾರ ಬೆಳಗ್ಗೆ ಸೂರ್ಯರಶ್ಮಿ ಮೇಲೆ ಬೀಳಲು ಮಂಜು ಕರಗಿ ಹರಿದುದರಿಂದ ಬಿದಿರುಗಳು ಮತ್ತೊಮ್ಮೆ ನೇರವಾಗಿ ನಿಂತು ಆಗಸಕ್ಕೆ ಅಭಿಮುಖವಾದುವಂತೆ ! ಅಂತಹ ರಮ್ಯವಾದ ವೇಂಗಡದ ಮೇಲೆ ದುಂಬಿಗಳು ಮಧುಪಾನದ ಮತ್ತಿನಿಂದ ಝೇಂಕಾರ ಮಾಡುತ್ತಾ ವಿಕಸಿತಗೊಂಡ ಪುಷ್ಪಗಳ ಸುತ್ತಲೂ ಹಾರುತ್ತಿವೆ ಯಂತೆ. ಇಂತಹುದೇ ತೋಟತಟಾಕಾದಿಗಳಿಂದ ಮೆರೆಯುವ ತಿರುಕ್ಕುಡಂದೈ (ಕುಂಭಕೋಣ)ನಲ್ಲಿ ಮಲಗಿರುವ ಸ್ವಾಮಿಯೂ ಒಬ್ಬನೇ ಆಗಿರುವ ಆಶ್ರಿತ ವತ್ಸಲ ಮಹಾವಿಷ್ಣುವಲ್ಲವೆ ? (೬೦) ದೂರ್ವಾಸ ಋಷಿಯ ಶಾಪದಿಂದ ನಷ್ಟೈಶ್ವರ್ಯನಾದ ದೇವೇಂದ್ರನು ಪರಮಾತ್ಮನನ್ನು ಆಶ್ರಯಿಸಲು, ಮಥಿಸಿದ ಕ್ಷೀರಸಾಗರದಲ್ಲಿ ಯೋಗ ನಿದ್ರೆ ಮಾಡುತ್ತಿರುವವನೂ, ಕಾಲನೇಮಿ ಅಸುರನನ್ನು ನಿಗ್ರಹಿಸಿ, ಬುದ್ಧಿಕೆಟ್ಟ ವಾಲಿಯನ್ನು ಕೊಂದು, ಸುಗ್ರೀವನ ಆಪತ್ತನ್ನು ಪರಿಹರಿಸಿ, ಒಂದಕ್ಕೊಂದು ಸೇರಿದಂತಿದ್ದ ಸಪ್ತ ಸಾಲ ವೃಕ್ಷಗಳನ್ನೂ ರಸಾತಳದಿಂದಲೋ

ಎನ್ನುವಂತೆ ಛೇದಿಸಿ, ಈಗ ವೇಂಗಡವನ್ನು ಸೇರಿ ನಿಂತಿರುವನು. ಆಶ್ರಿತರು ವ್ಯಾಮೋಹದೊಡನೆ ಸಮೀಪಿಸುವ ದಿವ್ಯ ಪಾದಗಳನ್ನೇ ನಾನೂ ಸಹ ಆಶ್ರಯಿಸಿ ಉಜ್ಜೀವಿಸುವ ಮಾರ್ಗವನ್ನು ಕಂಡುಕೊಳ್ಳುವುದು ಚಾಣ್ಮೆ (೮೧).

'ನಾನ್ಮುಗನ್ ತಿರುವಂದಾದಿ' ಎನ್ನುವ ಪ್ರಬಂಧ ೯೬ ಪಾಶುರಗಳಿಂದ ಕೂಡಿದ್ದು. ಅವುಗಳ ೧೨ ಪಾಶುರಗಳಾದ ೩೪, ೩೯, ೪೦, ೪೧, ೪೨, ೪೩, ೪೪, ೪೫, ೪೬, ೪೭, ೪೮ ಮತ್ತು ೮೧ ವೇಂಗಡವನ್ನು ಕುರಿತ ಮಂಗಳಾಶಾಸನ ಪಾಶುರಗಳು. ಒಂದು ವಿಶೇಷವೇನೆಂದರೆ ಒಟ್ಟಾಗಿ ಹತ್ತು ಪಾಶುರಗಳಲ್ಲಿ ಅನುಸ್ಯೂತವಾಗಿ ವೇಂಗಡವನ್ನು ಕುರಿತ ಪಾಶುರ ಮಾಡಿರುವವರೆಂದರೆ ಇವರೇ ಮೊದಲಿಗರು. ಇದರ ೭ ಪಾಶುರಗಳಲ್ಲಿ ವೇಂಗಡವನ್ನೂ ೫ ಪಾಶುರಗಳಲ್ಲಿ ಸ್ವಾಮಿಯನ್ನೂ ಕೀರ್ತಿಸಿದ್ದಾರೆ. ಐದು ಪಾಶುರಗಳಲ್ಲಿ ಸ್ವಾಮಿಯ ಹೆಸರು ಕ್ರಮವಾಗಿ 'ವೇಂಗಡತ್ತು ಮೆಯ್ಯಾನ್', 'ವೇಂಗಡವಾ', 'ತಿರುವೇಂಗಡತ್ತಾನ್', 'ವೇಂಗಡತ್ತಾನ್' ಮತ್ತು 'ವಡ ವೇಂಗಡತ್ತಾನ್'. ಈ ಆಳ್ವಾರ್ ಪಾಶುರಗಳೂ ಮೊದಲಾಳ್ವಾರ್‌ಗಳ ಪಾಶುರಗಳಂತೆಯೇ ಓಡುತ್ತವೆ. ಹೊಸ ಭಾವಗಳೇನೂ ಕಂಡುಬರುವುದಿಲ್ಲ. ವರ್ಣನಾ ವೈಖರಿಗಳೂ ಅವೇ ಪುನರುಕ್ತಿಗೊಳ್ಳುತ್ತವೆ. ಅಂದರೆ ಹಾಗೆ ಹಾಗೆಯೇ ಚಿತ್ರಗಳು ಇವೆ ಎಂಬುದಾಗಿ ಅಲ್ಲ. ಅಲ್ಪಸ್ವಲ್ಪ ವ್ಯತ್ಯಾಸವಾಗಿ ಆ ಸನ್ನಿವೇಶಗಳೇ ಮೂಡಿಬಂದಿರುತ್ತವೆ. ಅಂತೂ ಮೊದಲಾಳ್ವಾರ್‌ಗಳಿಂದ ಪ್ರಭಾವಿತರಾಗಿರುವ ಮುದ್ರೆ ಚೆನ್ನಾಗಿ ಕಂಡುಬರುತ್ತೆ. ಇದರಲ್ಲಿ ಬರುವ ವೇಂಗಡ ವಿಷಯಾತ್ಮಕವಾದ ಪ್ರಬಂಧಗಳಿಂದ ಈ ಆಳ್ವಾರ್ ವೇಂಗಡವನ್ನು ದರ್ಶಿಸಲು ಸಾಧ್ಯವಿಲ್ಲದೇ ಹೋಗಿ ಪಶ್ಚಾತ್ತಾಪ ಪಡುವ ವಿಧಾನ ಕಾಣಿಸುತ್ತದೆ. ಇದರ ಹೃದಯಸ್ಪರ್ಶಿ ನಿರೂಪಣೆ ಇದೆ. ಮೊದಲಾಳ್ವಾರ್ ಮುಕ್ಕೋಟಿ ದ್ವಾದಶಿಯ ಸಂಭ್ರಮವನ್ನು ನಮ್ಮ ಮುಂದಿಟ್ಟರೆ ಈ ಆಳ್ವಾರ್ ಶ್ರವಣ ನಕ್ಷತ್ರದ ತಿರುಮಲೆಯ ಬ್ರಹ್ಮೋತ್ಸವ ವೈಭವವನ್ನು ವರ್ಣಿಸುತ್ತಾರೆ. "ಆ ವೈಭವದ ಜಾತ್ರೆಯನ್ನು ನೋಡಲು ವೇಂಗಡಕ್ಕೆ ಬರಲು ಆಸೆ ಪಡುತ್ತೇನೆ. ನೀವಾದರೂ ಹೋಗಿ ನೋಡಿ ಅದರ ಭವ್ಯತೆಯಿಂದ ಆನಂದ ಹೊಂದಿರಿ. ನಾನು ನನ್ನ ಪೂರ್ವ ಜೀವನವನ್ನು ವ್ಯರ್ಥವಾಗಿ ಕಳೆದು, ಈಗ ವೃದ್ಧಾಪ್ಯ, ಖಾಯಿಲೆ ಇವುಗಳ ದೆಸೆಯಿಂದ ಅನಾನುಕೂಲತೆ ಉಂಟಾಗಿದೆ. ನೀವಾದರೋ ಮೈಯ್ಯಲ್ಲಿ ಶಕ್ತಿ, ಕಸು, ಇರುವಾಗ ದರ್ಶಿಸಿ ಆನಂದಪಡಿರಿ, ಪುಣ್ಯವನ್ನು ಗಳಿಸಿಕೊಳ್ಳಿರಿ" ಎನ್ನುತ್ತಾರೆ. ಇವರ ಒಂದು ಪಾಶುರದ ಆಧಾರದಿಂದಲೇ ಇಲ್ಲಿನ ದೇವರು ಮಂಟಪವೊಂದರಲ್ಲಿ ಎಲ್ಲರಿಗೂ ಕಾಣುವಂತೆ ನಿಂತಿದ್ದಾನೆ ಎಂದು ರಾಮಚಂದ್ರ ರಾಯರು ತೀರ್ಮಾನಿಸಿದ್ದಾರೆ. ನನ್ನ ಅಭಿಪ್ರಾಯವನ್ನು ಈಗಾಗಲೇ ತಿಳಿಸಿದ್ದಾಗಿದೆ.

ತಿರುಕ್ಕೋಟ್ಟಿಯೂರ್‌ನಲ್ಲೂ, ತಿರುವೇಂಗಡದಲ್ಲಿಯೂ ನೆಲಸಿರುವ ಸ್ವಾಮಿಯನ್ನು ಸ್ತುತಿಸಲು ಆಶೆ. ಅಂತಹ ಭಗವಂತನನ್ನು ಸ್ತುತಿಸುವಂತಾದದ್ದು ಅವನ ಹಿರಿಮೆ, ಕುತೂಹಲ. ಶರೀರಸಂಬಂಧವಾದ ಕರ್ಮಗಳೂ, ವ್ಯಾಧಿಗಳೂ, ಸಮೀಪಿಸದಂತೆ ಮಾಡುವ ಆ ಸ್ವಾಮಿಯ ತಿರುವಡಿಗಳನ್ನು ನಾನು ಉಪೇಕ್ಷಿಸುವೆನೇ? (೩೪) ಶ್ರೀ ವೇಂಗಡದೊಡೆಯನನ್ನು ದರ್ಶಿಸಲು, ಸೇವಿಸಲು ಬಾಯಿಬಿಟ್ಟು ಕರೆಯುತ್ತಿದ್ದೇನೆ. ಅಧಿಕವಾದ ಮಳೆಯಿಂದಾಗಿ ಪ್ರವಾಹಜಲವುರುಳುತ್ತಿರುವ ಜಲಪಾತಗಳೂ, ಕಾಲುವೆಗಳೂ ರತ್ನ ಮುತ್ತು ಮುಂತಾದುವುಗಳು ಕೊಚ್ಚಿಸಿಕೊಂಡು ಬರುತ್ತಿವೆ. ಇದರಿಂದ ಭಯಪಟ್ಟ ಆನೆಗಳು ಓಡುತ್ತಿವೆ, ಹಾವುಗಳು ಹುತ್ತಗಳಲ್ಲಿ ಅಡಗುತ್ತಿವ. ಇಂತಹ ಪರ್ವತವನ್ನು ಸೇರಲು "ಕೂಡಲ್" ಎನ್ನುವ ಶಕುನ ಚಿತ್ರವನ್ನು ಬರೆದು ಒಳ್ಳೆಯ ಶಕುನ ತಿಳಿಸುವುದೋ ಎಂದು ಎದುರು ನೋಡುತ್ತಿದ್ದೇನೆ (೩೯) ಪರ್ವತವನ್ನು 'ವೇಂಗಡ' ವೆಂದೇ ಕುರಿತು ಜಪಿಸುತ್ತಿದ್ದೇನೆ; ಅದರ ಹೆಸರನ್ನು ಹೇಳುವುದರಿಂದಲೇ ಮುಕ್ತಿ ಸಿದ್ಧವೆಂದು ಭಾವಿಸುತ್ತೇನೆ. ಸತತ ಧ್ಯಾನ ಮಾಡುತ್ತಿದ್ದೇನೆ. ಅಭ್ಯಾಸ ಮಾಡಿದ ವೇದಶಾಸ್ತ್ರಗಳಲ್ಲಿ ಪ್ರತಿಪಾದಿತವಾಗಿರುವ ಶ್ರೀಯಃಪತಿಯ ಚರಣಾರವಿಂದಗಳೆಂಬ ಬಲೆಗಳಲ್ಲಿ ಸಿಲುಕಿ ಬಿದ್ದಿದ್ದೇನ (೪೦) ಈ ಎರಡು ಪಾಶುರಗಳಲ್ಲೂ ನಾಯಕಿಯು ವಿರಹದ ದೆಸೆಯಿಂದ ಭಗವಂತನ ವಿಶ್ಲೇಷದ ಬಾಧೆಯನ್ನು ವಿವರಿಸಿಕೊಳ್ಳುತ್ತಾಳೆ. ಶಬ್ದ ಮಾಡುವ ಅಬ್ಬಿಗಳು ಮುತ್ತು ರತ್ನಗಳನ್ನು ಉದುರಿಸುವಂತಹವು. ಶ್ರವಣ ನಕ್ಷತ್ರದಂದು ನಡೆಯುವ ಉತ್ಸವದಲ್ಲಿ ಜನರ ಮಂಗಳಾಶಾಸನ ಧ್ವನಿ ಪ್ರತಿಧ್ವನಿಸುವಂತೆ ಭಕ್ತಾದಿಗಳು ನೆರೆದಿರುವರು. ಈ ಜಾತ್ರೆಯ ವೈಭವವನ್ನು ನಿರುಕಿಸಿ ಜನ್ಮವನ್ನು ಸಾರ್ಥಕ ಪಡೆಯಲು ವೇಂಗಡವನ್ನು ಸೇರಲು ಆಶೆ ಪಡುತ್ತೇನೆ (೪೧). ಯಾವಾಗಲೂ ಪರಿಮಳಿಸುವ ನಾಭಿ ಕಮಲದಲ್ಲಿ ಜನ್ಮವನ್ನು ಕಂಡುಕೊಂಡ ಬ್ರಹ್ಮನೂ, ತ್ರಿನೇತ್ರನಾದ ರುದ್ರನೂ ನಿನ್ನ ಪಾದಗಳ ಮೇಲೆ ಕಮಲಗಳನ್ನಿಟ್ಟು ಸ್ತೋತ್ರ ಮಾಡುವ ಪವಿತ್ರ ತಾಣ ವೇಂಗಡ. ಅಂತಹ ತಿರುಮಲೆಗೆ ಹೋಗಿ ತನ್ನ ಸ್ವಭಾವದಿಂದಲೇ ಪಾಪ ಪರಿಹಾರ ಮಾಡುವ ಮಹಿಮೆಯುನ್ನುಳ್ಳ ಅದನ್ನು ಆಶ್ರಯಿಸಿರಿ (೪೨) ಚಂದ್ರನನ್ನು ಜಟೆಯಲ್ಲಿ ಧರಿಸಿದ ಶಿವನೂ, ಬ್ರಹ್ಮನೂ ತಾವೇ ಛತ್ರಿಯನ್ನು ತೆಗೆದುಕೊಂಡು ಹೋಗಿ ಗಗನಚುಂಬಿಯಾದ ಉತ್ತರ ತಿರುವೇಂಗಡ ಶಿಖರದಲ್ಲಿ ನೆಲಸಿದ ಸ್ವಾಮಿಗೆ ಸಾಯಂಕಾಲದ ರಕ್ಷೆಯನ್ನು ಸಮರ್ಪಿಸಲು ಬಂದಿದ್ದಾರೆ. ಇದಿಗೋ (ಸಾಯಂಕಾಲದ ನೀವಾಳಿಸುವ ಪಂಜಿನ ಆರತಿಗೆ "ಅಂದಿಕ್ಕಾಪ್ಪು" ಎನ್ನುತ್ತಾರೆ) (೪೩) ಮಡಿಲಿನಲ್ಲಿ ಇಟ್ಟುಕೊಳ್ಳುವಂತಹ ಎಳೆ ಕೂಸಿನಂತೆ ಬ್ರಹ್ಮನ ಮಡಿಲಿನಲ್ಲಿದ್ದ ಸ್ವಾಮಿ ವರವನ್ನು ಕೇಳಲು ಬಂದ ರಾವಣನ ತಲೆಗಳನ್ನು ಎಣಿಸಿ ಇವನಿಗೆ ವರವನ್ನು ಕೊಡಬೇಡವೆಂದು ಎಚ್ಚರಿಸಿ ಅಂತರ್ಧಾನ

ನಾದನು. ಅಂತಹವನೇ ವೇಂಗಡದ ಅಧಿಪತಿ. ಯೌವ್ವನವಿರುವಾಗಲೇ ಅಲ್ಲಿಗೆ ಹೋಗಿ ಅವನನ್ನು ದರ್ಶಿಸಿ ಕೃತಾರ್ಥರಾಗಿರಿ (೪೪) ಆಶ್ರಯಿಸಲು ಬಂದವರು ಪರಮಾತ್ಮನ ಚರಣದಲ್ಲಿ ಪುಷ್ಪವನ್ನಿರಿಸಿ ಮಂಗಳಾಶಾಸನ ಮಾಡಿ ಕತ್ತರಿಸಿದ ಮರದಂತೆ ನಿಶ್ಚಲವಾಗಿ ಅಲ್ಲಿಯೇ ನೆಲಸಿ ಸರ್ವ ದೇಶಗಳಲ್ಲಿಯೂ ಪ್ರಕಾಶಿಸುವ ಸರ್ವಾಧಿಕನಾಗಿ ನಿಂತಿರುವವನೇ ಈತ. ತಂಪಾದ ಕಾಲುವೆಗಳಿಂದ ಕೂಡಿದ ವೇಂಗಡಾದ್ರಿಯು ನಿತ್ಯಸೂರಿಗಳಿಗೂ, ಭೂಲೋಕ ನಿವಾಸಿಗಳಿಗೂ ಕೂಡಿ ನಿಧಿಯೋಪಾದಿ ಇದೆ (೪೫) "ಅಂದವಾದ ಚಂದ್ರನನ್ನು ಸರ್ವೇಶ್ವರನಾದ ವೇಂಗಡ ದೊಡೆಯನಿಗೆ ದೀಪವನ್ನಾಗಿ ಮೇಲೆ ಹಿಡಿದು ಅಲಂಕಾರ ಮಾಡುವೆನು" ಎಂದು ಚಂದ್ರನನ್ನು ಸೊಂಡಿಲಿನಿಂದ ಎತ್ತಿದ ಆನೆಯನ್ನು ಎಲ್ಲ ಕಡೆಯಿಂದಲೂ ಬೇಡರು ಬೇಟೆಯಾಡಿ ಕೊಲ್ಲಲು ಸುತ್ತುವರಿಯಲು, ಅದರ ಕೈಂಕರ್ಯ ಬುದ್ಧಿಯನ್ನು ಕಂಡ ಕುರವರು ಅದನ್ನು ರಕ್ಷಿಸಲು ಎತ್ತರವಾದ ಬಿಲ್ಲು ಬಾಣಗಳೊಂದಿಗೆ ಬೇಡರನ್ನು ಸುತ್ತುವರಿಯುವ ವೇಂಗಡವೇ. ಈ ಲೋಕದ ಜನರೆಲ್ಲಾ ನರ್ತಿಸುತ್ತಾ ಪ್ರದಕ್ಷಿಣೆ ಮಾಡುವ ಪವಿತ್ರ ತಾಣವೇ ! ಆ ಜನರು ನಿಜವಾಗಿಯೂ ಧನ್ಯರೇ ಸರಿ. (೪೬) ವ್ಯಾಳಿಯನ್ನೂ, ಬಲಿಷ್ಠವಾದ ಸಿಂಹವನ್ನೂ, ಚಿನ್ನವನ್ನೂ, ವಜ್ರ ವೈಢೂರ್ಯ ಗಳನ್ನೂ, ಹೂ, ವೃಕ್ಷಗಳನ್ನೂ ಕೊಚ್ಚಿಸಿಕೊಂಡು ಬರುವ ಪ್ರವಾಹದ ನದಿಗಳನ್ನುಳ್ಳ ಮತ್ತು ಕಾಡುಗ್ಗಳ, ಕಪಿಗಳ, ಬೇಡರುಗಳನ್ನು ಹೊಂದಿದ ವೇಂಗಡವು ವಿಲಕ್ಷಣವಾದ ಮಣಿವರ್ಣನ ಊರೂ ಆಗಿದೆ. (೪೭) ನಿತ್ಯ ಸೂರಿಗಳು ತಮಗೆ, ಭಕ್ತಿಯಿಂದ ಪ್ರಾಪ್ಯವೆಂದು ತಿಳಿದು, ಆಶ್ರಯಿಸುವ ಜಾಗ ವೇಂಗಡ. ನಿಶ್ಚಯವಾಗಿಯೂ ಇದು ಪಾಪವನ್ನೂ, ವ್ಯಾಧಿಯನ್ನೂ ಹೋಗಲಾಡಿ ಸುವುದು. ರಾಕ್ಷಸರನ್ನು ನಾಶಪಡಿಸಲು ತನ್ನ ಕೈಯ್ಯಲ್ಲಿ ಚಕ್ರವನ್ನು ಹಿಡಿದು ದೇವತೆಗಳನ್ನು ಸಲಹಿದ ಸ್ವಾಮಿಯ ಶ್ರೀ ಗಿರಿಯೂ ಇದೇ (೪೮) ಮಹಿಮಾನ್ವಿತ ರಾಗಿ ಪರಮ ಪದವನ್ನು ಆಳಲು ಆಶೆಪಡುವವರು ವೇಂಗಡದೊಡೆಯನ ಪಾದದಲ್ಲಿ ಅನೇಕ ಪುಷ್ಪಗಳನ್ನು ಸಮರ್ಪಿಸುತ್ತಾರೆ. ಭಗವಂತನ ಮನೋಭಿಪ್ರಾಯ ವನ್ನರಿತು ಅದರಂತೆಯೇ ಪ್ರೇಮದಿಂದ ಅವನಿಗೆ ದಾಸ್ಯವೃತ್ತಿಯನ್ನು ಮಾಡುವ ಭಾಗವತರ ದಾಸರಾಗುವರು. ಇನ್ನೂ ಹೆಚ್ಚಿನ ಮೇಲ್ಮೆಯಿಂದ ಬಾಳುವರು (೮೧)

ಈ ಆಳ್ವಾರ್ ವೇಂಗಡವನ್ನು ನೋಡಬೇಕೆಂಬ ಹಂಬಲವನ್ನು ೩೪, ೩೯, ೪೦, ೪೧, ೪೨ ಮತ್ತು ೪೮ನೇ ಪಾಶುರಗಳಲ್ಲಿ ತೋಡಿಕೊಂಡಿದ್ದಾರೆ. ೩೯ನೆಯ ಪಾಶುರದಲ್ಲಿ ಜಲಪಾತದಲ್ಲಿ ಕೊಚ್ಚಿ ಬರುವ ವಜ್ರ ವೈಢೂರ್ಯಾದಿಗಳನ್ನು ಕಂಡು ಆನೆ ಭಯಪಟ್ಟು ಓಡುವುದು, ಹಾವು ಭಯದಿಂದ ಹುತ್ತವನ್ನು ಸೇರುವುದೂ ಈ ದೃಶ್ಯಗಳು ಪೊಯ್ಗೈಯ್ ಆಳ್ವಾರರ ವರ್ಣನೆಯ ಬೇರೆ ರೂಪವಾಗಿದೆ.

'ಹೇಳಿದರೆ ವೇಂಗಡವನ್ನೇ ಹಾಡುವೆ' ಎನ್ನುವ ಪೇಯಾಳ್ವಾರ್ ನಾಯಕೀ ಭಾವ ಇಲ್ಲಿ ಅದೇ ರೀತಿಯಿಂದ ಆರಂಭವಾಗುವ ಪಾಶುರದೊಂದಿಗೆ, ಭಾವದೊಂದಿಗೆ ಸಾಮ್ಯಗೊಳ್ಳುತ್ತದೆ. ಶ್ರವಣ ನಕ್ಷತ್ರದ ಜಾತ್ರೆ ಮೊದಲಾಳ್ವಾರ್ ಜಾತ್ರೆಯೊಂದಿಗೆ ಹೋಲಿಕೆಗೊಳ್ಳುತ್ತದೆ. ಆನೆಯನ್ನು ಆಕ್ರಮಿಸಿದ ಬೇಡರ ಜೊತೆ ಕುರವರು ಆನೆಯ ರಕ್ಷಣೆಗಾಗಿ ಶ್ರಮಿಸಿದ ಚಿತ್ರ ತಲಸ್ಪರ್ಶಿಯಾಗಿದೆ. ಇವರ ತಿರುವೇಂಗಡ ವಿಷಯವಾದ ಪಾಶುರಗಳಲ್ಲಿ ಇದೊಂದೇ ಅತ್ಯಂತ ಆಕರ್ಷಕವಾಗಿದೆ ಎನ್ನಬೇಕು.

ಬೇಡರ, ಕುರವರ ಯುದ್ಧವನ್ನೂ, ಪಲ್ಲವರಿಗೂ, ಬೆಟ್ಟದ ಮೂಲನಿವಾಸಿಗಳಾದ ಕುರವರಿಗೂ ಆದ ಯುದ್ಧವೆಂಬುದಾಗಿ ಕೆಲವರು ಗುರುತಿಸುತ್ತಾರೆ. ಆದರೆ ಪಲ್ಲವರು ಪ್ರಬಲರಾದದ್ದು ನರಸಿಂಹವರ್ಮನ ಕಾಲದಲ್ಲಿ. ನರಸಿಂಹ ವರ್ಮನ ಕಾಲ ಮೊದಲಾಳ್ವಾರ್ ಕಾಲ, ಇವನಿಗೂ ಮೊದಲಿನವನು ಮಹೇಂದ್ರ ವರ್ಮ ! ಆದ್ದರಿಂದ ಈ ಯುದ್ಧ ಈ ಇಬ್ಬರ ಕಾಲದಲ್ಲಿ ನಡೆದಿರಲಿಕ್ಕೆ ಸಾಧ್ಯವಿಲ್ಲವೆನ್ನಬೇಕು. ಮಹೇಂದ್ರವರ್ಮನ ಕಾಲದಲ್ಲಿ ಈ ಭಾಗದಲ್ಲಿದ್ದ ಶಾಕ್ತೇಯ, ಜೈನ, ಬೌದ್ಧರ ಹುಟ್ಟಡಗಿಸಿದನು ಎಂದು ಇತಿಹಾಸ ಸಾರುತ್ತದೆ. ಇದೊಂದು ಪರಿಶೀಲನಾರ್ಹವಾದ ವಿಚಾರವೇ ಸರಿ !

ಈ ಆಳ್ವಾರ್ ಪ್ರಕೃತಿ ಚಿತ್ರಣಕ್ಕೆ ಅಷ್ಟಾಗಿ ಗಮನ ಕೊಟ್ಟಿಲ್ಲ. ಆದರೆ ಕೊಟ್ಟಿರುವ ಒಂದೆರಡು ಚಿತ್ರಗಳೇ ಮನೋಜ್ಞ. ಭಾವಪೂರಿತವಾಗಿದೆ.

ಮೊದಲಾಳ್ವಾರ್‌ಗಳು ಮತ್ತು ತಿರುಮಳಿಶೈ ಆಳ್ವಾರ್ ಅವರ ಭಾವುಕತೆ, ಶೈಲಿ, ವರ್ಣನೆ, ಪದ್ಯಗಳ ರಚನಾ ವಿನ್ಯಾಸ ಕೌಶಲ್ಯಗಳೆಲ್ಲ ಒಂದೇ ರೀತಿಯಲ್ಲಿ ಮೂಡಿಬಂದಿರುವುದು ಅಚ್ಚರಿಯ ವಿಷಯವಾಗಿದೆ. ಈ ಪಾಶುರಗಳ ಲಕ್ಷಣವೂ ವಿಚಿತ್ರವಾದದ್ದೇ ಸರಿ. ಕುರುಳ್ ವೃತ್ತದ ಎರಡು ಸಾಲುಗಳನ್ನೇ ನಾಲ್ಕು ಸಾಲಿಗೆ ಹೆಚ್ಚಿಸಿರುವ ಅಂಶ ನಾವು ಮನಗಾಣುತ್ತೇವೆ. ಮೊದಲಿನ ಒಂದೂವರೆ ಸಾಲು ಒಂದು ರೀತಿಯದಾದರೆ ಅದರ ಉತ್ತರ ರೂಪವೆನ್ನುವಂತೆ ಮುಂದಿನ ಎರಡು ಸಾಲುಗಳು ರಂಜಿಸುತ್ತವೆ. ಇವು ಮೊದಲಿನ ಆಳ್ವಾರ್ ಪಾಶುರಗಳ ಲಕ್ಷಣ !

## ೩

ನಾವಿನ್ನು ನಮ್ಮಾಳ್ವಾರ್ ಕೃತಿಗಳ ಅಧ್ಯಯನಕ್ಕೆ ಸಾಗೋಣ. ಇವರ ನಾಲ್ಕು ಕೃತಿಗಳು ನಾಲ್ಕು ವೇದಗಳನ್ನು ಪ್ರತಿನಿಧಿಸುತ್ತದೆಯಂತೆ. 'ತಿರುವಿರುತ್ತಂ' ಋಗ್ವೇದ ; 'ತಿರುವಾಶಿರಿಯಂ' ಯಜುಸ್ಸು ; 'ಪೆರಿಯ ತಿರುವಂದಾದಿ' ಅಥರ್ವ ; 'ತಿರುವಾಯ್ಮೊಳಿ' ಸಾಮವಂತೆ ! ತಿರುವಿರುತ್ತಂನಲ್ಲಿ ನೂರು ಪಾಶುರ ;

ತಿರುವಾಶಿರಿಯಂನಲ್ಲಿ ೭ ಪಾಶುರ ; ಪೆರಿಯ ತಿರುವಂದಾದಿಯಲ್ಲಿ ೮೭ ಪಾಶುರ ; ತಿರುವಾಯ್ಮೊಳಿಯಲ್ಲಿ ೧೧೦೨ ಪಾಶುರಗಳು ಇವೆ. ಇವುಗಳಲ್ಲಿ ತಿರುವಿರುತ್ತಂನಲ್ಲಿ ೮ ಪಾಶುರಗಳೂ, ಪೆರಿಯ ತಿರುವಂದಾದಿಯಲ್ಲಿ ೧ ಪಾಶುರವೂ ತಿರುವಾಯ್ಮೊಳಿ ಯಲ್ಲಿ ಮೊದಲೇ ಹೇಳಿರುವಂತೆ ೪೬ ಪಾಶುರಗಳು ವೇಂಗಡವನ್ನು ಕುರಿತವು.

ಇಲ್ಲಿ ಇನ್ನೊಂದು ವಿಚಾರವನ್ನು ಪ್ರಸ್ತಾಪ ಮಾಡಬೇಕಾಗಿದೆ. ಈ ಪಾಶುರ ಗಳ ವಿಚಾರದಲ್ಲಿ ಮತ್ತೊಂದು ರೀತಿ ವ್ಯಾಖ್ಯಾನ ಮಾಡುವವರೂ ಇದ್ದಾರೆ. 'ಶೆಂದಮಿಳ್ ಪಾಡುವಾರ್ ವಣಂಗುಂ ದೈವಂ' ಎಂದು ರಾಮಾನುಜರು ಮೊದಲಾಳ್ವಾರ್‌ಗಳ ಮೂರು ತಿರುವಂದಾದಿಗಳನ್ನು ತಿರುಮಲೆಯ ಅಧ್ಯಯ ನೋತ್ಸವ ಕಾಲದಲ್ಲಿ ಅನುಸಂಧಾನ ಕ್ರಮದಲ್ಲಿ ಆದ್ಯತೆ ನೀಡಿದರು ಎನ್ನುವ ವ್ಯಾಜದಿಂದ ಇಡೀ ೩೦೦ ಪಾಶುರಗಳನ್ನು ತಿರುಮಲೆಗೇ ಅಂಕಿತಗೊಂಡಿರುವುದು ಎಂದು ವಾದಿಸುತ್ತಾರೆ. ಟಿ. ಟಿ. ಡಿ. ಅವರು "ಆಳ್ವಾರುಲ ಮಂಗಳಾಶಾಸನ ಪಾಶುರಮುಲು" ತಿರುಪ್ಪಲ್ಲಾಂಡ್ ೧ ಪಾಶುರವೆಂಬುದಾಗಿಯೂ, ತಿರುಪ್ಪಾವೈ ಒಂದು ಪಾಶುರವೆಂಬುದಾಗಿಯೂ ಸೇರಿಸಿದ್ದಾರೆ. ಇದರ ವಿಚಾರವನ್ನೂ ಇಲ್ಲಿ ಪ್ರಸ್ತಾಪ ಮಾಡುವುದು ಸೂಕ್ತವೆನಿಸುತ್ತದೆ.

ತಿರುಪ್ಪಲ್ಲಾಂಡ್ ಸಾಮಾನ್ಯವಾಗಿ ವಿಷ್ಣುವಿಗೆ ಹಾಡಲ್ಪಟ್ಟ ಮಂಗಳಾಶಾಸನ ಪಾಶುರ. ಇದು ಪೆರಿಯಾಳ್ವಾರ್ ಚರಿತ್ರೆಯಿಂದ ವ್ಯಕ್ತಪಡುವ ಅಂಶ. ತಿರುವೇಂಗಡದ ಒಡೆಯನು ವಿಷ್ಣುವಿನ ರೂಪವೇ ಆಗಿರುವುದರಿಂದಲೂ, ಎಲ್ಲಾ ಶ್ರೀವೈಷ್ಣವ ದೇವಸ್ಥಾನಗಳಲ್ಲೂ ಶಾತ್ತುಮೊರೈ ಸಂದರ್ಭದಲ್ಲಿ ಅನುಸಂಧಾನ ಮಾಡುವ ರೂಢಿ ಇರುವುದರಿಂದಲೂ ಈ ತಿರುಪ್ಪಲ್ಲಾಂಡಿನ ಮೊದಲ ಪಾಶುರವನ್ನು ತಿರುಮಲೆಯ ದೇವರಿಗೂ ಅನ್ವಯಿಸಿ ಈ ಮಂಗಳಾಶಾಸನ ಪಾಶುರಮುಲು ಪುಸ್ತಕದ ಆರಂಭದಲ್ಲೇ ಸೇರಿಸಿದ್ದಾರೆಂದು ಭಾವಿಸುತ್ತೇನೆ. ಇದಕ್ಕೆ 'ಮನವಾಳಮಾಮುನಿ'ಗಳ 'ಉಪದೇಶ ರತ್ತಿನಮಾಲೆ'ಯ ಪಾಶುರವು ಆಧಾರ

ಕೋದಿಲವಾಂ ಆಟ್ವಾರ್‌ಗಳ್ ಕೂಱುಕಲೈಕ್ಕೆಲ್ಲಾಂ
ಆದಿತಿರುಪಲ್ಲಾಂಡಾನದುವುಂ ವೇದತ್ತುಕ್ಕು
ಓಮೆನ್‌ಱುಮದು ಪೋಲ್ ಉಳ್ಳದಕ್ಕೆಲ್ಲಾಂಶುರುಕ್ಕಾಯ್
ತ್ತಾನ್ ಮಂಗಳ ಮಾದಲಾಲ್

ಎಂದರೆ

ಕುಂದಿಲ್ಲದಾಳ್ವಾರ್ ಪ್ರಬಂಧಗಳಿಗೆಲ್ಲ ಮೊದ
ಲೆಂದು ತಿರುಪ್ಪಲ್ಲಾಂಡು ಸಲಿಸಂದು ದೆಂತೆನಲು
ವೇದ ಕೋಟಿ ಎಂತಂತೆ ಪಲ್ಲಾಂಡು ತಾ ದ್ರವಿಡ
ವೇದಕೆಲ್ಲಡಕ ಮಂಗಳವು ತಾನಾಯ್ತು

(ಡಾ. ವಿನೋದಾ ಅವರ ಉಪದೇಶ ರತ್ತಿನ ಮಾಲೈ ಪುಸ್ತಕದಿಂದ)

ಆದ್ದರಿಂದ ಆದಿಸ್ತುತಿಯಾದ ಪಲ್ಲಾಂಡ್‌ನಿಂದ ಆಳ್ವಾರುಲ ಮಂಗಳಾಶಾಸನ ಪಾಶುರಮುಲು ಪ್ರಾರಂಭಗೊಂಡಿರಬೇಕೆನ್ನಿಸುತ್ತದೆ.

ಇದೇ ರೀತಿ 'ತಿರುಪ್ಪಾವೈ' ನಲ್ಲೂ ವಾಚ್ಯವಾಗಿ ವೇಂಗಡದೊಡೆಯುನನ್ನು ಆಂಡಾಳ್ ಹಾಡಿಲ್ಲದಿದ್ದರೂ ಅಲ್ಲಿನ ವರ್ಣನೆಗಳು ಸೂಚ್ಯವಾಗಿ (ಆ ಪಾಶುರಗಳಲ್ಲಿ) ಅವನನ್ನೇ ಕುರಿತದ್ದು ಎಂಬುದಾಗಿ ವ್ಯಾಖ್ಯಾನ ಮಾಡಿ 'ಆಳ್ವಾರುಲ ಮಂಗಳಾ ಶಾಸನ ಪಾಶುರಮುಲು'ವಿನಲ್ಲಿ 'ವಂಗಕ್ಕಡಲ್ ಕಡೈಂದ' ಪಾಶುರದಲ್ಲಿ ಬರುವ ಮಂಗಳಾಶಾಸನವನ್ನು ವೇಂಗಡನಾಥನದೇ ಎಂದು ಹೇಳಿರುತ್ತಾರೆ. ಇದು 'ತಿರುಪ್ಪಾವೈ'ನ ಫಲಶ್ರುತಿಯ ಪಾಶುರ. 'ವಂಗಕ್ಕಡಲ್ ಕಡೈಂದ ಮಾಧವನ್ನೈ' ಎಂದೂ 'ಈರಿರಂಡು ಮಾಲ್ವರೈತ್ತೋಳ್ ಶೆಂಗಣ್ ತಿರುಮುಗತ್ತುಚ್ಚೆಲ್ವ ತ್ತಿರುಮಾಲಾಲ್' ಎಂಬುದಾಗಿ ಶ್ರೀನಿವಾಸನನ್ನೇ ವರ್ಣಿಸಿ ಆ ವಾತ್ಸಲ್ಯ ಜಲಧಿಯ 'ತಿರುವರುಳ್‌ಪೆತ್ತು ಇನ್ಬುರುವರ್' ಎನ್ನುವ ಸರ್ವತೋಮುಖವಾದ ದಿವ್ಯ ಕೃಪೆ ಯನ್ನು ಎಲ್ಲರೂ ಹೊಂದಲೆಂಬುದಾಗಿ ಪ್ರಬಂಧದಲ್ಲಿ ಹಾಡಲ್ಪಟ್ಟಿರುವ ವಿಧಾನ. ಶ್ರೀ ಮಹಾಲಕ್ಷ್ಮಿಯ ಮೂಲಕ ಪರಮಾತ್ಮನ ಕೃಪೆ ಜೀವರಿಗೆ ಲಭಿಸುವ ಕಾರಣ ಈ ಮಹಾಲಕ್ಷ್ಮಿಯ ಸಂಬಂಧೋಪಜ್ಞತನವನ್ನು 'ಮಾಧವನ್ನೈ' (ಮಾ + ಧವ) ಎಂಬುದಾಗಿಯೂ ವಿರೋಧಿನಿರಸನವು ತಿಳಿಯಲ್ಪಡಬೇಕೆಂಬುದಾಗಿ (ಪರಮಾತ್ಮನ ಕೈಂಕರ್ಯಕ್ಕೆ ಏರ್ಪಡುವ ವಿರೋಧವನ್ನು) 'ಕೇಶವನ್ನೈ' ಎಂಬುದಾಗಿಯೂ ಆಂಡಾಳ್ ಈ ಪಾಶುರದಲ್ಲಿ ವಿವರಿಸಿದ್ದಾಳಂತೆ. ಈ ರೀತಿ ಚೇತನರ ಸರ್ವಪಾಪಗಳನ್ನು ದಹಿಸುವವನೂ, ಸರ್ವಾಭೀಷ್ಟವನ್ನೂ ದಯಪಾಲಿಸುವವನೂ (ವೇಂಕಟ ಎನ್ನುವ ಪದದ ಅರ್ಥವನ್ನೂ ಹಿಂದೆ ವಿವರಿಸಿರುವುದನ್ನು ಗಮನಿಸಿ) ಆ ಶ್ರೀನಿವಾಸನೇ ತಾನೆ! ಈ ರೀತಿ ಮೊದಲಿನಿಂದಲೂ ತಿರುಪ್ಪಾವೈ ಅಲ್ಲಿ ಪರಮಾತ್ಮನ ಹಲವು ಅವತಾರ ಗಳನ್ನೂ ವರ್ಣಿಸಿ ಕಡೆಗೆ ಶ್ರೀನಿವಾಸನ ದಿವ್ಯ ಅವತಾರದೊಂದಿಗೆ ಮಂಗಳಾಶಾಸನ ಮಾಡಲ್ಪಟ್ಟಿದೆ. 'ಈರಿರಂಡು ಮಾಲ್ವರೈತ್ತೋಳ್' ಎನ್ನುವ ಸ್ಥಾನದಲ್ಲೂ ಈ ವಿಶೇಷಣವು ಶ್ರೀನಿವಾಸನಿಗೇ ಎಂಬುದಾಗಿ ವಿಶದೀಕರಿಸುತ್ತಾರೆ. ಶಂಖ ಚಕ್ರಾಲಂಕೃತವಾದ ಊರ್ಧ್ವ ಹಸ್ತದಿಂದಲೂ ಕಟಿತಟ ಸಂಘಟಿತವಾದ ಸ್ವಪಾದ ಕಮಲ ಸಂದರ್ಶಕವಾದ ಮುದ್ರಾಲಂಕೃತಗೊಂಡ ಇತರ ಹಸ್ತದ್ವಯುಗಳಿಂದಲೂ ಕೂಡಿದ ವೇಂಕಟಾಚಲಪತಿ ವಿಗ್ರಹವನ್ನೇ ವಿವರಿಸುತ್ತದೆ. ಇವಕ್ಕಿಂತ ವಿಶೇಷ

ವಾದ ಅಂಶವೇನೆಂದರೆ ಈ ಪಾಶುರದಲ್ಲಿ ಬರುವ "ಶೆಲ್ವತ್ತಿರುವಾಲಾಲ್" ಎನ್ನುವುದು ಶ್ರೀನಿವಾಸನ ದಿವ್ಯ ಕೃಪೆ ಎಂದೇ ಅರ್ಥ. ಅದು ವಾಧವನ್ನೈ ಎನ್ನುವ ಪದಕ್ಕೆ ಶೆಲ್ವ ಎನ್ನುವ ಮತ್ತೊಂದು ವಿಶೇಷಣ. ದಿವ್ಯ ಸಂಪದ, ದಿವ್ಯ ಕಲ್ಯಾಣ, ಸಂಪತ್ಸುಖದಿಂದ ಕೂಡಿದ ಶ್ರೀನಿವಾಸನನ್ನೇ ಹಾಡುತ್ತದೆ ಎಂದು ಅರ್ಥ. ಇದರಿಂದಲೇ ತಿರುಪ್ಪಾವೈನ ನಿಗಮನ ಪಾಶುರವೆನಿಸುವ 'ವಂಗಕ್ಕಡಲ್ ಕಡೈಂದ' ಮಾತ್ರವೇ ಅಲ್ಲದೆ ಇಡೀ 'ತಿರುಪ್ಪಾವೈ' ಕೂಡಾ ತಿರುವೇಂಗಡ ಮುಡಿಯಾನ್‌ಗೇ ಮಂಗಳಾಶಾಸನವೆಂದು ಹಿರಿಯರು ತೀರ್ಮಾನಿಸಿ ತಿರುಪ್ಪಾವೈನ ಪ್ರಶಂಸಾ ಪಾಶುರ (ತನಿಯನ್‌ನಲ್ಲಿ)ದಲ್ಲಿ

ಶೂಡಿಕ್ಕುಡುತ್ತ ಶುಡರ್‌ಕೊಡಿಯೇ ತೊಲ್‌ಪಾವೈ
ಪಾಡಿಯರುಳ ವಲ್ಲಪಲ್‌ವಳೆಯಾಯ್ – ನಾಡಿನೀ
**'ವೇಂಗಡವರ್ಕ್ಕ ಎನ್ನೈವಿಧಿ'** ಎನ್ನ ವಿಮ್ಮಾಟ್ರಂ
ನಾಂ ಕಡವಾ ವಣ್ಣಮೇನಲ್‌ಕು

ಎಂದು ಪ್ರಮಾಣೀಕರಿಸಿದ್ದಾರೆ.

ಇದೇ ರೀತಿ ನಮ್ಮಾಳ್ವಾರ್‌ರವರ 'ತಿರುವಾಯ್ಮೊಳಿ'ಯನ್ನೂ ಇಡೀ ಪ್ರಬಂಧವು ವೇಂಗಡದವನನ್ನು ಕುರಿತೇ ಹಾಡಲ್ಪಟ್ಟಿರುವುದು ಎನ್ನುವ ಪಂಥವೂ ಇಲ್ಲದೇ ಇಲ್ಲ. ಈ ವಾದವನ್ನೇ ಮುಂದಿಟ್ಟುಕೊಂಡು ಮತ್ತೆ ಕೆಲವರು ತಿರುವಾಯ್ಮೊಳಿಯು ಶ್ರೀರಂಗದ ರಂಗನಾಥನನ್ನು ಕುರಿತದ್ದು, ಕಂಚೀ ವರದ ರಾಜನನ್ನು ಕುರಿತದ್ದು, ಮೇಲುಕೋಟೆಯ ತಿರುನಾರಾಯಣನನ್ನೂ ಕುರಿತದ್ದು ಎಂದು ಹೇಳುವಂತೆಯೇ, ತಿರುಮಲೆಯ ಒಡೆಯನಿಗೆ ಅಂಕಿತವಾದದ್ದು ಎಂದೂ ವಾದಿಸುತ್ತಾರೆ. ಇದಕ್ಕೆ ಪ್ರಮಾಣ ಪದ್ಯ ಈ ಕೆಳಗಿನದು

ತಿಲದಮುಲಹುಕ್ಕಾನ ತಿರುವೇಂಗಡತ್ತಾನೈ
ಅಲಹಿಲ್‌ಪುಗಳಂದಾದಿಯಾಯಿರಮುಂ
ಉಲಹಿಲುರೈತ್ತಾನ್ ಶಡಗೋಪನ್ – ಉತ್ತಮರ್‌ಗಳ್‌ನೆಂಜಿಲ್
ವಿರಿತ್ತಾನ್ ಪೆರಂಬೂರ್‌ವೇಂದು

ಈ ರೀತಿ ಅರ್ಥ ಮಾಡುತ್ತಾ ಹೋದರೆ ಶ್ರೀನಿವಾಸನು ವಿಷ್ಣುರೂಪ. ಆದ್ದರಿಂದ ನಾಲ್ಕು ಸಾವಿರ ಪಾಶುರಗಳೂ ಶ್ರೀನಿವಾಸನದೇ ಎಂದು ಹೇಳಬಹುದು. ಹೇಳಿದರೂ ತಪ್ಪಿಲ್ಲ. ಇದೇ ರೀತಿ ಪೆರಿಯಾಳ್ವಾರ್ ಅವರ ಶೆನ್ನಿಯೋಂಗು ಎಂಬ ದಶಕದ ಪ್ರಾರಂಭ ಪದ್ಯಕ್ಕೂ ಹಿಂದೆ ನಾವು ವಿವರಣೆ ನೀಡಿದ್ದೇವೆ. ಆದರೆ ನಾವು ವೇಂಗಡದೊಡೆಯನನ್ನು ವಾಚ್ಯವಾಗಿ ಹೇಳಿರತಕ್ಕ ಪಾಶುರಗಳಷ್ಟನ್ನೇ ನಮ್ಮ

ದೃಷ್ಟಿಗೆ ಸೀಮಿತಗೊಳಿಸಿ ಅಧ್ಯಯನ ಮಾಡಬೇಕೆಂದು ಅಭಿಪ್ರಾಯಪಡುತ್ತೇನೆ. ಆದ್ದರಿಂದ ತಿರುವಾಯ್ಮೊಳಿಯಲ್ಲಿ ಬರುವ ೫೫ ಪಾಶುರಗಳಿಗೇ ನಮ್ಮ ದೃಷ್ಟಿಯನ್ನು ಪರಿಮಿತಿಗೊಳಿಸಿ ಅಧ್ಯಯನ ಮಾಡಬೇಕಾಗಿದೆ. ಈ ದೃಷ್ಟಿಯಿಂದಲೇ ಪಲ್ಲಾಂಡ್, ತಿರುಪ್ಪಾವೈಯನ್ನು ನಮ್ಮ ಪ್ರಬಂಧಕ್ಕೆ ವಸ್ತುವಾಗಿ ಆರಿಸಿಲ್ಲದಿರುವುದು.

ನಮ್ಮಾಳ್ವಾರ್ ಅವರ 'ತಿರುವಿರುತ್ತಂ' ಒಂದು ಅದ್ಭುತವಾದ ಶೃಂಗಾರಕಾವ್ಯವೆಂಬುದಾಗಿ ಪರಿಗಣಿಸಲ್ಪಟ್ಟಿದೆ. ತಿರು ಎಂದರೆ ಶ್ರೇಷ್ಠವಾದ, ವಿರುತ್ತಂ ಎಂದರೆ ಛಂದಸ್ಸು ಎಂಬುವುದು ಒಂದು ಸಾಮಾನ್ಯಾರ್ಥವಾದರೆ, ಸಂಘಟನೆ, ವಾರ್ತೆ, ವೃತ್ತ, ಸಂದೇಶ ಎಂಬುದಾಗಿ ಮತ್ತೊಂದು ಅರ್ಥವೆನಿಸಲ್ಪಡುತ್ತದೆ. ಕಾವ್ಯ ವಸ್ತು ಈ ಎರಡನೇ ಅರ್ಥವನ್ನು ಪ್ರಸ್ತುತಗೊಳಿಸುತ್ತದೆ. ಆಂಧ್ರಪ್ರದೇಶದ ಕೃಷ್ಣಾ ಜಿಲ್ಲೆಯ ಮುಸುನೂರಿನ ಶ್ರೀ ಗೋದಾ ಗ್ರಂಥಮಾಲೆಯವರ ಕುಸುಮವಾದ "ತಿರುವಿರುತ್ತಮು" "ಅನುಶ್ರೀ ಶಠಾರಿ ಸೂಕ್ತಿಸುಧಾ" ಎನ್ನುವ ತೆಲುಗು ಪುಸ್ತಕದಲ್ಲಿ ಇದನ್ನೇ ಗ್ರಂಥಕರ್ತರು ಒತ್ತಿ ನುಡಿದಿದ್ದಾರೆ. ಇದು ಸಮಂಜಸವಾದ ವ್ಯಾಖ್ಯಾನ ಎಂದು ತಿಳಿಯುತ್ತೇನೆ. ಇದರಲ್ಲಿ ಸಂಘಟನೆಯಿದೆ, ಒಂದು ವೃತ್ತಾಂತವಿದೆ, ಸಂದೇಶವನ್ನೂ ಕಳುಹಿಸುವ ಕಥನವಿದೆ. ಇದು ರೂಪಕ ಪದ್ಧತಿಯಲ್ಲಿ ಬರೆಯಲ್ಪಟ್ಟ ಶ್ರವ್ಯಕಾವ್ಯವೆಂಬುದಾಗಿ ಅವರು ವಿವರಿಸುತ್ತಾರೆ. ಇದರಲ್ಲಿ ನಾಟಕ ರೂಪಕ್ಕೆ ಅಳವಡಿಸಲೋಸುಗ ಕೆಲವು ಪಾತ್ರಗಳು ಬಳಸಲ್ಪಟ್ಟು ಅವುಗಳ ಸಂಭಾಷಣೆಯ ಮೂಲಕವೇ ನಾಟಕವು ಮುಂದುವರಿಯುತ್ತದೆ. ಪಾತ್ರಗಳ ಸಂಭಾಷಣೆಗಳಿಲ್ಲ; ಆದರೆ ಪಾತ್ರಗಳ ಹೇಳಿಕೆ ಇದೆ. ಈ ಹೇಳಿಕೆಗಳೂ ಒಂದಾದ ಮೇಲೆ ಮತ್ತೊಂದು ಬರುವುದರಿಂದ ಇದು ಸಂಭಾಷಣೆಯಂತೆಯೇ ನಾಟಕ ಮುಂದುವರಿಯುವ ಪರಿಣಾಮ ಬೀರುತ್ತದೆ. ಇದೊಂದು ಚಮತ್ಕಾರಿಕವಾದ ಕಾವ್ಯ ಸಂವಿಧಾನ. ಇದರ ಕವಿ ಚತುರನಿರಬೇಕು. ಹೇಳಿಕೆಗಳ ಮೂಲಕವೇ ನಾಟಕ ಮುಂದುವರಿಯುವ ಕಲೆ ಉತ್ತಮ ಮನೋಧರ್ಮದ್ದು. ಇದರಲ್ಲಿನ ಪಾತ್ರಗಳೂ ಕೂಡ ವಿಶುದ್ಧವಾದದ್ದು, ಭಗವತ್ಕಾಮಪ್ರವಿಷ್ಟವಾದದ್ದು. ಸ್ತ್ರೀ ಪುರುಷರ ಮಧ್ಯೆ ಇರುವ ಪ್ರೇಮ ವಿಶೇಷವೇ ಕಾಮ. ಆದರೆ ಜೀವಾತ್ಮ ಪರಮಾತ್ಮರ ಮಧ್ಯೆ ಇದು ಬೆಳೆದಾಗ ಭಗವತ್ಕಾಮ ಎಂದು ಭಾವಿಸಲ್ಪಡುತ್ತದೆ. "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಎನ್ನುವಂತೆ ಪರಮಾತ್ಮನೇ ಆ ಪುರುಷ. 'ಸ್ತ್ರೀಪ್ರಾಯಮಿತರಂಜಗತ್' ಎನ್ನುವಂತೆ ಈ ಪ್ರಪಂಚದ ಜಂತುಜಾಲವೆಲ್ಲಾ ಸ್ತ್ರೀಯರೇ ! ಈ ನ್ಯಾಯದ ಪ್ರಕಾರ ನಮ್ಮಾಳ್ವಾರ್ ಕೂಡಾ ಸ್ತ್ರೀಯೇ ! ಈ ಕವಿ – ಎಂದರೆ ನಮ್ಮಾಳ್ವಾರ್ – ಈ ಕೃತಿಯಲ್ಲಿ ಒಂದು ಕಡೆ ತಮ್ಮನ್ನು ನಾಯಕಿಯಾಗಿಯೂ, ಮತ್ತೊಮ್ಮೆ ನಾಯಕಿಯ ಸಖಿಯಾಗಿಯೂ

ಮಗದೊಮ್ಮೆ ನಾಯಕಿಯ ತಾಯಿಯಾಗಿಯೂ ಭಾವಿಸಿಕೊಂಡು ಅವರವರ ಅವಸ್ಥಾಂತರದ ಹೇಳಿಕೆಯ ಮೂಲಕ ಅಥವಾ ನಿರೂಪಣೆಯ ಮೂಲಕ ಈ ರೂಪಕವನ್ನು ಮುಂದುವರೆಸುವ ಕಾವ್ಯಚಾತುರ್ಯವನ್ನು ಪ್ರದರ್ಶಿಸುತ್ತಾರೆ. ನಾಯಕಿಯ ಸಖಿಯೂ, ನಾಯಕಿಯ ತಾಯಿಯೂ ಹೇಳುವ ಹೇಳಿಕೆ ನಾಯಕಿಯನ್ನು ಕುರಿತದ್ದೇ, ನಾಯಕಿಯ ಮಾತು ನಾಯಕನನ್ನು ಕುರಿತದ್ದೇ. ಹೀಗಾಗಿ ನಾಯಕನೇ, ಅವನ ಕಾರ್ಯವೇ ಎಲ್ಲರ ಮಾತಿನಲ್ಲೂ ವ್ಯಕ್ತಗೊಳ್ಳುತ್ತದೆ. ಇವರು ತಮ್ಮ ಪ್ರಿಯತಮನಲ್ಲಿ ಪ್ರದರ್ಶಿಸುವ ಕಾಮೋತ್ಕಂಠ ಭಾವ – ಸ್ತ್ರೀ ಪುರುಷರ ಮೂಲಕ ಈ ಲೋಕದ ದೃಷ್ಟಿಯಿಂದ ಸಾಮಾನ್ಯ ಕಾಮಕ್ಕಿಂತ ಎಲ್ಲ ರೀತಿಯಿಂದಲೂ ಭಿನ್ನಗೊಂಡದ್ದು. ಇದರಲ್ಲಿ ಅನುಭವವಿದೆ, ತಪಸ್ಯೆ ಇದೆ, ಸ್ತೋತ್ರವಿದೆ, ಆತ್ಮನಿವೇದನೆ ಇದೆ, ಆತ್ಮಾರ್ಪಣೆಯಿದೆ. ಇದನ್ನೇ ಶ್ರೀವೈಷ್ಣವರ ದೇವನನ್ನು ಕುರಿತ ಭಕ್ತನ ಪ್ರಪತ್ತಿಮಾರ್ಗ ಎಂಬುದಾಗಿ ವ್ಯಾಖ್ಯಾನಿಸುತ್ತಾರೆ. ಈ ಕೃತಿಯಲ್ಲಿ ಬರುವ ವಿರಹದ ವರ್ಣನೆ ಮಜಲು ಮಜಲಾಗಿ ಮುಂದುವರೆಯುತ್ತಾ ಅದರ ಔನ್ನತ್ಯವನ್ನು ತಲಪುವ ರೀತಿ ಅದ್ಭುತ. ಆ ವಿರಹದಲ್ಲೇ ಪರಮಾತ್ಮನ ನಿಂದನೆ ಇದೆ, ಪ್ರಶಂಸೆ ಇದೆ, ಮಹಿಮೆ ಇದೆ, ಭಕ್ತಿ ಇದೆ, ಮುಕ್ತಿ ಇದೆ, ಆಸಕ್ತಿ ಇದೆ !

ಪ್ರಕೃತದಲ್ಲಿ ಈ ನೂರು ಪಾಶುರಗಳಲ್ಲಿ ೮ ಪಾಶುರಗಳಲ್ಲಿ ಮಾತ್ರ ವೇಂಗಡದ ವಿಷಯವಿದ್ದು ನಮ್ಮಾಳ್ವಾರ್ (ಪರಾಂಕುಶ ನಾಯಿಕೆಯ)ರ ವಿರಹೋದ್ವೇಗವು ತಿರುವೇಂಗಡದ ಒಡೆಯನ ಮೇಲೆ ಹೇಗೆ ಹೊರಹೊಮ್ಮುತ್ತದೆ ಎಂಬುದರ ಅರಿವಾಗುತ್ತದೆ. ಈ ವಿಲಕ್ಷಣ ಮಂಗಳಾಶಾಸನವು ನಮ್ಮ ಚಿತ್ತವನ್ನು ಅಪಹರಿಸದೇ ಇರದು. ಇಲ್ಲಿಯವರೆಗೂ ನಾವು ಅವಲೋಕಿಸಿದ ಕಾವ್ಯಮಾರ್ಗ, ಕಾವ್ಯವಸ್ತು, ಶೈಲಿ ಇವುಗಳಿಗಿಂತ ಭಿನ್ನವಾಗಿದ್ದು ಇದೇ ಪ್ರತ್ಯೇಕವಾಗಿ ನಿಲ್ಲುತ್ತದೆ. ನಾವೀಗ ಹೊಸ ಸ್ತರ, ಹೊಸ ಪ್ರಪಂಚಕ್ಕೆ ಕಾಲಿಡುತ್ತೇವೆ. ಈ ಹಿಂದೆ ಆಳ್ವಾರ್ ತಿರುವಂದಾದಿಗಳಲ್ಲಿ ಮುಕ್ತಕಗಳ ರೀತಿ ಅಲ್ಲೊಮ್ಮೆ ಇಲ್ಲೊಮ್ಮೆ ಈ ನಾಯಕೀಭಾವ ಮಿಂಚಿತ್ತು. ಆದರೆ ಅದರ ರೀತಿ ಬೇರೆ, ಇಲ್ಲಿನ ಎಂಟು ಪಾಶುರಗಳದ್ದೇ ಭಿನ್ನ ರೀತಿಯದು. ಇದು ನಮ್ಮಾಳ್ವಾರ್ ಅವರದೇ ವೈಶಿಷ್ಟ್ಯಮಯವಾದ ಶೈಲಿ – "ಗಗನಂಗಗನಾಕಾರಂ" ಎನ್ನುವಂತೆ !

ಇದನ್ನೇ ಶ್ರೀಮತಿ ಪ್ರೇಮ ನಂದಕುಮಾರ್ ಎನ್ನುವವರು ತಮ್ಮ Nammlawar's "Tiruviruttam" The Drama of the Love Divine ನ Introduction ನಲ್ಲಿ ಈ ಕೆಳಕಂಡಂತೆ ವಿವರಿಸುತ್ತಾರೆ. "........ Tiruviruttam is so called because of its autobiographical slat; The Vruttanta or happening that is described here is

the mystic vision of the divine vouchsafed to Nammalwar. The opening verse underlines the 'all pervading' nature of the Divine, the Lord who manifests as everything on this earth. It is to this Lord who 'suffered' as one of us that we have to pray to redeem us from 'false knowledge, wrong conduct, body of dirt'. However, our prayers must be as the flame of aspiration symbolised by the heroine of 'Tiruviruttam'. The heroine is the 'Jiva', our soul struggling to reach the Divine and it is seen to go through the different mystical states, such as aspiration, the dark night of the soul, yearning, prostration and the vision. The inner drama of the Divine is conched in the vestments of a young girl's love - lorn state. She yearns for her beloved; her servant acts as an ambassador and her mother gives the necessary help for the meeting to take place. The different psychic moods are projected with the help of nature imagery. The blandishments of 'Samsara' that torture the soul seeking the Divine are symbolised by the many - pronged attack of Nature on the girl in love. However no where are we left in doubt about Nammalwar's intention, which is really a tryst with the Divine. Almost every verse carries reference to the Lord. We absorb the 'all - pervading' glorius manifestation of the Divine, as we do while reading the 'riks' in the 'Rigveda'! It is this realisation that leads us to the heaven of spiritual peace."

'ತಿರುವಿರುತ್ತಂ' ನಲ್ಲಿ ೮, ೧೦, ೧೫, ೩೧, ೬೦, ೬೭, ೮೧ – ಈ ಏಳು ಪಾಶುರಗಳಲ್ಲಿ ತಿರುವೇಂಗಡದ ವಿಷಯುವು ಬಂದಿರುವುದಾಗಿ ಶ್ರೀ ಎನ್. ಎಸ್. ಅನಂತರಂಗಾಚಾರ್ಯರು ತಮ್ಮ ಪುಸ್ತಕದಲ್ಲಿ ಹೇಳಿದ್ದಾರೆ. ಟಿ. ಟಿ. ಡಿ. ಅವರ ಪುಸ್ತಕದಲ್ಲಿ ೫೦ ನೆಯ ಪಾಶುರವೊಂದನ್ನೂ ಸೇರಿಸಿದ್ದಾರೆ. ಅಲ್ಲಿ ಬರುವ 'ಮಾಮಲೈಕ್ಕೇ' ಎನ್ನುವ ಸಂಬೋಧನೆಯುನ್ನು ವೇಂಗಡವನ್ನೇ ಕುರಿತದ್ದಾಗಿ ಅರ್ಥ ಮಾಡುತ್ತಾರೆ.

"ಇಷ್ಟು ದಿವಸಗಳು ನೋಡಿದ್ದು; ಕೇಳಿದ್ದು ತಿಳಿದಿದ್ದು ಎಲ್ಲಾ ಸುಳ್ಳಾಯಿತು! ಅವನು ಸಂಪೂರ್ಣ ಹೃದಯುವಿಹೀನನೆಂದು ಕಾಣುತ್ತದೆ. ಎಲ್ಲವೂ ಬರಿಯು

ನಟನೆ, ಸೋಗುಗಳು. ಪರ್ವತವನ್ನು ಎತ್ತಿದ ಕೃಷ್ಣನು ಈಗ ನಿತ್ಯಸೂರಿಗಳು ಆಶ್ರಯಿಸುವಂತಹ, ಎತ್ತರವಾದ ವೇಂಗಡದ ಶಿಖರವನ್ನು ವಾಸಸ್ಥಾನವನ್ನಾಗಿ ಮಾಡಿಕೊಂಡು ನಮ್ಮಂತಹವರಿಗೆ ದುರ್ಲಭನಾಗಿದ್ದಾನೆ. ಅವನನ್ನು ಹೊಂದಬೇಕೆಂದಿದ್ದ ನಮ್ಮ ಆಸೆ ಆಕಾಂಕ್ಷೆಗಳೆಲ್ಲ ಮೃಗಮರೀಚಿಕೆಯಂತೆಯೇ ಆಯಿತು. ವೇಂಗಡದ ಬೆಟ್ಟವು ಎಷ್ಟು ಕಠಿಣವೋ, ಅವನ ಮನಸ್ಸೂ ಕೂಡಾ ಅಷ್ಟೇ ಕಠಿಣವಾಯಿತಲ್ಲ! ಅಯ್ಯೋ (೮) ಆಶ್ಚರ್ಯಗುಣಚೇಷ್ಟಿತನಾದ ಸರ್ವೇಶ್ವರನಿರುವ ಬಡಗು ವೇಂಗಡದ ಮೇಲಿರುವ ಲತಾತನ್ವಿಯರೇ ! ನನ್ನ ದುಃಖ, ಅಳಲನ್ನು ಯಾರಿಗೆ ನಾನು ಹೇಳಿಕೊಳ್ಳಲಿ ? ನೀವಾದರೂ ಕೇಳಕೂಡದೆ ? ನನಗೆ ಹುಚ್ಚಾಗಿರುವುದು ಆ ಇನಿದಾದ ಧ್ವನಿಸಂಪತ್ತೋ, ತೊಂಡೇಹಣ್ಣಿನಂತಹ ಪಕ್ವಬಿಂಬೋಷ್ಠವೋ ತಿಳಿಯದಲ್ಲಾ, ಅಯ್ಯೋ ! (೧೦) ಸಖಿಯು ಒಂದಷನನ್ನು ಗದರಿಸಿಕೊಳ್ಳುತ್ತಾಳೆ. "ಆನೆಯನ್ನು ಹುಡುಕಿಕೊಂಡು ಬಂದಯಲ್ಲವೆ ಬೇಟೆಗಾರನೇ ! ಅದು ಸಿಕ್ಕದೇ ಹೋಗಲು ನಮ್ಮ ಯಜಮಾನಿ ಯನ್ನೇ ನೋಡುತ್ತ ನಿಂತುಬಿಟ್ಟೆಯಲ್ಲಾ ! ನಿನಗೆ ನಾಚಿಕೆ ಇಲ್ಲವೇನು ? ನಮ್ಮ ಯಜಮಾನಿಯು ಕಣ್ಣನ್ನೇ ನೋಡುತ್ತಾ ಅದು ಮೀನೆಂದು ಭ್ರಮಿಸಿ ಹೊಗಳಲಾರಂಭಿಸಿದೆ ! ಇದೇನು ನಿನ್ನ ವಿಪರೀತ ವರ್ತನೆ ! ನೋಡಿದವರು ಏನೆಂದು ಕೊಂಡಾರು ? ಸಪ್ತ ಸಾಗರದ ನೀರನ್ನೆಲ್ಲಾ ಆಪೋಶನವನ್ನಾಗಿ ಮಾಡಿಕೊಂಡು ಕುಡಿದವನ ಕಾಲಮೇಘದಂತಹ ಮೈಕಾಂತಿಯುಳ್ಳ ವೇಂಗಡದೊಡೆಯನು ವಿಹರಿಸುವ ಹರ್ಮ್ಯದ ಹಿಂದಿನ ಹಿತ್ತಲಲ್ಲಿ ಅವನೇನಾದರೂ ಅಪ್ಪಿ ತಪ್ಪಿ ಯಾರಾರೂ ಕಾಣಿಸಿಕೊಳ್ಳುವನೋ ಎಂದು ಕಾದು ಕಾದು ಬೇಸತ್ತೆವು, ನಾನೂ ನನ್ನ ಸಖಿಯೂ ಕೂಡ. ಅವಳಂತೂ ನಿರಾಶಳಾಗಿ ಕಂಗೆಟ್ಟಳು. ಆಗ ಸ್ವಲ್ಪವೂ ಅವಳನ್ನು ಲಕ್ಷಿಸಲೇ ಇಲ್ಲ. ಅವಳಿಗಾದ ನಿರಾಶೆಯನ್ನೂ ಗಣಿಸಲಿಲ್ಲ. ಈಗ ಮಾತ್ರ ಏನೂ ತಿಳಿಯದವನಂತೆ ಇಲ್ಲಿಗೆ ಬಂದು ಅವಳ ಸೌಂದರ್ಯವನ್ನು ವರ್ಣಿಸಿ ಸ್ತೋತ್ರ ಮಾಡುತ್ತಿರುವೆ. ಹೀಗಿರುವಾಗ ನಿನ್ನ ಸಂಗಡ ಮಾತನಾಡು ವುದೂ ಸರಿಯಲ್ಲ. ಇಲ್ಲಿಂದ ಹೊರಡು, ಒಂದು ಕ್ಷಣವೂ ನಿಲ್ಲಬೇಡ ! (೧೫) ಅಂದ ವಾದ ಮುತ್ತು ರತ್ನಗಳ ಕಾಂತಿಯಿಂದ ಮೆರೆಯುವ ಶಿಖರಗಳಿಂದ ರಾರಾಜಿಸುತ್ತಿ ರುವ ವೇಂಗಡದ ಮೇಲೆ ಸಂಚರಿಸುತ್ತಿರುವ ಮೇಘಗಳೇ ! ನೀವು ಒಮ್ಮೆಯಾದರೂ ಅಲ್ಲಿರುವ ನನ್ನ ಸ್ವಾಮಿಯ ತಲೆಯ ಮೇಲೆ ಸಂಚಾರ ಮಾಡಲೇಬೇಕಲ್ಲವೇ ? ಹಾಗೆ ಸಾಗುವಾಗ ನನ್ನ ಹೃದಯವಿದ್ರಾವಕವಾದ ಸಂದೇಶವನ್ನೇಕೆ ನೀವು ಅವನಿಗೆ ತಿಳಿಸಕೂಡದು ? ನೀವು ನನ್ನ ಕೋರಿಕೆಯನ್ನು ನಡೆಸಿಯೇ ಕೊಡುವಿರೆಂಬ ಭರವಸೆ ನನಗುಂಟು. ಏತಕ್ಕೆಂದರೆ ನೀವು ನನ್ನ ತಲೆಯ ಮೇಲೆ ಸಾಗುವಾಗಲಲ್ಲವೆ ನಾನು ನಿಮ್ಮನ್ನು ಬೇಡಿಕೊಳ್ಳುತ್ತಿರುವುದು. ಎಂದರೆ ನಿಮ್ಮ ಪಾದಗಳು ನನ್ನ

ಶಿರಕ್ಕೆ ಸೋಕಿದಂತಾಗುವುದರಿಂದ ನಿಮಗೆ ನನ್ನ ಮೇಲೆ ಕರುಣೆ ಖಂಡಿತ ಉಂಟಾಗಿಯೇ ಆಗುತ್ತದೆ ಎಂದು ಭಾವಿಸಿ ಯಾಚನೆ ಮಾಡುತ್ತೇನೆ. ನನ್ನ ಈ ನೋವು ನಿಮಗೆ ಅರ್ಥವಾಗುತ್ತವೆ ತಾನೆ? ನಿಮಗೆ ಇನ್ನು ನನ್ನ ಮೇಲೆ ಮರುಕವುಂಟಾಗದೇ ಇರುತ್ತದೆಯೇ? (೩೧) ಎಲೈ ಸಾರಥಿಯೆ! ಸುಂದರವಾದ ನೊಸಲನ್ನುಳ್ಳ ನನ್ನ ನಾಯಕಿಯು ಶರೀರಕಾಂತಿಯು ಕಂದಿಹೋಗುತ್ತಿರುವುದು, ನಾನು ಆಕೆಯ ವಿರಹದಿಂದ ಕೃಶನಾಗಿಹೋಗುತ್ತಿರುವಂತೆ! ಬಿಳಿದಾದ ಮುತ್ತಿನಮಾಲೆಯಂತಹ ಜಲಪಾತಗಳಿಂದ ಕೂಡಿದ ವೇಂಗಡದಲ್ಲಿ ಅವಳು ಬಾಧೆ ಪಡುತ್ತಿದ್ದಾಳೆ. ಅವಳ ಬಳಿಗೆ ನನ್ನ ಮನೋರಥವನ್ನು ಶೀಘ್ರವಾಗಿ ಓಡಿಸು (೫೦) "ನನ್ನ ಮಗಳಿಗೆ ಸ್ತನಗಳೇ ಇನ್ನೂ ಮೂಡಿಲ್ಲ, ಮುಡಿ ದಟ್ಟವಾಗಿ ಬೆಳೆದಿಲ್ಲ, ಅವಳಿಗಿನ್ನೂ ಸೊಂಟವೇ ದಪ್ಪನಾಗಿ ಬೆಳೆದಿಲ್ಲ, ಅದರ ಮೇಲೆ ಸೀರೆಯೇ ಇನ್ನೂ ನಿಲ್ಲುವುದಿಲ್ಲ, ಅವಳ ಮಾತಿನಲ್ಲಿ ಕೂಡಾ ಇನ್ನೂ ಸ್ಪಷ್ಟತೆ ತುಂಬಿಲ್ಲ, ಬಾಲಿಶವಾಗಿಯೇ ಇದೆ. ಯೌವ್ವನ ಸಹಜವಾದ ಲಜ್ಜಾಪಕುಂಠನ ಅವಳನ್ನು ಇನ್ನೂ ಆವರಿಸಿಲ್ಲ. ಅವಳ ಕಣ್ಣುಗಳಲ್ಲಿ ಲಜ್ಜೆ ಇನ್ನೂ ಆವರಿಸಿಲ್ಲ, ಅದಿನ್ನೂ ಚಂಚಲವಾಗಿಲ್ಲ. ಹೀಗೆ ಅವಳು ಯೌವ್ವನದೆಸೆಯನ್ನು ಅಡರುವ ಮೊದಲೇ "ನನ್ನ ಸ್ವಾಮಿಯು ನೆಲಸಿರುವ ವೇಂಗಡವೇ" ಎಂದು ನಿಟ್ಟುಸಿರು ಬಿಡುತ್ತಾ ಹೇಳುವ ಈ ಮಾತಿನ ವರಸೆಯು ಅವಳಿಂದ ಹೇಗೆ ಬರುವಂತೆ ಮಾಡಿಸಿದೆ, ತಿಳಿಯುತ್ತಿಲ್ಲವಲ್ಲ" – ಎಂದು ನಾಯಕಿಯ ತಾಯಿಯು ಒಂದೇ ಗೊಂದಲದಲ್ಲಿ ಸಿಲುಕಿದ್ದಾಳೆ. (೬೦) ಅಸುರನನ್ನು ಕೊಂದು ಪಕ್ಷಿಯ ಮೇಲೆ ಕುಳಿತ ಮಾಧವ, ಗೋವಿಂದನು ಎಲ್ಲರನ್ನು ಸಲಹಲೆಂದೇ ವೇಂಗಡದ ಮೇಲೆ ನೆಲಸಿದ್ದು. ನಾಯಕಿಯು, ವಿಹಾರ ಮಾಡುವ ಹೆಣ್ಣು ಹಂಸೆಯ ಕೆಂಪು ಮತ್ತು ಕಪ್ಪು ಬಣ್ಣದ ಸುಂದರ ನೇತ್ರಯುಗ್ಮದಂತೆ, ಮೀನಲೋಚನೆಯಂತೆ ಮತ್ತು ಮೊಲದಂತೆ ಕಣ್ಣುಗಳನ್ನುಳ್ಳವಳು, ಈಟಿಯಂತೆ ಚುಚ್ಚುವ ತೀಕ್ಷ್ಣದೃಷ್ಟಿಯಿಂದ ಕೂಡಿದವಳು. ಆದರೂ ಸಹ ನನ್ನ ನಾಯಕಿಯು ಸೊಬಗಿನಿಂದ ಅವನು ಕದಲದೇ ಹೋದನಲ್ಲ! ಅವಳ ದೃಷ್ಟಿ ಅವನನ್ನು ವಶಪಡಿಸಿಕೊಳ್ಳಲು ಅಸಮರ್ಥವಾಯಿತಲ್ಲ! (೬೭) ಈ ಪರಾಂಕುಶ ನಾಯಕಿಯ ಪ್ರಾಣವು, ವಿರಹಾಗ್ನಿಯಿಂದ ಸುತ್ತಲೂ ಆವರಿಸಲ್ಪಟ್ಟು ಅದರಿಂದ ಶರೀರವು ದಗ್ಧವಾಗಿ ಕೃಶವಾಗುತ್ತಿರುವುದಲ್ಲಾ! ಈ ಬಾಧೆಗೆ ಕಾರಣವನ್ನು ಅರಿತುಕೊಂಡು ಅದನ್ನು ಶಮನಗೈಯ್ಯಲು, ಅವಳನ್ನು ನವಮಾಸಗರ್ಭದಲ್ಲಿ ಹೊತ್ತು ಹೆತ್ತು ಸಲಹಿದ ಈ ಬಡ ತಾಯಿಗೂ ಅರ್ಥವಾಗುತ್ತಿಲ್ಲ. ಅದಕ್ಕೆ ವಿರುದ್ಧವಾಗಿ ಆಕೆ ಯಾವ ಯಾವುದೋ ಮಾಟ ಮಂತ್ರಗಳನ್ನು ಮಾಡಲು ತೊಡಗಿದ್ದಾಳೆ. ಅವಳಿಗೆ ಮಗಳ ವಿರಹ ಬಾಧೆಯು ಕಿಂಚಿತ್ತಾದರೂ ಅರಿವಾಗುತ್ತಿದ್ದರೆ ಈ ಕೆಲಸಗಳನ್ನು ಕೈಗೊಳ್ಳುವ ಬದಲು ಅವಳ

ಹೆರಳಿಗೆ ವೇಂಗಡನಾಥನು ಧರಿಸಿದ್ದ ತುಳಸಿಯನ್ನಾದರೂ ಮುಡಿಸಿದರೆ ನೆಮ್ಮದಿ ತಾನಾಗಿಯೇ ಏರ್ಪಡುವುದು; ಆಕೆ ಹಂಬಲಿಸುವ ವೇಂಗಡಕ್ಕಾದರೂ ಆಕೆಯನ್ನೊಮ್ಮೆ ಕರೆದೊಯ್ದರೆ ಅವಳಿಗೆ ಚೈತನ್ಯವು ತಾನಾಗಿಯೇ ಬರುವುದು. ಹಾಗೆ ಮಾಡದೆ ಆಕೆಯನ್ನು ಮತ್ತೂ ಬಳಲಿಸುತ್ತಿದ್ದಾಳೆ, ಕಠಿಣಚಿತ್ತಳು. ಮಗಳ ಮನಸ್ಸನ್ನು ಅರಿತುಕೊಳ್ಳಲಾರದವಳು ಎಂತಹ ಹಿತಚಿಂತಕಳಾದಾಳು? ನಿಜವಾಗಿಯೂ ಕಠಿಣಚಿತ್ತಳೇ. (೮೧)

ವರ್ಣನೆಯಲ್ಲಿ ಮೆಟ್ಟಿಲು ಮೆಟ್ಟಿಲಾಗಿ ನಾಯಕಿಯ ವಿರಹಾವಸ್ಥೆ ಉನ್ನತ ಮಟ್ಟವನ್ನು ಮುಟ್ಟಿದೆ. ಇದನ್ನು ಆಳ್ವಾರ್ ಹೃದಯಂಗಮವಾಗಿ ವರ್ಣಿಸಿದ್ದಾರೆ. ನಾಯಕಿಯ ಮಾತಿನಲ್ಲಿ ವ್ಯಂಗ್ಯವಿರಬಹುದು, ನಿಂದೆ ಇರಬಹುದು, ಕೋಪ ವಿರಬಹುದು, ಕಠಿಣತನವಿರಬಹುದು, ತಾಪವಿರಬಹುದು, ನಿರಾಶೆ ಇರಬಹುದು, ಕೆಲವೊಮ್ಮೆ ದ್ವಂದ್ವವೂ ಇರಬಹುದು. ಆದರೆ ಒಂದು ಮಾತ್ರ ಸ್ಪಷ್ಟ. ನಾಯಕಿಯು ನಾಯಕನಿಗೇ ಸರ್ವದಾ ಹಂಬಲಿಸುತ್ತಿದ್ದಾಳೆ – ಜೀವಾತ್ಮವು ಪರಮಾತ್ಮಪ್ರಾಪ್ತಿಗೆ ಹಾತೊರೆಯುತ್ತಿರುವಂತೆ. ಈ ಮಾರ್ಗವೇ ಪ್ರಪತ್ತಿ ಮಾರ್ಗ. ಈಕೆಯ ಸಮಸ್ಯೆಗೆ ಉತ್ತರ ದೊರೆಯಬೇಕು. ಈಕೆಯ ತಪಸ್ಸಿಗೆ ಫಲಪ್ರಾಪ್ತಿಯಾಗಬೇಕು. ಅದೇ ಸಾಕ್ಷಾತ್ಕಾರ, ಜೀವ – ದೇವನ ಸಂಯೋಗ ಸಂಶ್ಲೇಷೆ. ಇದೊಂದು ಭಕ್ತಿಯ ಘಟ್ಟ. ನಿಂದೆಯಲ್ಲ, ನಿಜವಾದ ಕೋಪವಲ್ಲ, ಇದೂ ಒಂದು ರೀತಿಯ ನಡವಳಿಕೆ. ಇದರಿಂದಲೂ ಪರಮಾತ್ಮನು ಪ್ರೀತಿ ಗೊಳ್ಳುತ್ತಾನೆ, ಒಲಿಯುತ್ತಾನೆ. 'ತಿರುಪ್ಪಾವೈ'ನಲ್ಲಿ ಆಂಡಾಳ್ ಹೇಳುವಂತೆ ಕೃಷ್ಣನ ಜೊತೆಯಲ್ಲಿ ಗೋಪಿಯರು ವಿಹಾರ ನಡೆಸುವಾಗ ಅತೀ ಆತ್ಮೀಯತೆಯ ಭರಾಟೆಯಲ್ಲಿ ಅವನಲ್ಲಿನ ಪರಮಾತ್ಮತ್ವವಿರಲಿ, ಅವನು ತಮಗೆ ಆಶ್ರಯನೆಂಬ ಭಾವವನ್ನೂ ಮರೆತು "ಉನ್‌ತನ್ನೈಚಿರಪೇರಳಿತ್ತನವುಂ ಶೀರಿ ಅರುಳಾದೇ• ಇರೈವಾ ನೀತಾರಾಯ್ ಪರಯೇ" –– "ಜೊತೆ ಜೊತೆಯಾಗಿ ಓಡಾಡುವಾಗ ನಮ್ಮ ಮಧ್ಯೆ ನೀನೂ ಒಬ್ಬನಾಗಿದ್ದರಿಂದ ನಿನ್ನನ್ನು ಸಣ್ಣಪುಟ್ಟ ಹೆಸರುಗಳಿಂದ, ಮರ್ಯಾದೆ ಮಿಕ್ಕಿದ ಮಾತಿನಿಂದ ಕರೆದಿರಬಹುದು. ಆದರೂ ಅದನ್ನು ಗಣನೆಗೆ ತಂದುಕೊಳ್ಳದೆ ನಮ್ಮ ಇಷ್ಟಾರ್ಥಗಳನ್ನು ನಮಗೆ ಅನುಗ್ರಹಿಸು" ಎಂದು ಬೇಡಿ ಕೊಳ್ಳುವಂತೆ, ಇದೂ ಭಕ್ತಿಯ ಮಧುರ ಘಟ್ಟವೆಂದು ಅರಿತುಕೊಳ್ಳಬೇಕು. ಇದನ್ನು ಮಧುರಭಕ್ತಿ ಎನ್ನುತ್ತಾರೆ. ಇದೊಂದು ಶೃಂಗಾರ ಭಾವದಲ್ಲಿನ ಒಂದು ಸ್ತರ. ಈ ಆತ್ಮನಿವೇದನವೆಂಬುದು ನವವಿಧ ಭಕ್ತಿಯ ಒಂದು ಪ್ರಕಾರ. ಇದರ ಮೂಲಕವೇ ನಮ್ಮಾಳ್ವಾರ್ ತಿರುವಿರುತ್ತಂನಲ್ಲಿ ವೇಂಗಡದೊಡೆಯನಿಗೆ ಮಂಗಳಾಶಾಸನ ಸಲ್ಲಿಸುತ್ತಾರೆ. ನಮ್ಮಾಳ್ವಾರ್ ಈ ಪಾಶುರಗಳಲ್ಲೆಲ್ಲಾ 'ತಿರುವೇಂಗಡಂ' ಎಂಬ ಒಂದೇ ಪದವನ್ನು ಬಳಸಿರುವುದು ಗಮನಾರ್ಹವಾದ ವಿಚಾರವೇ ಸರಿ!

ತಿರುಪತಿಯ ಪ್ರಯಾಣ ಈಗ್ಗೆ ೪೫ – ೫೦ ವರ್ಷಗಳವರೆಗೂ ಪ್ರಯಾಸ ಕರವಾಗಿದ್ದಿತು. ಯಾತ್ರಿಕರು ಬೆಟ್ಟದ ಮೇಲಕ್ಕೆ ಮೆಟ್ಟಲು ಮಾರ್ಗವಾಗಿ, ಕಾಡುಹಾದಿಯ ಮಧ್ಯೆ ಸಾಗಿ ಸ್ವಾಮಿಯ ದರ್ಶನ ಪಡೆದು ತಮ್ಮ ಕಷ್ಟ ಶ್ರಮಗಳನ್ನೆಲ್ಲಾ ಮರೆತು 'ಜೀವನ ಸಾರ್ಥಕವಾಯಿ'ತೆಂಬ ತೃಪ್ತಿಯಿಂದ ವಾಪಸ್ಸು ಬರುತ್ತಿದ್ದರು. ಅದೊಂದು ಅನಿರ್ವಚನೀಯವಾದ ಆನಂದ, ಅನುಭವ, ತಪಸ್ಸು. ಈ ತಿರುವಿರುತ್ತಂನಲ್ಲಿರುವ ಎಂಟನೇ ಪಾಶುರದಲ್ಲಿ ಈ ವಿಚಾರ ಸೂಚ್ಯವಾಗಿ ಕಾಣಿಸುತ್ತದೆ. ಶ್ರಮಪಟ್ಟ ಮೇಲೆ ದೊರೆಯುವ ದೇವರ ದರ್ಶನಕ್ಕೆ ಎಂದಿಗೂ ಪ್ರಾಶಸ್ತ್ಯವಿದ್ದೇ ಇರುತ್ತದೆ !

ಈ ತಿರುವಿರುತ್ತಂ ಪಾಶುರಗಳಿಗೆ "ಆಳ್ವಾರುಲ ಮಂಗಳಾಶಾಸನ ಪಾಶುರ ಮುಲು" ನಲ್ಲಿ ಕಂಡುಬರುವ ಸ್ವಾರಸ್ಯಾಂಶಗಳು ಈ ತೆರನಾದವು.

ಭಗವದ್ವಿಶ್ಲೇಷೆಯಿಂದ ಬಾಧೆಪಡುತ್ತಿರುವ ಆಳ್ವಾರನ್ನು (ನಾಯಕಿಯನ್ನು) ಬಿಟ್ಟು ಹೋಗಲು ಮನಸ್ಸಿಲ್ಲದವರಾದ ಅವರ ಆಪ್ತರಾದ ಭಾಗವತೋತ್ತಮರು ತಿರುಮಲೆ ಮುಂತಾದ ಯಾತ್ರಾಸ್ಥಳಗಳಿಗೆ ಭಗವದ್ದರ್ಶನಲಾಭಕ್ಕೋಸುಗವಾಗಿ ತೆರಳಬೇಕೆಂಬ ಆಸೆ ಉತ್ಕಟವಾಗಲು, ಆಳ್ವಾರ್‌ರವರ ಅನುಮತಿ ತೆಗೆದುಕೊಳ್ಳಲು ಅವರ ಸಮೀಪವನ್ನು ಸೇರಿ, ಹೇಗೆ ತಮ್ಮ ಭಾವನೆಯನ್ನು ಅವರೊಡನೆ ನೇರವಾಗಿ ಪ್ರಸ್ತಾಪ ಮಾಡಬೇಕೆಂಬುದನ್ನು ತಿಳಿಯದವರಾಗಿ, ಹಾಗೆ ಪ್ರಸ್ತಾಪಿಸಿದರೆ ಅವರ ಖೇದವು ಮತ್ತೂ ಹೆಚ್ಚಬಹುದೆಂದು ಹೆದರಿ, ಕಡೆಗೂ ಈ ವಿಷಯವನ್ನು ಸುತ್ತಿ ಬಳಸಿ ಹೇಳುತ್ತಾರೆ. ಆಳ್ವಾರರೋ ಅತೀ ಚತುರರು. ಅವರು ಬಂದಾಗಲೇ ಅವರ ಇಂಗಿತವನ್ನು ಅರಿತು, ಅವರ ಮಾತಿನಿಂದ ತಮ್ಮ ಆಲೋಚನೆ ಸರಿಯೆ ಎಂಬುದನ್ನು ಕಂಡುಕೊಂಡು, 'ಆಗ ಭಗವದ್ವಿಶ್ಲೇಷೆ ಮಾತ್ರವಿದ್ದಿತು, ಈಗ ಭಾಗವತೋತ್ತಮರ ವಿಶ್ಲೇಷೆಯೂ ಆಗುತ್ತಿರುವುದ'ನ್ನು ಕಂಡು ಕಂಗೆಟ್ಟವರಾಗಿ ಅವರೊಡನೆ ನಿಷ್ಠೂರವಾಗಿಯೇ ನುಡಿಯುತ್ತಾರೆ. "ಆಹಾ ಎಂದೂ ಇಲ್ಲದ ನೈಚ್ಯಾನುಸಂಧಾನ ಮಾಡುತ್ತಾ, ಅತೀ ವಿನಯದೊಂದಿಗೆ ಬಂದಿರುವಿರಲ್ಲ ! ಇದನ್ನು ಪರಿಶೀಲಿಸುವಾಗ ನನಗೊಂದೂ ಅರ್ಥವಾಗದು. ನೀವೆಲ್ಲರೂ ನನ್ನನ್ನು ಒಬ್ಬಂಟಿಗನನ್ನಾಗಿ ಬಿಟ್ಟು ನನ್ನ ವಿರಹಾಗ್ನಿಯು (ಪರಮಾತ್ಮನನ್ನು ಕುರಿತ) ಮತ್ತೂ ಪ್ರಜ್ವಲಿಸುವಂತೆ ಮಾಡಿ ಹೋಗಲು ಬಂದಿರಲ್ಲವೆ ? ನಿಮ್ಮ ಈ ಪ್ರಯತ್ನವೆಲ್ಲವೂ, ಛತ್ರಿಯಂತೆ ಗೋವರ್ಧನ ಪರ್ವತವನ್ನು ಮೇಲೆತ್ತಿ ಗೋಪಾಲ ಕರನ್ನು ಸಲಹಿದ ಶ್ರೀ ಕೃಷ್ಣನು ನಿತ್ಯಸೂರಿಗಳಿಂದ ಸಂಸೇವಿತನಾಗಿ ದೇದೀಪ್ಯ ಮಾನನಾಗಿರುವ ತಿರುವೇಂಗಡದೊಡೆಯನೆಡೆಗೆ ಬರಲು ನನ್ನ ಆಸೆಯನ್ನು ಮತ್ತೂ

ಪ್ರಬಲಿಸುವಂತೆ ಮಾಡುತ್ತಿರುವುದಲ್ಲಾ ? ನಾನೇನು ಮಾಡಲಿ ? ನೀವು ಹೋಗಿ ಬರುವ ವೇಂಗಡವು ಎಷ್ಟು ಕಠಿಣವೋ ಅದರಂತೆಯೇ ನಿಮ್ಮ ಮನಸ್ಸೂ ನನ್ನನ್ನು ಕುರಿತು ಅಷ್ಟೇ ಕಠಿಣವಾಗಿಬಿಟ್ಟಿತಲ್ಲಾ" ಎಂದು ಪ್ರಲಾಪಿಸುವರಂತೆ !

ಇನ್ನೊಂದು ಪಾಶುರದ ನಿರೂಪಣೆ ಇನ್ನೂ ಮೋಹಕವಾಗಿದೆ. "ಎಲೈ ವೇಂಗಡದೊಡೆಯನೆ ! ಭೋಗ್ಯಸ್ಥಾನವೆನಿಸಲ್ಪಡುವ ಪಡವೇಂಗಡವನ್ನು ಸೇರಿ ಕೊಂಡು ಅಲ್ಲಿನ ಶ್ರೀವೈಷ್ಣವರಿಂದ ಸೇವಿಸಲ್ಪಟ್ಟವನಾಗಿ ನನ್ನನ್ನು ಸಂಪೂರ್ಣವಾಗಿ ಮನಸ್ಸಿನಿಂದ ತ್ಯಜಿಸೇಬಿಟ್ಟಿರುವೆಯಾ ? ಹೀಗೆ ವಿಪರೀತ ಬಾಧೆಗೆ ಗುರಿಪಡಿಸಿ ನೀನು ಮಾತ್ರ ತೆಪ್ಪಗೆ ಕುಳಿತಿರುವೆಯಲ್ಲ ? ಇದು ನಿನಗೇ ಸರಿಯೆ ? ನಿನ್ನನ್ನೇ ನಂಬಿದ್ದೆ. ಹಾಗೆ ನನ್ನನ್ನು ನಂಬಿಸಿದವನೂ ನೀನೇ ಅಲ್ಲವೆ ? ನಾನು ಎಷ್ಟು ಬಿನ್ನವಿಸಿಕೊಂಡರೂ ಅದು ನಿನಗೆ ಈಗ ಕೇಳಿಸುತ್ತಲೇ ಇಲ್ಲ. ಆದರೆ ನನಗೆ ಮಾತ್ರ ನಿನ್ನ ನೆನಪೇ ಪೆಡಂಭೂತದಂತೆ ಕಾಡುತ್ತಿದೆ. ಎಷ್ಟು ಸಮಾಳಿಸಿಕೊಂಡರೂ ಆಗುವುದೇ ಇಲ್ಲ. ನನ್ನ ಮನಸ್ಸು ನನ್ನ ಹಿಡಿತಕ್ಕೆ ಒಳಪಡುವುದೇ ಇಲ್ಲ. ನಾನೆಷ್ಟು ಪಾಪಿಷ್ಟಳು. ಹೀಗೆ ನನ್ನನ್ನು ಆಕರ್ಷಿಸಿರುವುದಾದರೂ ಯಾವುದು ? ನಿನ್ನಲ್ಲಿನ ಗುಣವೈಶಿಷ್ಟ್ಯವೋ, ಸೌಂದರ್ಯವೈಶಿಷ್ಟ್ಯವೋ, ಮುಖಸೌಂದರ್ಯವೋ ಸ್ವರಮಾಧುರ್ಯವೋ, ಅಧರಶೋಭೆಯೋ, ಮೈಕಾಂತಿಯೋ ಯಾವುದೆಂದು ತಿಳಿಯುವಲ್ಲ. ನನ್ನನ್ನು ಆಕರ್ಷಿಸಿರುವ ನಿನ್ನಲ್ಲಿನ ವಿಶೇಷ ಯಾವುದು ಹೇಳು" ಎಂದು ಆಳ್ವಾರ್ ಆರ್ದ್ರವಾಗಿ ಬೇಡುತ್ತಾರೆ. ಇದು ಅತ್ಯಂತ ಹೃದಯಾ ಸ್ಪರ್ಶಿಯಾದ ನಿರೂಪಣೆ ಎಂದು ಕಂಡುಬರುತ್ತದೆಯಲ್ಲವೆ ?

ಸಖಿಯು, ಬೇಟೆಯಾಡಲು ಬಂದ ನಾಯಕನನ್ನು ತಡೆದು ಹಿಯ್ಯಾಳಿಸುವ ಚಾತುರ್ಯವೂ ಅದ್ಭುತ ರಮ್ಯ ಚಿತ್ರಣ. ಇದನ್ನು ತಮಿಳು ಲಕ್ಷಣಶಾಸ್ತ್ರದಲ್ಲಿ 'ವೇಳಂವಿನಾದಲ್' ಎಂದು ಕರೆಯುತ್ತಾರಂತೆ. ನಾಯಕನು ನಾಯಕಿಯ ಸಖಿ ಯನ್ನು, 'ತಾನು ಆನೆಯ ಬೇಟೆಗಾಗಿ ಬಂದಿದ್ದು, ಆನೆಯು ತಪ್ಪಿಸಿಕೊಂಡು ಹೋಯಿತು. ಅದು ಯಾವ ಕಡೆಗೆ ಹೋಯಿತು' ಎಂದು ಪ್ರಶ್ನಿಸುತ್ತಲೇ ಆ ಸಖಿ ಯನ್ನೂ, ಅವಳ ಒಡತಿಯನ್ನೂ ಸಂಭಾಷಣೆಗೆ ಎಳೆದು ಅವರನ್ನು ತನ್ನತ್ತ ಆಕರ್ಷಿಸಿಕೊಳ್ಳುವ ಚಾತುರ್ಯಕ್ಕೆ 'ಕಳಿರು ವಿನಾದಲ್' ಎಂದು ಅಲಂಕಾರಿಕರು ಕರೆಯುವರಂತೆ. ಇವೆಲ್ಲಾ ತಮಿಳು ಅಲಂಕಾರಶಾಸ್ತ್ರದಲ್ಲಿನ ಪ್ರಕರಣಗಳು. ಇದನ್ನು ಗಮನಿಸಿದಾಗ ಆಳ್ವಾರ್ ಈ ಕಾವ್ಯಪ್ರತಿಭೆಯಲ್ಲಿ ಸಿದ್ಧಹಸ್ತರೆಂಬುದು ಗೋಚರಕ್ಕೆ ಬಾರದೇ ಇರದು.

ಮೇಘಗಳೊಂದಿಗೆ ಸಂದೇಶ ಹೇಳಿ ಕಳುಹಿಸುವ ಪಾಶುರವೂ ಕವಿಯ ಜಾಣ್ಮೆಗೆ ನಿದರ್ಶನ. ಇದರಲ್ಲಿ ಮೇಘಗಳು ತಲೆಯ ಮೇಲೆ ಸಾಗುವಾಗ ಅವುಗಳ

ಸ್ಪರ್ಶವು ಕೆಳಗೆ ನಿಂತ ತನಗೆ ಆಗುವುದೆಂದು ಭಾವಿಸುವುದು ಒಂದು ಅರ್ಥ. ಮೊದಲನೇ ಪಾಶುರವಲ್ಲಿ ಹೇಳಿದಂತೆ ಭಾಗವತೋತ್ತಮರು ಆಳ್ವಾರ್ ಅವರ ಭಗವತ್ಪ್ರಾವೀಣ್ಯವನ್ನು ಗುರುತಿಸದೇ ತಿರುಮಲೆಗೆ ತೆರಳಲು ಆಳ್ವಾರ್ ತಮಗೆ ಆ ಭಾಗವತರ ಪುರುಷಕಾರಿಕೆಯಿಂದಲಾದರೂ ಭಗವಲ್ಲಾಭವಾಗಲಿ ಎಂಬ ಹಂಬಲದಿಂದ ಅವರ ಶ್ರೀಪಾದಗಳನ್ನು ಶಿರದಲ್ಲಿ ಧರಿಸುವುದೇ ಉಪಾಯವೆಂದು ಅರಿತುಕೊಂಡು ಅವರಿಗೆ ಶಿರ ಬಾಗುತ್ತಾರೆ. ಮೋಕ್ಷಕ್ಕೆ ಭಾಗವತ ಸ್ಥಾನ ಕಲ್ಪಿಸಿ ಅವು ವೆಂಕಟೇಶನನ್ನು ಓಲೈಸುವ ಕೈಂಕರ್ಯಕ್ಕೆ ಆಳ್ವಾರ್ ಮನಸೋಲುವುದನ್ನು ಕಂಡಾಗ ಆಳ್ವಾರ್ ಅವರ ಭಕ್ತಿಯ ಪರಾಕಾಷ್ಠತೆಯ ಅರಿವಾಗುತ್ತದೆ. ಭಾವುಕತೆಯು ನಮ್ಮ ಮನಸ್ಸನ್ನು ಸೂರೆಗೊಳ್ಳುವುದರಲ್ಲಿ ಸಂದೇಹವಿಲ್ಲ !

ಈ ರೀತಿಯ ಸ್ವಾಪದೇಶ, ಅನ್ಯಾಪದೇಶ ಚಮತ್ಕಾರಗಳನ್ನು ತಿರುಮಲೆಯ ವಿಚಾರವಾಗಿ ಬರುವ ಈ ಎಂಟು ಪಾಶುರಗಳಲ್ಲೇ ನಾವು ಕಂಡುಕೊಂಡು ಆನಂದಿಸುವಾಗ ಇಡೀ ತಿರುವಿರುತ್ತಂನ ಉದ್ದಕ್ಕೂ ತುಂಬಿರುವ ಈ ಸ್ವಾರಸ್ಯವನ್ನು ಆಸ್ವಾದಿಸಿದಾಗ ನಮಗೆ ಇನ್ನೆಷ್ಟು ಆನಂದವುಂಟಾಗುತ್ತದೆ ಎಂಬುದನ್ನು ಊಹಿಸಬಹುದು.

ನಮ್ಮಾಳ್ವಾರ್ ಅವರ ದಿವ್ಯ ಪ್ರಬಂಧಗಳಿಗೆ "ನಂಬಿಳ್ಳೈ" ಎನ್ನುವ ಮಹಾನುಭಾವರು ಸ್ವಾರಸ್ಯವಾದ ಸಾಮರಸ್ಯವನ್ನು ಮಾಡಿದ್ದಾರೆ.

ಸೋದರಮಾವನ ಮನೆಯಿಂದ ಶ್ರೀರಾಮನ ಕೈಂಕರ್ಯವನ್ನು ಕೈಕೊಳ್ಳುವೆನೆಂಬ ಮಹದಾಸೆಯಿಂದ ಹಿಂತಿರುಗಿ ಬಂದ ಭರತನನ್ನು ಕೈಕೇಯಿಯು "ಉತ್ತಿಷ್ಠೋತ್ತಿಷ್ಠ ಕಿಂ ಶೇಷೇ ರಾಜನ್‌ಪುತ್ರ ಮಹಾಯಶಃ" ಎಂಬುದಾಗಿ ಮೇಲೆಬ್ಬಿಸುತ್ತಾಳೆ. ಅಯೋಧ್ಯೆಯ ವಿದ್ಯಮಾನವನ್ನೆಲ್ಲಾ ಈ ವೇಳೆಗೆ ಅರಿತಿದ್ದ ಭರತನು ರಾಮನ ವಿರಹಾತುರದಿಂದಲೂ, ತಂದೆಯ ಮರಣಕ್ಕೆ ತಾಯಿಯೇ ಹೊಣೆಯೆಂಬುದನ್ನೂ, ರಾಮನ ಅರಣ್ಯಗಮನಕ್ಕೆ ತಾಯಿಯೇ ಕಾರಣವೆಂಬುದನ್ನೂ ಅರಿತಿದ್ದರಿಂದಲೂ, ತಾಯಿಯ ಈ ಸಂಬೋಧನೆಯು ಆತನಿಗೆ ಮರ್ಮಬೇಧಕವಾಗಿ ಇರಿವಂತೆ ಭಾಸವಾಯಿತು. ಆಗ ಭರತನು ಅನುಭವಿಸಿದ ಪಾಡಿನಂತೆ ತಿರುವಿರುತ್ತಂನಲ್ಲಿ ಆಳ್ವಾರ್ ಪಟ್ಟ ಸ್ಥಿತಿ ! ಚಿತ್ರಕೂಟದಲ್ಲಿ ರಾಮನಿರುವುದಾಗಿ ತಿಳಿದ ಭರತನು, "ಏಭಿಶ್ಚ ಸಚಿವೈಸ್ಸಾರ್ಧಂ ಶಿರಸಾಯಾಚಿತೋಮಯಾ ಭ್ರಾತುಃ ಶಿಷ್ಯಸ್ಯ ದಾಸಸ್ಯ ಪ್ರಸಾದಂ ಕರ್ತುಮರ್ಹತಿ" ಎಂಬ ಭರವಸೆಯನ್ನು ಹೊತ್ತುಕೊಂಡು ಹೊರಟಾಗಣ ಸ್ಥಿತಿಯಂತಿರುವುದಂತೆ ಆಳ್ವಾರರ 'ತಿರುವಾಶಿರಿಯಂ'ನಲ್ಲಿ ಪ್ರತಿಪಾದಿತವಾಗಿರುವ ಮನೋವೃತ್ತಿ. ನನ್ನೊಬ್ಬನ ಕಣ್ಣೀರನ್ನೇ ಸಹಿಸದವನು ತನ್ನ ವಿರಹದಿಂದ ಕಣ್ಣೀರ್ಗರೆಯುತ್ತಿರುವ ಇಷ್ಟು

ಜನರ ಶೋಕವನ್ನು ಕಂಡಾಗ ಹಿಂತಿರುಗದೇ ಇರುವನೇ ? ತಮ್ಮನೂ, ಶಿಷ್ಯನೂ, ದಾಸನೂ ಆದ ನನ್ನ ಕೋರಿಕೆಯನ್ನು ಖಂಡಿತ ನಡೆಸಿಯೇ ಕೊಡುವನು ಎಂಬ ಭರವಸೆಯನ್ನು ಹೊತ್ತ ಭರತನು ತನ್ನ ಆಸೆ ತೀರದೇ ಹೋಗಲು ನಿರಾಶೆಯಿಂದ ಹಿಂತಿರುಗಿ ಬಂದು ನಂದಿಗ್ರಾಮದಲ್ಲಿ ನೆಲಸಿ ರಾಮಾಗಮನವನ್ನು ಒಂದು ತಪಸ್ಸೆಯಂತೆ ಭಾವಿಸಿ ರಾಮಪಾದುಕೆಗಳಿಗೆ ತನ್ನ ದೈನಂದಿನ ಕಾರ್ಯಗಳನ್ನು ನಿವೇದಿಸುತ್ತಾ ಆವನ ಅಗಲಿಕೆಯಿಂದ ನೊಂದು ಹದಿನಾಲ್ಕು ವರ್ಷಗಳ ದೀರ್ಘಕಾಲ ತನ್ನ ಕೈಂಕರ್ಯ ಮನೋಭಾವವನ್ನು ಬೆಳಸಿಕೊಂಡಂತಿದೆ, ಪೆರಿಯ ತಿರುವಂದಾದಿಯಲ್ಲಿನ ಆಳ್ವಾರ್ ಮಾನಸಿಕ ಸ್ಥಿತಿ. ವನವಾಸವನ್ನು ಮುಗಿಸಿಕೊಂಡು ಅಯೋಧ್ಯೆಗೆ ಹಿಂತಿರುಗಿ ಬಂದ ರಾಮಚಂದ್ರನನ್ನು ಭರತನು ನಮಿಸಲು ಮುಂದಾದಾಗ ಆತನು ವಿಶ್ವಾಸದಿಂದ "ಅಂಕೇ ಭರತಮಾರೋಪ್ಯ ಮುದಿತ ಪರಿಷಸ್ವಜೇ" ಎಂದು ವಾಲ್ಮೀಕಿ ಮಹರ್ಷಿಗಳು ವರ್ಣಿಸಿರುವಂತೆ ಆಲಂಗಿಸಿಕೊಂಡು ಸಂತೋಷಿಸುತ್ತಾನೆ. ಭರತನ ಅಭೀಷ್ಟದಂತೆಯೇ ಆತ ನಯನಾಭಿರಾಮನಾಗಿ ಕಾಣಿಸಿಕೊಂಡು ಪಟ್ಟಾಭಿಷೇಕವನ್ನು ಮಾಡಲ್ಪಟ್ಟವನಾಗಿ ಸಕಲ ಜನರಿಗೂ ಆನಂದವನ್ನು ಉಂಟು ಮಾಡುತ್ತಾನೆ. ಈ ಸ್ಥಿತಿಯಲ್ಲಿ ಭರತನು ಪಡೆದ ಸ್ವರೂಪಾನುರೂಪ ಫಲಸ್ವರೂಪ ದಂತಿದೆ ತಿರುವಾಯ್ಮೊಳಿಯೊಳಗಣ ಆಳ್ವಾರ್‌ರವರ ಫಲಸಿದ್ಧಿ.

ಈ ಸುಂದರ ಮಹೋಪಮೆಯ ಹಿಂದೆ ನಮ್ಮಾಳ್ವಾರ್ ಅವರ ಪ್ರಪತ್ತಿ ಮಾರ್ಗದ ವಿವಿಧ ಮಜಲುಗಳನ್ನೂ, ಅನುಭಾವವನ್ನೂ ನಾವು ದರ್ಶಿಸಬಹುದು.

ಇನ್ನು ನಮ್ಮಾಳ್ವಾರ್ ಅವರ 'ಪೆರಿಯ ತಿರುವಂದಾದಿ'ಯಲ್ಲಿ ೮೭ ಪಾಶುರ ಗಳಿದ್ದು ೬೮ನೇ ಪಾಶುರದಲ್ಲಿ ಇವರು ತಿರುವೇಂಗಡವನ್ನು ಮಂಗಳಾಶಾಸನ ಮಾಡಿದ್ದಾರೆಂದು ತಿಳಿಯುತ್ತದೆ. ಆದರೆ ಈ ಪಾಶುರದಲ್ಲಿ ಇವರು ಈ ಮಲೆಯ ಸಂಬೋಧನ ವಾಚಕಗಳಾದ ವೇಂಗಡವೆಂದಾಗಲೀ, ತಿರುವೇಂಗಡವೆಂದಾಗಲೀ ಹೇಳದೆ ಕೇವಲ "ಕಲ್ಲುಂ" ಎಂದು ಹೇಳಿರುವುದನ್ನೇ ತಿರುವೇಂಗಡವನ್ನು ಕುರಿತ ವಿಶೇಷಣವೆಂದು ವಿಶ್ಲೇಷಣೆ ಮಾಡಿದ್ದಾರೆ.

"ಮಹೋನ್ನತವಾದ ನೀಲಮೇಘನಿಭ ಶರೀರವಾದ ಕೃಷ್ಣನು ನನ್ನ ಹೃದಯ ವನ್ನು ಪ್ರವೇಶಿಸಿ ದಾಸನಾದ ನನ್ನ ಹೃದಯವನ್ನೇ ಆಲಯವನ್ನಾಗಿ ಮಾಡಿಕೊಂಡು ಬಿಟ್ಟಿದ್ದಾನೆ. ಅದನ್ನವನು ತ್ಯಜಿಸುವುದೇ ಇಲ್ಲ. ಇನ್ನು ಶಿಲಾಮಯವಾದ ವೇಂಗಡವನ್ನೋ, ಜಲಮಯವಾದ ಕ್ಷೀರಸಾಗರವನ್ನೋ, ಜ್ಯೋತಿರ್ಮಯವಾದ ವೈಕುಂಠವನ್ನೋ, ಇಲ್ಲವೇ ಸರ್ವೋತ್ಕೃಷ್ಟವಾದ ಪರಮಪದವನ್ನೋ ತೃಣಪ್ರಾಯವನ್ನಾಗಿ ಪರಿಗಣಿಸಿಬಿಟ್ಟರೆ ಹೇಗೆ ? ಅಯ್ಯೋ ಪಾಪ !"

ಪಿಳ್ಳೈಲೋಕಾಚಾರ್ಯರು ಒಂದೆಡೆ ಸ್ವಾರಸ್ಯವಾಗಿ ವಿವರಿಸಿದ್ದಾರೆ. ಭಕ್ತರ ಹೃದಯವನ್ನು ಸಮಯ ಸಾಧಿಸಿ ಪ್ರವೇಶಿಸುವುದಕ್ಕಾಗಿಯೇ ಸ್ವಾಮಿಯು ದಿವ್ಯ

ಕ್ಷೇತ್ರಗಳಲ್ಲಿ ವಾಸಿಸುತ್ತಿರುವನಂತೆ! ಆಚಾರ್ಯರಿಗೆ ಈ ಭಾವ ಪ್ರೇರೇಪಣೆಯಾಗಲು ಆಳ್ವಾರ್ ಅವರ ಈ ಪಾಶುರವೇ ವಸ್ತುವಾಗಿರಬೇಕೆಂದು ಗ್ರಂಥಕರ್ತರು ಅಭಿಪ್ರಾಯಪಡುತ್ತಾರೆ. ಆದರೆ ಇದರಲ್ಲಿ ಒಂದು ಜಿಜ್ಞಾಸೆ ಏರ್ಪಡುತ್ತದೆಯಲ್ಲವೆ? ಈ ಪಾಶುರದ ಪ್ರಕಾರ ಭಕ್ತನ ಹೃದಯವೇ ಎಲ್ಲ ಕ್ಷೇತ್ರಾದಿಗಳಿಗಿಂತ ಅತಿ ಪವಿತ್ರವಾದ ಸ್ಥಾನ ಮತ್ತು ಹಿರಿದು! ಅದರ ಮುಂದೆ ವೇಂಗಡ, ಕ್ಷೀರಾಬ್ಧಿ, ಪರಮಪದ ಮುಂತಾದುವು ಯಾರ ಲೆಖ್ಖಕ್ಕೂ ಇಲ್ಲ ಎಂದಾಗ ಇದು ವೇಂಗಡದ ಮಂಗಳಾಶಾಸನಪರ ಪಾಶುರವೆಂಬುದಾಗಿ ಹೇಗೆ ಪರಿಗಣನೆ ಮಾಡಬೇಕು? ಆದರೆ ಪಿಳ್ಳೈಲೋಕಾಚಾರ್ಯ ವ್ಯಾಖ್ಯಾನವನ್ನು ಮುಂದಿಟ್ಟುಕೊಂಡು ಅದರಂತೆ ವ್ಯಾಖ್ಯಾನ ಮನನ ಮಾಡಿದಾಗ ಭಕ್ತನ ಮನಸ್ಸಿನಲ್ಲಿ ದೇವನು ಒಳಹೋಗಲು ಪ್ರೇರಕವಾಗುವಂತಹ ಜಾಗಗಳೆಂದರೆ ಪರಮಾತ್ಮನ ನೆಲೆಗಳಾದ ತಿರುಮಲೆಯಂತಹ ದಿವ್ಯಕ್ಷೇತ್ರಗಳೇ! ಇದರಿಂದ ಈ ದಿವ್ಯಕ್ಷೇತ್ರಗಳ ಮಹಿಮೆಗೆ ಮೆರುಗಿಟ್ಟಂತಾಗಲಿಲ್ಲವೆ? ಆದರಲ್ಲೂ 'ಕಲ್ಲುಂ' ಅನ್ನು ಮೊದಲಿಗೆ ಹೇಳಿ ನಂತರ "ಕನೆಗಡಲುಂ" ಎನ್ನುವುದನ್ನು ಪ್ರಯೋಗಿಸಿರುವುದರಿಂದ ಕ್ಷೀರಸಾಗರ, ಪರಮಪದಗಳಿಗಿಂತ ಉನ್ನತ ಸ್ಥಾನ ತಿರುವೇಂಗಡಕ್ಕೆ ಆಳ್ವಾರ್ ಕಲ್ಪಿಸಿರುವುದರಿಂದ ಈ ಪಾಶುರವನ್ನು ತಿರುಮಲೆಯ ಮಂಗಳಾಶಾಸನ ಪದ್ಯವೆಂದು ಅರ್ಥ ಮಾಡಲು ಅಡ್ಡಿಯಿಲ್ಲ.

ನಮ್ಮಾಳ್ವಾರ್ ಅವರ ಮತ್ತೊಂದು ಪ್ರಬಂಧ 'ತಿರುವಾಯ್ಮೊಳಿ.' ಇದನ್ನು ಎಲ್ಲಾ ವಿಶಿಷ್ಟಾದ್ವೈತ ಆಚಾರ್ಯರೂ ವಿಶಿಷ್ಟವಾದ ದಿವ್ಯ ಪ್ರಬಂಧವೆಂದೇ ಕೊಂಡಾಡಿದ್ದಾರೆ. ಇದನ್ನು ಸಾಮವೇದಕ್ಕೆ ಸಾಮ್ಯ ಮಾಡಿದ್ದರೂ ಕೂಡ ಇದನ್ನು 'ದ್ರಾವಿಡ ವೇದ ಸಾಗರಂ' 'ತಮಿಳ್ ಮರೈಗಳ್ ಆಯಿರಮುಂ' ಎಂದೇ ಕರೆದಿದ್ದಾರೆ. ಎಂದರೆ ತಮಿಳು ವೇದವೆಂದು ಅರ್ಥ. ಆದ್ದರಿಂದ ಇದು ವೇದ ಸಾಹಿತ್ಯಕ್ಕೆ ಸರಿಸಮನಾದ ದಿವ್ಯಪ್ರಬಂಧವೆಂದು ಪರಿಗಣಿಸಲ್ಪಟ್ಟಿದೆ. ಇದರ ಸೊಬಗಿಗೆ, ಸಾಹಿತ್ಯ ಸಂಪತ್ತಿಗೆ ಬೆರಗಾದ ಆಚಾರ್ಯ ನಾಥಮುನಿಗಳೂ, ಯಾಮುನಾಚಾರ್ಯರೂ ಇದನ್ನು ತಮ್ಮ ಸಂಶೋಧನೆಯ ಮೂಲಕ ಸಂಪೂರ್ಣವಾಗಿ ಸಂಪಾದನೆ ನಡೆಸಿ, ಇದರ ದೆಸೆಯಿಂದ ಮತ್ತೂ ಉತ್ತೇಜಿತರಾಗಿ ಇಡೀ ನಾಲಾಯಿರ ದಿವ್ಯಪ್ರಬಂಧಗಳ ಸಂಪಾದನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು; ಮತ್ತು ಈ ದಿವ್ಯಪ್ರಬಂಧಗಳ ಪ್ರಚಾರ ಕಾರ್ಯದಲ್ಲೂ ಜಯಶಾಲಿಗಳಾದರು. ಇವರು ಈ ತಿರುವಾಯ್ಮೊಳಿಯಿಂದ ಎಷ್ಟೊಂದು ಪ್ರಭಾವಿತರಾಗಿದ್ದರೆಂದರೆ ಇದಕ್ಕೆ ವಿಸ್ತಾರವಾದ ಭಾಷ್ಯವನ್ನು ಬರೆಯಬೇಕೆಂಬುದಾಗಿ ಪ್ರಯತ್ನಿಸಿದರು. ಆದರೆ ಇವರ ಕಾಲಕ್ಕೆ ಅದು ಸಾಧ್ಯವಾಗದೇಹೋಯಿತು. ಆಚಾರ್ಯ ರಾಮಾನುಜರಿಂದ ಈ ಕಾರ್ಯ ನಡೆಯಬೇಕೆಂದು ಸಲಹೆ ಸೂಚನೆಗಳನ್ನು ಇತ್ತರೂ, ಮತಪ್ರಸಾರಣ ಕಾರ್ಯ ಬಾಹುಳ್ಯ ಕಾರಣ

ಗಳಿಂದ ಅವರಿಂದ ಈ ಕಾರ್ಯವು ನೆರವೇರದೇ ಹೋಯಿತು. ಈ ತಿರುವಾಯ್ಮೊಳಿ ಯನ್ನು ಅಸಾಧಾರಣ ರೀತಿಯಿಂದ ಪ್ರೋಷಿಸಿ, ಅದರ ವ್ಯಾಖ್ಯಾನವನ್ನು ಶ್ರೀವೈಷ್ಣವ ಸಿದ್ಧಾಂತರೀತ್ಯಾ ಕಾಲಕ್ಷೇಪಮಾಡಿ ಶ್ರೀ ಪಿಳ್ಳಾನ್ ಎಂಬ ತಮ್ಮ ಶಿಷ್ಯರ 'ಆರಾಯಿರಪ್ಪಡಿ' ಎನ್ನುವ ವ್ಯಾಖ್ಯಾನಕ್ಕೆ ಪ್ರೇರಕವಸ್ತುವನ್ನಾಗಿ ಈ ಕಾಲಕ್ಷೇಪವನ್ನು ಮಾಡಿದ್ದರಿಂದಲೇ ರಾಮಾನುಜರ ಶಿಷ್ಯರು ರಾಮಾನುಜರನ್ನು "ಈನ್ರಮುದಲ್ ತಾಯ್ ಶಡಗೋಪನ್ ಮೋಯಿಂಬಾಲ್ ವಳರ್ತ್ತ ಇದತ್ತಾಯಿ ರಾಮಾನುಶನ್" ಎಂದು ಕೀರ್ತಿಸಿದ್ದು. ಎಂಪರೆ "ಈ ತಿರುವಾಯ್ಮೊಳಿಯನ್ನು ಹೆತ್ತತಾಯಿ ಶಡಗೋಪರಾದರೆ ಅದಕ್ಕೆ ಮೊಲೆಹಾಲನ್ನು ನೀಡಿ ಪ್ರವರ್ಧ ಮಾನಕ್ಕೆ ಬರುವಂತೆ ಮಾಡಿದ ಯಶಸ್ಸು ರಾಮಾನುಜರದು" ಎಂದು ಅರ್ಥ. ಇಂತಹ ರಾಮಾನುಜರಿಂದ ಮಾತೃಮಮತೆಯ ಸೊಗವನ್ನುಂಡು ಬೆಳೆದ ಶಿಶು ತಿರುವಾಯ್ಮೊಳಿ ಎಂದರೆ ಅದರ ವಿಶೇಷದ ಅರಿವಾಗುತ್ತದೆ.

ರಾಮಾನುಜರು ಕಾಲವಾದ ಮೇಲೆ ತಿರುವಾಯ್ಮೊಳಿಗೆ ಹಲವು ವ್ಯಾಖ್ಯಾನ ಗಳು ಹುಟ್ಟಿಕೊಂಡವು. ಇವೆಲ್ಲವೂ ಆಚಾರ್ಯ ರಾಮಾನುಜರು ಸ್ಥಾಪಿಸಿದ ಶ್ರೀವೈಷ್ಣವ ತತ್ವಗಳ ಮೇಲೆಯೇ ಆಧಾರಿತವಾಗಿರುವುದರಿಂದ ಇಂದಿಗೂ 'ಭಗವದ್ವಿಷಯ' ಎಂಬ ಸಂಕೀರ್ಣವಾದ ನಾಮಧೇಯವನ್ನು ಈ ಎಲ್ಲಾ ವ್ಯಾಖ್ಯಾನ ಗಳೂ ಹೊಂದಿವೆ. ಈ ವ್ಯಾಖ್ಯಾನಗಳು ಯಾವುವೆಂದರೆ — ನಂಜೀಯರ್ ಅವರ 'ಒನ್ಬದನಾಯಿರಪ್ಪಡಿ', ವಾದಿಕೇಸರಿ ಅಳಗಿಯ ಮನವಾಳ ಜೀಯರ್ ಅವರ 'ಪನ್ನೀರಾಯಿರಪ್ಪಡಿ', ಪೆರಿಯವಾಚ್ಚಾನ್ಪಿಳ್ಳೈ ಅವರ 'ಇರಪತ್ತನಾಲಾಯಿರಪ್ಪಡಿ' ಮತ್ತು ವಡಕ್ಕುತ್ತಿರುವೀಧಿಪಿಳ್ಳೈ ಎನ್ನುವವರ 'ಮುಪ್ಪತ್ತಿ ಆರಾಯಿರಪ್ಪಡಿ'. ಈ ಕಡೆಯ ವ್ಯಾಖ್ಯಾನವು ಅದ್ಭುತವಾಗಿಯೂ ವಿಸ್ತಾರವಾಗಿಯೂ ಇರುವುದರಿಂದ ಇಂತಹ ಗ್ರಂಥಕ್ಕೆ ಈಡು ಜೋಡು ಇಲ್ಲವೆಂಬುದಾಗಿ ವಿದ್ವಾಂಸರಿಂದ ಪರಿಗಣಿಸ ಲ್ಪಟ್ಟು, 'ಈಡು' ಎಂದು ವಿದ್ವಾಂಸರ ಅರುಮೆಗೆ ಪಾತ್ರವಾಯಿತು. ಇದರಿಂದ ತಿರುವಾಯ್ಮೊಳಿಯ ಮಹಿಮೆಗರಿಮೆಗಳು ವಿದಿತಗೊಳ್ಳುತ್ತದೆ. ಈ ಮೇರುಕೃತಿಗೆ ಮನವಾಳ ಮಹಾಮುನಿಗಳು ಉಚಿತವಾದ ನಮನವನ್ನು ತಮ್ಮ 'ಉಪದೇಶ ರತ್ತಿನಮಾಲೆ'ಯಲ್ಲಿ ಸಲ್ಲಿಸಿರುತ್ತಾರೆ.

"ಉಂಡೋ ವೈಗಾಶಿವಿಶಾಖತ್ತುಕ್ಕೊಪ್ಪೊರುನಾಳ್
ಉಂಡೋ ಶಡಗೋಪರುಕ್ಕೊಪ್ಪೊರುವರ್
ಉಂಡೋ ತಿರುವಾಯ್ಮೊಳಿಕ್ಕ್ ಒಪ್ಪು – ತೆನ್‌ಕುರುಗೈಕ್ಕ್
ಉಂಡೋ ಒರುಪಾರ್‌ದನಿಲ್ ಒಕ್ಕುಮೂರ್"
"ಉಂಟೋ ವೃಷಭದ ವಿಶಾಖೆಯ ನಕ್ಷತ್ರಕೆ ಸಮ

ಉಂಟೋ ಶಡಗೋಪರಿಗೆ ಸಮರೊಬ್ಬರ್ – ಇನ್ನುಂಟೋ
ತಿರುವಾಯ್ಮೊಳಿಗೆ ಸಮ ಭೂಲೋಕದಲಿ – ತೆಂಕುರುಗೂರಿಗೆ
ಒಪ್ಪುವಾ ಊರು ಮತ್ತೊಂದುಂಟೋ"

(ಡಾ. ವಿನೋದಾ ಅವರ ಕನ್ನಡಾನುವಾದ ಮನವಾಳ ಮಹಾಮುನಿಯವರ ಉಪದೇಶ ರತ್ನಮಾಲೆಯಿಂದ)

ಇದು ಮಾತ್ರವಲ್ಲದೆ ತಮಿಳುನಾಡಿನ ಪ್ರಖ್ಯಾತ ಕವಿ ರಾಮಾಯಣದ ಕರ್ತೃ ಕಂಬರ್ ಎನ್ನುವವರು, ಈ ಶಡಗೋಪರ ತಿರುವಾಯ್ಮೊಳಿಯಲ್ಲಿಯ ಶೈಲಿ, ಗಾಂಭೀರ್ಯ, ರಚನಾ ಕೌಶಲ್ಯ, ತತ್ವನಿರೂಪಣೆ, ಮಹತ್ವ ಇವುಗಳಿಂದ ಆಕರ್ಷಿತರಾಗಿ 'ಶಡಗೋಪರಂದಾದಿ' ಎನ್ನುವ ನೂರು ಪಾಶುರಗಳ ದಿವ್ಯಕೃತಿಯಿಂದ ನಮ್ಮಾಳ್ವಾರ್ ಅವರಿಗೆ ಗೌರವ ಸಲ್ಲಿಸಿದ್ದಾರೆ. ಆಚಾರ್ಯ ವೇದಾಂತ ದೇಶಿಕರಂತೂ ತಮ್ಮ 'ಪಾದುಕಾ ಸಹಸ್ರ'ದಲ್ಲಿ ಪರಮಾತ್ಮನ ದಿವ್ಯಪಾದುಕೆಯೇ ಈ ಶಠಾರಿ ಗುರುವರ್ಯರು ಎಂಬುದಾಗಿ ಹೊಗಳಿ ದಣಿದಿದ್ದಾರೆ. ಈ ದಿವ್ಯ ಪ್ರಬಂಧದ ದೆಸೆಯಿಂದಾಗಿ ನಮ್ಮಾಳ್ವಾರ್ ಅವರು ಇಡೀ ಶ್ರೀವೈಷ್ಣವ ಸಮುದಾಯಕ್ಕೆ "ಆದ್ಯಸ್ಯನಃಕುಲಪತೇರ್ವಕುಳಾಭಿರಾಮಂ" "ಪ್ರಪನ್ನಜನ ಕೂಟಸ್ಥ" ಮುಂತಾದ ಗೌರವಕ್ಕೆ ಭಾಜನರಾದರು.

ಇಂತಹ ಹಿರಿಮೆಯುಳ್ಳ ತಿರುವಾಯ್ಮೊಳಿಯು ೧೧೦೨ ಪಾಶುರಗಳಿಂದ ಯುಕ್ತವಾದ ದಿವ್ಯಪ್ರಬಂಧ, ಇದೊಂದು ಸಾಹಿತ್ಯರತ್ನ. ಇದರಲ್ಲಿ ಒಟ್ಟು ತಿರುವೇಂಗಡವನ್ನು ಕುರಿತು ಹಾಡಲ್ಪಟ್ಟ ಪಾಶುರಗಳು ೪೬. ಇವುಗಳಲ್ಲೂ ಬಿಡಿಬಿಡಿಯಾಗಿ ಅಲ್ಲಿ ಇಲ್ಲಿ ಬಂದಿರುವ ಪಾಶುರಗಳು ೧೩ ಮತ್ತು ಅನುಸ್ಯೂತವಾಗಿ ಬಂದಿರುವುದು ಮೂರು ದಶಕಗಳಲ್ಲಿ, ಎಂದರೆ ಮೂರು ಹತ್ತು ಹತ್ತು ಪಾಶುರಗಳು ಮತ್ತು ಈ ಹತ್ತು ಪಾಶುರಗಳ ಮಂಗಳಶ್ಲೋಕಗಳಾದ ಮೂರು ಪಾಶುರಗಳಲ್ಲಿ. ಈ ದಶಕಗಳಲ್ಲಿ ಕೇವಲ ಒಂದು ದಶಕದಲ್ಲಿ ಬರುವ 'ಅಪ್ಪನ್' ಎನ್ನುವ ಪದ ಪ್ರಯೋಗದಿಂದ ಆ ದಶಕದ ಪಾಶುರಗಳು ವೇಂಗಡವನ್ನು ಕುರಿತವು ಎಂದು ವಿಚಾರ ಮಾಡುವವರಿದ್ದಾರೆ. ಇದನ್ನು ಈ ಹಿಂದೆಯೇ ವಿಶದೀಕರಿಸಲಾಗಿದೆ.

ನಮ್ಮಾಳ್ವಾರ್ ಅವರ ಶೈಲಿಯೇ ಈ ಮೇಲೆ ನಾವು ಕಂಡುಕೊಂಡ ಇತರ ಆಳ್ವಾರ್‌ಗಳ ಶೈಲಿಗಿಂತ ಭಿನ್ನವಾದದ್ದು. ಇದರಲ್ಲಿ ಭಕ್ತಿಭಾವ ತುಂಬಿದೆ. ಅಲ್ಲಿ ಕಂಡ ಪ್ರಕೃತಿ ವರ್ಣನೆ ಇಲ್ಲಿ ಸಿಕ್ಕುವುದಿಲ್ಲ. ಇದು ಭಕ್ತಿ ಸಾಹಿತ್ಯ, ಪಾರಮಾರ್ಥಿಕ ಘಟ್ಟದಲ್ಲಿ ಪರಮಾತ್ಮಚಿಂತನ ಎನ್ನಬಹುದು. ಈ ಪಾಶುರಗಳ ಭಾವವನ್ನು ಆಸ್ವಾದಿಸೋಣ. ಮೊದಲು ಬಿಡಿ ಪದ್ಯಗಳಲ್ಲಿ ಬರುವ ವೇಂಗಡ ವಿಷಯಗಳ ಸೊಗಸನ್ನು ಅನುಭವಿಸಿ ನಂತರ ದಶಕಗಳ ಕಡೆಗೆ ಗಮನ ಹರಿಸೋಣ.

ಈ ಹದಿಮೂರು ಬಿಡಿಪದ್ಯಗಳಲ್ಲಿ ವೇಂಗಡವೆಂದು ೫ ಪಾಶುರಗಳಲ್ಲೂ ತಿರುವೇಂಗಡವೆಂದು ೨ ಪಾಶುರಗಳಲ್ಲೂ ತಣ್ ತಿರುವೇಂಗಡಂ ಎಂಬುದಾಗಿ ೧ರಲ್ಲೂ ಗಿರಿಯನ್ನು ಸಂಬೋಧಿಸಿದ್ದಾರೆ. ಮಿಕ್ಕ ೫ ಪಾಶುರಗಳಲ್ಲಿ ವಡತಿರು ವೇಂಗಡತ್ತುಂದೈ, ವೇಂಗಡತ್ತಣ್ಣಲೇ, ವೇಂಗಡವಾಣನ್ ಎಂಬುದಾಗಿ ಬೆಟ್ಟದ ಮೇಲಿನ ದೇವರನ್ನು ಕರೆದಿದ್ದಾರೆ. ಒಂದು ಪಾಶುರದಲ್ಲಿ ಮಲೈಮೇಲ್‌ನಿನ್ರಾನ್ ಎಂದು ದೇವರಿಗೆ ಹೇಳಿದ್ದಾರೆ.

ಭೂಲೋಕದವರಿಗೂ, ದೇವತೆಗಳಿಗೂ ನೇತ್ರಪ್ರಾಯನು. ಶೀತಳವಾದ ವೇಂಗಡವನ್ನೇ ವಾಸವಾಗಿ ಉಳ್ಳವನು, ಈ ನಿತ್ಯಸೂರಿಗಳಿಂದ ಸಂಸೇವ್ಯನಾದ ಪರಮಾತ್ಮನು. (೧-೮-೩) ನನ್ನ ಸ್ವಾಮಿಯೇ, ಶೀತಳವಾದ ತಿರುವೇಂಗಡದಲ್ಲಿ ನಿಂತಿರುವವನೇ, ಲಂಕೆಯನ್ನು ನಾಶಮಾಡಿದವನೇ, ಸಾಲವೃಕ್ಷಗಳು ಏಳನ್ನೂ ಬುಡದಿಂದಲೇ ಉರುಳುವಂತೆ ಒಂದೇ ಬಾಣದಿಂದ ಭೇದಿಸಿದ ಘನ ಧನುರ್ಬಾಣ ಗಳನ್ನು ಹೊಂದಿದಂತಹವನೆ, ಹೂಗೊಂಚಲುಗಳಿಂದ ಅಲಂಕಾರಗೊಂಡ ದಿವ್ಯತುಳಸೀ ಮಾಲಾಧರನಾದ ಅಮೃತ ಸ್ವರೂಪನೇ, ನಿನ್ನನ್ನು ನನ್ನೊಳಗೆ ಸೇರಿಸಿರುವ ನಿತ್ಯ ಯೌವ್ವನ ಶಾಲಿಯೇ, ನಿತ್ಯಸೂರಿಗಳಿಗಧಿಪತಿಯೆ, ಇನ್ನು ನೀನು ನನ್ನನ್ನು ಅಗಲಿ ಬೇರೆಲ್ಲಿಗೆ ಹೋಗುವೆ ? (೨-೯-೯) ಮೂರು ಕಾಲಗಳಲ್ಲೂ ತಾಯಿ, ತಂದೆ, ಆತ್ಮ ಎಲ್ಲವೂ ನೀನೇ ಆಗಿರುವ. ವಿಸ್ತಾರವೂ, ಅನಾದಿಯೂ ಆದ ಕೀರ್ತಿಯನ್ನುಳ್ಳ, ಮೂಜಗಕ್ಕೂ ಒಡೆಯನೆ, ಶ್ರೇಷ್ಠನೆ, ಶೀತಳವಾದ ವೇಂಗಡವನ್ನು ವಾಸಸ್ಥಾನ ವನ್ನಾಗಿ ಹೊಂದಿರುವವನೇ, ನರುಗಂಪಿನ ದಿವ್ಯ ತುಳಸೀಮಾಲಾಧರನೇ ನಿನ್ನನ್ನು ನಾನು ಆಶ್ರಯಿಸಿರುವೆನು. ಇನ್ನು ನಾನು ಬಿಡುತ್ತೇನೆಯೇ ? (೨-೬-೧೦) ಪದ್ಮನಾಭನು ಇತರರ ಉಚ್ಛ್ರಾಯವು ನಶಿಸುವಂತೆ ಮೇಲಕ್ಕೆ ಪ್ರವರ್ಧಮಾನ ವಾದಂತಹ ಶಕ್ತಿಯುಳ್ಳವನು. ನನ್ನಲ್ಲಿ ಅತಿ ಪ್ರೀತಿ ಉಳ್ಳ ಸ್ವಾಮಿಯು ನನ್ನನ್ನು ತನ್ನ ದಾಸನನ್ನಾಗಿ ಮಾಡಿಕೊಂಡು ನನಗೆ ತನ್ನನ್ನೇ ತಂದುಕೊಟ್ಟಂತಹ ಕಲ್ಪ ವೃಕ್ಷವು. ನನ್ನ ಪಾಲಿಗೆ ಅಮೃತವು. ನೀಲ ಮುಗಿಲಿನಂತಿರುವ ದಿವ್ಯವಾದ ವೇಂಗಡವನ್ನು ವಾಸಸ್ಥಾನವನ್ನಾಗಿ ಉಳ್ಳವನು. ನಿತ್ಯಸೂರಿಗಳ ನಿರ್ವಾಹಕನು. ಇಂತಹ ದಾಮೋದರನು ನನಗೆ ತಂದೆಯಾದ ಸ್ವಾಮಿಯು. (೨-೭-೧೧) ಮೇಲಿ ನಿಂದ ಉರುಳುತ್ತಿರುವ ಜಲಧಾರೆಯಿಂದ ಕೂಡಿದ, ಮನೋಹರವಾದ ತಂಪಾದ ಉತ್ತರ ವೇಂಗಡದಲ್ಲಿರುವ ನನ್ನ ಸ್ವಾಮಿಯ ನಾಮಗಳನ್ನು ವಿಶೇಷವಾಗಿ ಹೇಳುತ್ತ, ಆ ಉನ್ಮಾದವನ್ನು ಕಂಡು ಬೇರೆಯವರು ಇವನು ಹುಚ್ಚನೆಂದು ನಿರ್ದೇಶ ಮಾಡುವಂತೆ, ಅನೇಕ ಗ್ರಾಮ ನಗರಗಳನ್ನು ಪ್ರವೇಶಿಸುತ್ತಾ ಮನುಷ್ಯ ಸಂಚಾರವಿಲ್ಲದ ಜಾಗಗಳಲ್ಲಿ ಮನುಷ್ಯರು ನಗುವಂತೆ ಪರವಶನಾಗಿ ವರ್ತಿಸುವಂತಹ, ಪರಮಾತ್ಮನಲ್ಲಿ ಉತ್ಕಟ ಪ್ರೇಮವುಂಟಾಗಿರಲು ಸಂಭ್ರಮದಿಂದ ನರ್ತಿಸುವರು.

ಇಂತಹ ಭಾವುಕರನ್ನು ನಿತ್ಯಸೂರಿಗಳು ಸಂಭಾವಿಸುವರು (೩-೫-೮) ಈ ಹಿತೋಕ್ತಿಯನ್ನು ಹೇಳಿದರೆ ವಿರುದ್ಧದಂತೆ ನಿಮಗೆ ಕಂಡುಬರುತ್ತದೆಯೇನೋ, ಆದರೂ ನಾನು ಹೇಳಿಬಿಡುತ್ತೇನೆ. ನನ್ನ ಮನಸ್ಸಿಗೆ ಬಂದಿದೆ, ಕೇಳುವುದಾದರೆ ಕೇಳಿ. ಭ್ರಮರಗಳು ಮಧುಪಾನದಿಂದ ಮತ್ತವಾಗಿ ಗಾನ ಮಾಡುತ್ತಿರಲು, ಅವರ ಝೇಂಕಾರದಲ್ಲೇ ತುಂಬಿಹೋಗಿರುವ ತಿರುವೇಂಗಡದಲ್ಲಿರುವ ನನಗೆ ಆನೆಯಂತೆ ಪ್ರಿಯನಾದ, ಸ್ತೋತ್ರಪಾತ್ರನಾದ ಸ್ವಾಮಿಯು ತಾನು ಪ್ರಾಶಸ್ತ್ಯವನ್ನು ಹೊಂದಿರುವ ಮತ್ತು ಅಧಿಕಾರವನ್ನು ಹೊಂದಿರುವ ನನ್ನ ನಾಲಿಗೆಯಲ್ಲಿ ಉದ್ಭವಿಸುವ ಆತನನ್ನು ಕುರಿತ ಕವಿತ್ವವನ್ನು ನಾನು ಮತ್ತೊಬ್ಬರಿಗೆ ಹೇಗೆ ತಾನೇ ಕೊಡಬಲ್ಲೆನು, ಕೊಡಲಾರೆನು (೩-೯-೧) ವರ್ಷವು ಅವಿಚ್ಛಿನ್ನವಾಗಿ ಬಿದ್ದು ತಂಪುಗೊಂಡ ರಮಣೀಯ ಪರ್ವತ ವೇಂಗಡದಲ್ಲಿ ಸರ್ವರಿಂದಲೂ ಸಂಸೇವ್ಯನಾಗಿ ನೆಲಸಿರುವ ಸ್ವಾಮಿಯನ್ನು ಕುರಿತು ಜಲಸಮೃದ್ಧಿಯಿಂದಲೂ, ನಿಬಿಡವಾದ ಉದ್ಯಾನಗಳಿಂದಲೂ ರಂಜಿಸುವ ಕುರುಗೂರಿನ 'ಕಾರಿ' ಎನ್ನುವವರ ಪುತ್ರರಾದ ಶಠಗೋಪರು ಹೇಳಿದ ಸಾವಿರ ಸಂಖ್ಯೆಯ ಪ್ರಬಂಧದಲ್ಲಿನ ಈ ದಶಕದ ಮೂಲಕವಾಗಿ, ಮಧುಪ್ರವಾಹವು ಅವಿಚ್ಛಿನ್ನವಾಗಿ ಪ್ರವಹಿಸುತ್ತಿರುವ ಕಮಲ ಪುಷ್ಪದಲ್ಲಿ ನೆಲಸಿರುವ ಲೋಕಮಾತೆ ಲಕ್ಷ್ಮೀದೇವಿಯು, ಸಕಲ ಪಾಪಗಳನ್ನೂ ತನ್ನ ಕಟಾಕ್ಷವೀಕ್ಷಣ ಮಾತ್ರದಿಂದಲೇ ನಾಶಪಡಿಸಿ ನಮ್ಮನ್ನು ರಕ್ಷಿಸುವಂತಾಗಲಿ (೪-೫-೧೧) ವೃಕ್ಷಷಂಡಗಳಿಂದ ಕಂಗೊಳಿಸುವ ಆರಾಮಗಳ ವೇಂಗಡಕ್ಕೆ ಸ್ವಾಮಿಯಾದವನನ್ನು, ಕೋಟೆ ಕೊತ್ತಳಗಳಿಂದ ಆವರಿಸಿದ ತೆನ್‌ಕುರುಗೂರ್ ನಿವಾಸಿ ಶಠಗೋಪರು ಸ್ತುತಿಸಿದ ರಮಣೀಯವಾದ ಛಂದೋಬಂಧಗಳಿಂದ ಮೆರೆಯುವ ಸಹಸ್ರ ಪದ್ಯಗಳಲ್ಲಿ ಈ ಹತ್ತನ್ನು ಬಲ್ಲವರು, ದಿವ್ಯಶೀಲ ವೃತ್ತಾದಿ ರಮ್ಯತೆಯುಳ್ಳ ಬಾನವರ (ದೇವತೆಗಳ) ಭೋಗವನ್ನು ಅನುಭವಿಸುವವರಾಗುತ್ತಾರೆ. (೬-೬-೧೧) ಪರಮಪದದಲ್ಲಿದ್ದೀಯೆ, ಬೆಟ್ಟದ ಮೇಲೆ ನೆಲಸಿರುವೆ, ಸಮುದ್ರದಲ್ಲಿ ಶಯನಿಸಿದ್ದೀಯೆ, ಪ್ರಪಂಚದ ವಸ್ತುಗಳಲ್ಲೆಲ್ಲಾ ಅಂತರ್ಯಾಮಿಯಾಗಿ ಅಡಗಿಕೊಂಡಿದ್ದೀಯೆ, ಹೀಗೆ ಅಸಂಖ್ಯವಾಗಿ ಇರತಕ್ಕ ಸ್ವಭಾವವುಳ್ಳ ಬಹಿರಂಡಗಳಲ್ಲಿ ನೆಲಸಿರುವ ನೀನು ನನ್ನ ಪ್ರಾಣಾಶ್ರಯವಾದ ಮನಸ್ಸಿನ ಒಳಗೂ ಸಂಚಾರ ಮಾಡುತ್ತಾ ನಿನ್ನ ರೂಪವನ್ನು ಮಾತ್ರ ವ್ಯಕ್ತಗೊಳಿಸದೇ ಅವ್ಯಕ್ತನಾಗಿಯೇ ಉಳಿದಿರುವೆ. (೬-೯-೫) ರೇಖೆಗಳಿಂದ ಕಂಗೊಳಿಸುವ ಕೈಬಳೆಗಳನ್ನುಳ್ಳ ನನ್ನ ಸಖಿಯರೇ ! ನಮ್ಮ ಶತ್ರುಪ್ರಾಯರಾದ ಜನರ ಮುಂದೆ ಲಜ್ಜೆಯಿಂದ ನಿಮಗೆ ನಾನು ಹೇಳತಕ್ಕ ಮಾತು ಒಂದನ್ನು ಹೇಗೆ ವ್ಯಕ್ತಪಡಿಸಲಿ ? ಅದಕ್ಕಾಗಿ ಹಿಂದು ಮುಂದು ನೋಡುತ್ತಿದ್ದೇನೆ. ಆದಕ್ಕೆ ತಕ್ಕ ರೀತಿಯ ಅಭಿವ್ಯಕ್ತತೆಯು ಸಿಕ್ಕದೇ ಹೋಗಲು ನನಗೆ ತಿಳಿದಂತೆ ವ್ಯಕ್ತಪಡಿಸಿಬಿಡುತ್ತೇನೆ. ಹೇಗಾದರೂ ತಿಳಿದುಕೊಳ್ಳಿರಿ. ತೀಕ್ಷ್ಣದೃಷ್ಟಿಯನ್ನುಳ್ಳ

ಗರುಡನ ಮೇಲೆ ಕುಳಿತ ನನ್ನ ಸ್ವಾಮಿ ವೇಂಗಡದೊಡೆಯನನ್ನು ಶರಣಾಗಲು ಪ್ರಯತ್ನಿಸಿ ನನ್ನ ಬಳೆಗಳು ಸಡಿಲವಾಗಿ ಬಿದ್ದುಹೋದವು. ನನ್ನ ಮೈಕಾಂತಿಯೂ ಮಂಕಾಯಿತು. ನನ್ನ ಸ್ತನಗಳೂ ವಿವರ್ಣಗೊಂಡು ಶೈಥಿಲ್ಯ ಹೊಂದಿದುವು. (೮–೨–೧) ಪಾಪಪುಣ್ಯಗಳೆಂಬ ದ್ವಿವಿಧ ಸ್ವರೂಪದ ಕರ್ಮಗಳನ್ನು ಇಲ್ಲದಂತೆ ನಾಶಪಡಿಸುವ, ಪ್ರಕೃತಿಯೊಡನೆ ಒಂದಾಗಿ ದೇವಾದಿ ಶರೀರದಲ್ಲಿ ಪ್ರವೇಶಿಸದೇ ಇರುವಂತೆ ಮಾಡಿ ನಮಗೆ ಉಜ್ಜೀವನವನ್ನು ಉಂಟುಮಾಡುವವನು ನಿಂತ ವೇಂಗಡವು ಶ್ಲಾಘ್ಯವಾದ ಪುಣ್ಯ ಭೂಮಿಯೇ ಸರಿ. ಅದನ್ನು ಬಳಿಸಾರ್ದು, ಆಶ್ರಯಿಸಿ, ಶರಣಾಗತಿ ಮಾಡುವವರೇ ದೇವತಾ ಸ್ವರೂಪರು (೯–೩–೮) ಅತಸೀ ಕುಸುಮಗಾತ್ರನೂ, ಮೇಘಶ್ಯಾಮಕೋಮಲನೂ, ಪೂತನಿಯ ವಿಷಸ್ತನ್ಯಗಳನ್ನು ಉಂಡಬಾಯನ್ನುಳ್ಳವನೂ ಆದ ಮಾಧವನು ವೇಂಗಡದಲ್ಲಿ ನೆಲಸಿರುವನು. (೧೦–೫–೬) ತಿರುಮಾಲಿರುಂ ಶೋಲೆಮಲೈಯನ್ನೂ, ಕ್ಷೀರಾಬ್ಧಿಯನ್ನೂ, ನನ್ನ ತಲೆಯನ್ನೂ, ಪರಮಪದವನ್ನೂ, ನನ್ನ ಶರೀರವನ್ನೂ, ಮಾಯಾತ್ಮಕವಾದ ನನ್ನ ಆತ್ಮವಸ್ತುವನ್ನೂ, ಮನೋವಾಕ್ಕರ್ಮಗಳನ್ನೂ ಅವನು ಒಂದು ಕ್ಷಣವೂ ಬಿಟ್ಟಿರಲಾರನು. ಜಗತ್ಕಾರಣಭೂತನಾದ ಆ ನನ್ನ ಸ್ವಾಮಿಯು ಒಬ್ಬನೇ ಸರ್ವೇಶ್ವರನಾಗಿದ್ದಾನೆ (೧೦–೬–೮)

ಆವರಣದಲ್ಲಿ ಸೂಚಿಸಿರುವ ಮೂರು ಅಂಕಿಗಳೂ ಆಯಾ ಶತಕ, ದಶಕ ಮತ್ತು ಸ್ತೋತ್ರ ಸಂಖ್ಯೆಗಳು, ಎಂದರೆ ೧–೮–೩ ಎಂದಾಗ ಒಂದನೆಯ ಶತಕದಲ್ಲಿನ ೮ನೇ ದಶಕದ ಮೂರನೆಯ ಪಾಶುರ ಎಂದು ಅರ್ಥ. ಆವರಣದ ಸಂಖ್ಯೆಗಳನ್ನು ಮೇಲ್ಕಂಡಂತೆ ಗುರುತುಪಡಿಸಿಕೊಳ್ಳಬೇಕು.

ಇನ್ನು ತಿರುವಾಯ್ಮೊಳಿಯ ಮೂರು ದಶಕಗಳಲ್ಲಿ ಸತತವಾಗಿ ತಿರುವೇಂಗಡವನ್ನು ಹಾಡಿರುವ ರೀತಿಯನ್ನು ಗಮನಿಸೋಣ. ಈ ಕೆಳಗಿನದು ತೃತೀಯ ಶತಕದ ತೃತೀಯ ದಶಕದ ಹತ್ತು ಪಾಶುರಗಳ ಮತ್ತು ಹನ್ನೊಂದನೆಯ ಮಂಗಳ ಶ್ಲೋಕದ ಅರ್ಥ ವಿವರಣವು.

ಶ್ರೀ ವೇಂಕಟಾದ್ರಿಯಲ್ಲಿ ವಾಸಮಾಡುವ ದಿವ್ಯ ತೇಜೋಮಯನಾದ ನಮ್ಮ ಕುಲಪರಂಪರೆಗೆ ನಾಥನೆನಿಸುವ ಸ್ವಾಮಿಗೆ ನಾವು ಅವಿಚ್ಛಿನ್ನವಾಗಿ ಸರ್ವದೇಶ ಸರ್ವಕಾಲ ಸರ್ವ ವ್ಯವಸ್ಥೆಗಳಲ್ಲೂ ಸರ್ವವಿಧ ಕೈಂಕರ್ಯ ಮಾಡಬೇಕು. ನಮ್ಮ ಪರಂಪರೆಗೆ ಪ್ರಥಮನಾದವನೇ, ನಿತ್ಯಸೂರಿಗಳು ಅವರ ಮುಖ್ಯಸ್ಥರಾದ ವಿಷ್ವಕ್ಸೇನರೊಡಗೂಡಿ ಅರ್ಚಿಸಿದ ಪುಷ್ಪಗಳು ಪರಮಾತ್ಮನ ಸ್ಪರ್ಶ ಮಾತ್ರ ದಿಂದ ವಿಕಸನ ಹೊಂದಿ ಚೆಲ್ಲಾಡಿರುವಂತಹ ತಿರುವೇಂಗಡದಲ್ಲಿ ವಾಸಮಾಡುವುದರಿಂದ ಪರಮಪದವನ್ನು ಬಯಸಿ ನಾವು ಹೋಗಬೇಕಾದ ಪ್ರಮೇಯವೇ ಇಲ್ಲ. ತನ್ನ

ಸ್ವಾಮಿತ್ವ ಪ್ರಕಾಶದಿಂದಲೂ, ತದನುಗುಣವಾದ ಆಶ್ಚರ್ಯಗುಣಚೇಷ್ಟಿತನೂ, ಸೌಂದರ್ಯಶಾಲಿಯೂ, ಕಮಲನೇತ್ರನೂ, ತೊಂಡೆಯ ಹಣ್ಣಿನಂತಹ ಅಧರ ವುಳ್ಳವನೂ, ನೀಲರತ್ನದ್ಯುತಿಪ್ರಕಾಶನೂ, ನಿರ್ಮಲವಾದ ಪ್ರವಾಹ ಜಲದಿಂದ ಕೂಡಿದ ವೇಂಕಟಾದ್ರಿಯಲ್ಲಿ ವಾಸವಾಗಿರುವ ಅಸಂಖ್ಯಾತ ಕಲ್ಯಾಣಗುಣಗಳನ್ನುಳ್ಳ ನಿತ್ಯಸೂರಿಗಳಿಗೆ ಸ್ವಾಮಿಯಾದನು. ಅತ್ಯಂತ ನೀಚನೂ, ಗುಣಹೀನನೂ ಆದ ನನ್ನಲ್ಲಿಯೂ ಅತ್ಯಂತ ಪ್ರೀತಿಯನ್ನು ಇಟ್ಟಿರುವ ಪರಂಜ್ಯೋತಿ ಸ್ವರೂಪನಾದ ತಿರುವೇಂಗಡದೊಡೆಯನನ್ನು 'ಈತನು ನಿತ್ಯಸೂರಿಗಳಿಗೆ ಅಧಿಪತಿಯೆಂದು' ಪ್ರಶಂಸಿಸಿದರೆ ಅದರಲ್ಲಿ ಅತಿಶಯವಿರುತ್ತದೆಯೆ ? ವೈದಿಕರ ವೇದಶಾಸ್ತ್ರಾದಿಗಳಲ್ಲಿ ವಿವರಿಸಲ್ಪಟ್ಟ ಭೋಗ್ಯತಾತಿಶಯವೂ ನಿರ್ದೋಷಯುಕ್ತವೂ ಆದ ಕಲ್ಯಾಣಗುಣ ಪರಿಪೂರ್ಣನಾದ ತಿರುವೇಂಗಡದೊಡೆಯನನ್ನು 'ಉಜ್ವಲವಿಗ್ರಹವಿಶಿಷ್ಟ, ಸಕಲ ಲೋಕ ಸಂಸೇವ್ಯನಾದ ಆದಿಮೂರ್ತಿ' ಎಂದು ಕರೆದರೆ ಅವನ ಮಹಿಮೆಗೆ ಸಾಕಾಗುವುದೋ ? ವೇಂಗಡದಲ್ಲಿ ನಿತ್ಯವಾಸ ಮಾಡುವ ಸ್ವಾಮಿಗೆ ತಕ್ಕಂತೆ ನಮೋವಾಚಕವಾದ ಈ ಉಕ್ತಿವ್ಯಾಪಾರವನ್ನು ತಮ್ಮ ಶಿರದಲ್ಲಿ ಧರಿಸಿದವರಿಗೆ (ಎಂದರೆ ಅವನನ್ನು ಆಶ್ರಯಿಸಿದವರಿಗೆ) ಋಣರೂಪವಾದ ಪೂರ್ವಾರ್ಜಿತ ಪಾಪಗಳೂ, ಉತ್ತರಾಘಗಳೂ ಕೂಡ ಸಂಪೂರ್ಣವಾಗಿ ದಗ್ಧವಾಗಿಬಿಡುವುವು. ಇದು ನಿಜವು. ಆಶ್ರಿತರಾದವರು ತಮ್ಮ ಸ್ವರೂಪಕ್ಕೆ ಅನುಗುಣವಾದ ಭಗವದನು ಭವವನ್ನೇ ಮಾಡಿ ಶುದ್ಧವೃತ್ತರಾಗುವರು. ಶ್ಲಾಘ್ಯವಾದ ಪುಷ್ಪ, ಪರಿಶುದ್ಧ ವಾದ ಉದಕ, ವಿಲಕ್ಷಣವಾದ ಧೂಪದೀಪಾದಿಗಳನ್ನು ಕೊಂಡುಬಂದು ನಿತ್ಯಸೂರಿ ಗಳೂ ಕೂಡ ಸೇನಾಧಿಪತಿ ಸಮೇತರಾಗಿ ಅತ್ಯಾದರದೊಡನೆ ಶ್ರೀ ತಿರು ವೇಂಗಡದೊಡೆಯನನ್ನು ಆರಾಧಿಸಿ ಕೃತಾರ್ಥರಾಗುವುದರಿಂದ ವಿಸ್ತೀರ್ಣವಾದ ಈ ಪರ್ವತವೇ ನಮಗೆ ಪರಮಸಾಮ್ಯವನ್ನುಂಟುಮಾಡುವ ಮೋಕ್ಷವನ್ನು ತರುವುದು. ಶೀತದಿಂದ ಕೂಡಿದ ವರ್ಷಾಘಾತವನ್ನು ತಡೆಯಲು ಗೋವರ್ಧನ ಗಿರಿಯನ್ನು ಎತ್ತಿ ರಕ್ಷಿಸಿದನು. ಆಕ್ರಮಿಸಲ್ಪಟ್ಟ ಭೂಮಿಯನ್ನು ಅಳೆದು ವ್ಯಾಪಿಸಿದನು. ಇಂತಹ ಪರಮಶೇಷಿಯಾದ ಭಗವಂತನು ತಿರುವೇಂಗಡದ ಮಲೆಯನ್ನು ಸೇರಿದನು. ಈ ಮಲೆಯೊಂದನ್ನು ಆಶ್ರಯಿಸುವುದರಿಂದಲೇ ನಮ್ಮ ಪಾಪಗಳು ನಷ್ಟಗೊಳ್ಳುವುವು. ತಿರುವೇಂಗಡದಲ್ಲಿ ನಿಂತಿರುವ ಕೃಷ್ಣ ರೂಪಿಯಾದ ಭಗವಂತನ ಪಾದಾರವಿಂದಗಳನ್ನು ಮನೋವಾಕ್ಕಾಯಗಳಲ್ಲಿ ನಿಲ್ಲಿಸಿಕೊಳ್ಳುವವರಿಗೆ ಜರಾ ಮರಣ ಪುನರ್ಜನ್ಮಾದಿಗಳು ಮತ್ತು ವ್ಯಾಧಿಗಳೂ ನಾಶಗೊಳ್ಳುತ್ತವೆ. ವಿಸ್ತೃತವಾದ ಫಣಗಳಿಂದ ಕೂಡಿದ ಆದಿಶೇಷನನ್ನು ಶಯನವಾಗುಳ್ಳ ಸರ್ವೇಶ್ವರನು ನಿತ್ಯವಾಸ ಮಾಡುವ ತಿರುವೇಂಗಡದ ಸಾನು ಪ್ರದೇಶವನ್ನು ನಿಮ್ಮ ಆಯುಃಪರಿಮಿತಿಯ ಮುಕ್ತಾಯ ಕಾಲವು ಸಮೀಪಿಸಿ,

ವೃಕ್ಷಷಂಡರಂಜಿತವಾದ ಕುರುಗೂರಿನ ಶಡಗೋಪರು ರಚಿಸಿದ ಅಸದೃಶವಾದ ಸಾವಿರ ಪಾಶುರಗಳಲ್ಲಿನ ಈ ದಶಕವನ್ನು ಅರಿತವರು ಕೈಂಕರ್ಯ ಸಾಮ್ರಾಜ್ಯವನ್ನು ಹೊಂದಿ ಲೋಕದವರೆಲ್ಲಾ ಸ್ತೋತ್ರ ಮಾಡುವಂತೆ ಬಾಳುವರು.

ಇನ್ನು ಷಷ್ಠಮ ಶತಕದ ದಶಮ ದಶಕದಲ್ಲಿ ತಿರುವೇಂಗಡವನ್ನು ಕೀರ್ತಿಸಿ ಧನ್ಯರಾಗೋಣ.

ಈ ಸಮಸ್ತ ಭುವನವನ್ನೂ ಭಕ್ಷಿಸಿದ ಮಹಾವಕ್ತ್ರವುಳ್ಳವನೇ, ಅಪಾರ ಯಶಸ್ಸಿಗೆ ಆಕರನಾದವನೇ, ಸ್ವಾಭಾವಿಕೌಜ್ವಲ್ಯ ಪರಿಪೂರ್ಣ ಪ್ರಕಾಶವುಳ್ಳ ದಿವ್ಯ ಮಂಗಳ ವಿಗ್ರಹನೂ ಆದ ಮಹಾಮಹಿಮನೆ, ದಾಸನಾದ ನನಗೆ ಪ್ರಾಣಸ್ವರೂಪನೆ, ಸಕಲ ಲೋಕಗಳಿಗೂ ತಿಲಕಪ್ರಾಯವಾಗಿ ನಿಂತ ತಿರುವೇಂಗಡದಲ್ಲಿರುವ ನನ್ನ ಸ್ವಾಮಿಯೇ, ಕುಲಕ್ರಮದಲ್ಲಿಯೂ ಅನಾದಿ ಸಿದ್ಧನಾದ ದಾಸ್ಯವುಳ್ಳವನು ನಾನು; ನಿನ್ನ ತಿರುವಡಿಗಳನ್ನು ಆಶ್ರಯಿಸುವ ಉಪಾಯವನ್ನು, ಕ್ರಮವನ್ನು ದಯವಿಟ್ಟು ತಿಳಿಸು. ಕ್ರೂರವಾದ ರಾಕ್ಷಸರ ಸಮೂಹವೆಲ್ಲಾ ಧ್ವಂಸವಾಗುವಂತೆ ಮಾಡಿದ, ಪ್ರಜ್ವಲಿಸುವ ಚಕ್ರಾಯುಧವನ್ನು ಧರಿಸಿದ ನಿತ್ಯಸೂರೀಶ್ವರನೇ ? ಸ್ವಾಮಿಯೇ,. ವಿಕಸಿತೋಜ್ವಲ ಪುಂಡರೀಕ ಶೋಭಿತ ಪಾದಾರವಿಂದಯುಗಳನಾದ ತಿರುವೇಂಗಡದ ಅಧಿಪತಿಯೇ, ನಿನ್ನಲ್ಲಿ ಅಪಾರ ಪ್ರೇಮಮಗ್ನನಾಗಿರುವ ದಾಸಭೂತನಾದ ನನಗೆ ನಿನ್ನ ಪಾದಗಳನ್ನು ಆಶ್ರಯಿಸುವ ರೀತಿಯನ್ನು ಕೃಪೆಯಿಂದ ಹೇಳು, ಮೇಘದ ಬಣ್ಣಕ್ಕೆ ಭ್ರಾಂತಿಯೇರ್ಪಡುವಂತೆ ಮೈಕಾಂತಿಯುಳ್ಳ ಸ್ವಾಮಿಯೆ, ಮನಸ್ಸಿನಲ್ಲಿ ಹೊಕ್ಕು ರುಚಿಯನ್ನು ನೀಡುವ ಅಮೃತವೇ ! ನಿತ್ಯಸೂರಿಗಳ ಅಧಿಪತಿಯೆ ! ರಮ್ಯ ಪ್ರವಾಹಗಳು ತಂದು ರಾಶಿ ಹಾಕುವ ವಜ್ರ ವೈಢೂರ್ಯಾದಿಗಳಿಂದ ಮೆರೆಯುವ ತಿರುವೇಂಗಡದ ಸ್ವಾಮಿಯೆ ! ನಿನ್ನ ಪಾದಾರವಿಂದಗಳನ್ನು ಆಶ್ರಯಿಸುವಂತೆ ದಾಸರಾದ ನಮಗೆ ಅನುಗ್ರಹಿಸು. ಲೋಕವನ್ನು ಹಿಂಸಿಸಿದ ರಾಕ್ಷಸರ ಸಮೂಹದ ಮೇಲೆ ಅಗ್ನಿಮುಖವಾದ ಬಾಣಗಳ ಮಳೆ ಕರೆದ ಧನುಸ್ಸನ್ನು ಹಿಡಿದಿರುವವನೆ! ಮಹಾಲಕ್ಷ್ಮಿಯ ಅನುರೂಪ ನಾಯಕನೆ! ದಿವ್ಯ ತೇಜೋ ರಾಶಿಯೆ ! ದೇವತೆಗಳೂ, ಮುನಿವರರೂ ಗುಂಪಾಗಿ ಬಂದು ಸೇವಿಸುವ ತಿರುವೇಂಗಡದೊಡೆಯನೇ ! ಪುಷ್ಪಗಳಿಂದ ರಂಜಿಸುವ ಪಾದಾರವಿಂದಗಳನ್ನು ಮಹಾ ಪಾಪಿಯಾದ ನಾನು ಸೇರುವ ಉಪಾಯವನ್ನು ಬೋಧಿಸು. ಒಂದಕ್ಕೊಂದು ಸೇರಿದಂತೆ ಬೆಳೆದಿದ್ದ ಸಪ್ತ ಸಾಲವೃಕ್ಷಗಳನ್ನು ಭೇದಿಸಿದ ಅಪೂರ್ವ ಬಿಲ್ಗಾರನೆ ! ಹೊಂದಿಕೊಂಡಂತೆ ಇದ್ದ ಯಮಳ ವೃಕ್ಷಗಳ ನಡುವಿನಿಂದ ನುಗ್ಗಿದ ಜಗತ್ಕಾರಣನೆ ! ಕಾರ್ಮೇಘಗಳೋಪಾದಿ ಇರುವ ಆನೆಗಳ ಹಿಂಡಿನಿಂದ ರಂಜಿಸುವ ತಿರುವೇಂಗಡಕ್ಕೆ.

ಸ್ವಾಮಿಯೇ ಮಹಾಮುನಿಯಿಂದ ಕೂಡಿದ ಚಾಪಹಸ್ತನಾದ ನಿನ್ನ ಪಾದಗಳನ್ನು ಸೇರುವುದು ಯಾವ ಕಾಲಕ್ಕೆ ? ಅಯ್ಯೋ ! ಪ್ರಪಂಚವನ್ನು ಅಳೆದ ಪಾದಗಳನ್ನು ಎಂದಿಗೆ ಕಾಣುವೆವೋ ಎಂದು ಕಾತುರರಾಗಿ ನಿತ್ಯಸೂರಿಗಳು ನಿಂತು ಸ್ತೋತ್ರ ಮಾಡಿ ಗುಂಪು ಗುಂಪಾಗಿ ಮೆಯ್ ಮನಸ್ಸಿನಿಂದ ಮಾಡುವ ಸೇವೆಯನ್ನು ಕೊಳ್ಳುವ ವೇಂಗಡದೊಡೆಯನೆ ದಾಸನಾದ ನಾನು ಈ ಶರೀರವಿರುವಾಗ ನಿನ್ನ ಪಾದಗಳನ್ನು ಸೇರುವುದು ಎಂದಿಗೆ ? ದಾಸನಾದ ನಾನು ಆಶ್ರಯಿಸಿ ನಿರಂತರವಾಗಿ ಅನುಭವಿಸಬೇಕಾದ ಅಮೃತವೇ ! ನಿತ್ಯಸೂರಿಗಳಿಗೆ ಅಧಿಪತಿಯೆ ! ಶತ್ರುಧ್ವಂಸಕನಾದ ಗರುಡನನ್ನೇ ಧ್ವಜವನ್ನಾಗಿ ಹೊಂದಿರುವ ಸುಂದರ ಬಿಂಬಾಧರಯುಕ್ತನಾದ ಸ್ವಾಮಿಯೇ ! ಗುಲ್ಮದಂತೆ ಅಪಾರವಾಗಿ ಹಬ್ಬಿಕೊಂಡಿರುವ ಪಾಪಗಳನ್ನು ನಾಶಪಡಿಸತಕ್ಕ ಔಷಧವೇ ತಿರುವೇಂಗಡದ ಸ್ವಾಮಿಯೇ ನಿನ್ನ ಪಾದಗಳನ್ನು ನೋಡುವುದಕ್ಕೆ ವ್ರತಾಚರಣೆ ಮಾಡದೆ ಕ್ಷಣಮಾತ್ರವೂ ಇರಲು ಇಷ್ಟಪಡೆನು. ನಿನ್ನ ಪಾದಗಳನ್ನು ನೋಡಲು ವ್ರತಾಚರಣೆ ಮಾಡದೆ ಇದ್ದಾಗ್ಯೂ ನಾನು ನಿನ್ನ ದರ್ಶನಕ್ಕೆ ವಿಲಂಬವನ್ನು ಸಹಿಸೆನು ಎಂದು ಸೂಕ್ಷ್ಮದರ್ಶಿಯಾದ ನೀಲಕಂಠನೂ, ಜ್ಞಾನಿಯಾದ ಬ್ರಹ್ಮನೂ, ಇಂದ್ರನೂ, ಸುಂದರ ನೇತ್ರರಾದ ದೇವತಾ ಸ್ತ್ರೀಯರೂ ಮತ್ತೂ ಇತರರು ಬಂದು ಆಶ್ರಯಿಸುವ ತಿರುವೇಂಗಡದ ಒಡೆಯನೇ ಕೃಷ್ಣನಾಗಿ ಜನಿಸಿ ಎಲ್ಲರನ್ನೂ ಮೋಹಪಡಿಸಿದಂತೆ ನನ್ನ ಸಮೀಪವನ್ನೂ ಬಂದು ಸೇರು. ಅನಾಶ್ರಿತರಿಗೆ ಸಮೀಪಕ್ಕೆ ಬಂದವನಂತೆ ಕಂಡುಬರದೇ ಇರುವಂತೆಯೂ ಆಶ್ರಿತರಿಗೆ ಸಮೀಪಕ್ಕೆ ಬಾರದೆ ಇರುವವನಂತೆ ಕಂಡುಬರುವವನಾಗಿಯೂ ಇರುವವನೆ ! ಕೆಂದಾವರೆಯ ಕಣ್ಣುಗಳನ್ನುಳ್ಳವನೆ ! ಪಕ್ವಬಿಂಬಾಧರನೆ ! ನಾಲ್ಕು ತೋಳುಗಳನ್ನುಳ್ಳ ಅಮೃತ ಸದೃಶನೆ ! ನನ್ನ ಪ್ರಾಣಧಾರಕನೆ ಚಿಂತಾಮಣಿಯ ಕಾಂತಿಯು ರಾತ್ರಿಯನ್ನು ಹಗಲನ್ನಾಗಿ ಮಾಡುವಂತಹ ಆಭರಣ ಶೋಭಿತನಾದ ವೇಂಗಡದೊಡೆಯನೆ ! ನಿನ್ನ ಪಾದಗಳನ್ನು ಮಾತ್ರ ದಾಸನಾದ ನಾನು ಒಂದು ಕ್ಷಣವೂ ಅಗಲಿರಲಾರೆನು. ನಿನ್ನನ್ನು ಬಿಟ್ಟು ಕ್ಷಣಮಾತ್ರವೂ ಇರಲಾರದಂತಹ ಪದ್ಮವಾಸಿನಿಯಾದ ಲಕ್ಷ್ಮೀದೇವಿಯು ನಿತ್ಯ ವಾಸಮಾಡುವ ಎದೆಯನ್ನು ಹೊಂದಿದವನೇ ! ಅಸಮಾನ ಕೀರ್ತಿಶಾಲಿಯೆ ! ತ್ರಿವಿಧ ಚೇತನಾ ಚೇತನ ಪ್ರಪಂಚ ವ್ಯಾಪಕನೂ, ನನ್ನನ್ನು ಆಳುವವನೂ, ಅನ್ಯಾದೃಶರಾದ ದೇವಮುನಿ ಬೃಂದವು ಆದರಿಸಿ ಆಶ್ರಯಿಸುವ ವೇಂಗಡದೊಡೆಯನೆ ಶರಣ್ಯಾಂತರವನ್ನೂ ಬಿಟ್ಟಿದ ದಾಸನಾದ ನಾನು ನಿನ್ನ ಪಾದಗಳ ಕೆಳಗೆ ಸೇರಿಕೊಂಡುಬಿಟ್ಟೆನು. ದಾಸರೇ ! ಪಾದಗಳ ಕೆಳಗೆ ಸೇರಿಕೊಂಡು ಪ್ರವೇಶಿಸಿ ಬಾಳಿರಿ ಎಂದು ಹೇಳಿ ಹೇಳಿ ತನ್ನ ಅನುಗ್ರಹವನ್ನೂ ನೀಡುವ ರೀತಿಗೆ ಸಮಾನರಿಲ್ಲದ ಸರ್ವೇಶ್ವರನನ್ನು ಸ್ತುತಿಸಲು ಸಸ್ಯಭರಿತ ಕ್ಷೇತ್ರವಾದ ಕುರುಗೂರಿನ ಶಠಗೋಪರು ರಚಿಸಿರುವ ಸಾವಿರ ಪದ್ಯ

ಮಾಲೆಯಲ್ಲಿನ ತಿರುವೇಂಗಡ ಸಂಬಂಧಕವಾದ ಈ ಹತ್ತು ಪಾಶುರಗಳನ್ನು ಆಶ್ರಯಿಸಿ ಪಠಿಸುವವರನ್ನು ಆಶ್ರಯಿಸುವವರೂ ಸಹ ಪರಮಪದದಲ್ಲಿ ನಿತ್ಯವಾಸದ ಸೌಲಭ್ಯವನ್ನು ಪಡೆಯುತ್ತಿರುವರು.

ಸಪ್ತಮ ಶತಕದ ಚತುರ್ಥ ದಶಕದ ಪಾಶುರಗಳನ್ನು ಅವಲೋಕಿಸೋಣ. ಈ ಪಾಶುರಗಳಲ್ಲಿ ಪರಮಾತ್ಮನ ದಶಾವತಾರ ವಿವರಣೆ ಇರುವುದು ಮಾತ್ರವಲ್ಲದೆ ವೇಂಗಡದ ವಿಷಯವು ಸ್ವಲ್ಪವೂ ಪ್ರಸ್ತಾಪಿಸಲ್ಪಟ್ಟಿಲ್ಲ. ಆದರೆ ಪ್ರತಿ ಪಾಶುರದಲ್ಲೂ ಬರುವ 'ಅಪ್ಪನ್' ಎನ್ನುವ ಪದದ ಉಪಯೋಗದಿಂದಾಗಿ ಇದನ್ನು ವೇಂಗಡವನ್ನು ಕುರಿತ ಮಂಗಳಾಶಾಸನ ಪಾಶುರಗಳೆಂದು ನಿರ್ಧರಿಸಿದ್ದಾರೆ. ಈ ವಿಚಾರವನ್ನು ಈಗಾಗಲೇ ತಿಳಿಸಿದ್ದೇನೆ.

ಮೊದಲು ಚಕ್ರ, ನಂತರ ಶಂಖ, ಅದಾದ ನಂತರ ಧನುಸ್ಸು ಈ ಪ್ರಕಾರ ಆಯುಧಗಳು ಮೇಲೆದ್ದು ಪ್ರಕಾಶಿಸುವಂತೆಯೂ, ದಿಕ್ಕುಗಳಲ್ಲೆಲ್ಲಾ ಸ್ತೋತ್ರ ಘೋಷವು ಮೇಲೇಳುವಂತೆಯೂ, ಅಂಡ ಕಪಾಲವು ಭಿನ್ನವಾಗಿ ಆವರಣದಲ್ಲಿನ ಜಲದಲ್ಲಿ ಬುದ್ಬುದಗಳು ಏಳುವಂತೆಯೂ, ಕಿರೀಟವೂ ಮೇಲೆತ್ತಿದ ಪಾದವೂ ಉನ್ನತ ಪ್ರದೇಶದಲ್ಲಿ ಪ್ರಕಾಶಿಸುವಂತೆಯೂ, ಒಳ್ಳೆಯ ಕಾಲವು ಬಂದಾಗ ಸರ್ವೇಶ್ವರನಾದ ಅಪ್ಪನ್ (ವೇಂಗಡದೊಡೆಯನು) ಲೋಕವನ್ನು ಅಳೆದ ರೀತಿಯು ಎಷ್ಟೊಂದು ವೈಚಿತ್ರ್ಯವೋ! ದೇವತೆಗಳಿಗೆ ಹಬ್ಬವೇರ್ಪಡುವಂತೆ ಸಮುದ್ರ ಮಥನ ಮಾಡಿ ಸರ್ವೇಶ್ವರನಾದ ಅಪ್ಪನ್ (ವೇಂಗಡದೊಡೆಯನು) ಅಮೃತವನ್ನು ತಂದು ಕೊಟ್ಟಾಗ ನದಿಗಳು ಆ ಮಥನ ವೇಗದಿಂದ ತಮ್ಮ ಉತ್ಪತ್ತಿ ಸ್ಥಾನಗಳಾದ ಪರ್ವತಗಳನ್ನು ಕುರಿತು ಹಿಂದಕ್ಕೆ ಓಡಿದ ಘೋಷವೂ, ವಾಸುಕಿಯ ಶರೀರವನ್ನು ಮಂದರ ಪರ್ವತಕ್ಕೆ ಸುತ್ತಿ ಸಮುದ್ರದಲ್ಲಿ ಕಡೆದಾಗ ಆದ ಘೋಷವೂ, ಸಮುದ್ರದ ನೀರು ಉಲ್ಲೋಲ ಕಲ್ಲೋಲವಾಗಿ ಅಪ್ಪಳಿಸಿದ ಅಲೆಗಳ ಪರಸ್ಪರ ಘಾತದ ದೆಸೆಯಿಂದ ಎದ್ದ ಘೋಷವೂ, ಏಕಕಾಲದಲ್ಲಿ ಏರ್ಪಟ್ಟವು. ಮಹೋಪಕಾರಕನಾದ ವೇಂಗಡನಾಥನು ಇಂತಹ ಪ್ರಳಯ ಕಾಲದ ಪ್ರಕ್ಷುಬ್ಧತೆಯಲ್ಲಿ ಅಂಡ ಕಪಾಲದಲ್ಲಿ ಸಿಲುಕಿ ಹೂತುಹೋಗಿದ್ದ ಭೂಮಿಯನ್ನು ಕಿತ್ತು ಮೇಲೆತ್ತಿ ತನ್ನ ಕೋರೆಯ ದಾಡೆಯ ಮೇಲಿಟ್ಟುಕೊಂಡಾಗ ಸಪ್ತದ್ವೀಪ, ಸಪ್ತಪರ್ವತ, ಸಪ್ತಸಮುದ್ರಗಳೂ ಕೂಡ ತಮ್ಮ ತಮ್ಮ ಸ್ಥಾನದಲ್ಲೇ ಕ್ರಮವಾಗಿ ಇದ್ದಿತಲ್ಲಾ! ಭಗವಂತನ ಮಹಿಮೆ ಎಷ್ಟೊಂದು ಆಶ್ಚರ್ಯಮಯವಾದದ್ದು! ಸರ್ವೇಶ್ವರನಾದ ವೇಂಗಡದೊಡೆಯನು ಲೋಕವನ್ನೆಲ್ಲಾ ಭಕ್ಷಿಸಿದ ಸಂದರ್ಭದಲ್ಲಿ ಕಾಲವಿಭಾಗಗಳೂ, ಪಂಚಭೂತಗಳೂ, ಸಮೂಲವಾದ ಪರ್ವತ ನಕ್ಷತ್ರಾದಿ ಜ್ಯೋತಿರ್ಮಂಡಲಗಳೂ ಎಲ್ಲಾ ಒಟ್ಟಿಗೆ ನಷ್ಟವಾಗುವಂತೆ ಮಹಾಶಬ್ದವೊಂದು

ಏರ್ಪಟ್ಟಿತು. ಆ ಭಕ್ಷಣವು ಏನು ವಿಚಿತ್ರವೋ ! ವೇಂಗಡದೊಡೆಯನು ಶ್ರೀಕೃಷ್ಣನ ಅವತಾರವೆತ್ತಿದ್ದಾಗ ಭಾರತ ಯುದ್ಧದಲ್ಲಿ ಸಾರಥ್ಯ ಮಾಡುವ ಸಂದರ್ಭದಲ್ಲಿ ಯುದ್ಧದಲ್ಲಿ ಬಲಿಷ್ಠರಾದ ಮಲ್ಲರು ಕೆಳಗೆ ಬೀಳುವ ಶಬ್ದವೂ, ರಾಜ ಮಹಾರಾಜರ ಸೈನ್ಯವು ಭಯದಿಂದ ನಡುಗುತ್ತಿದ್ದ ಶಬ್ದವೂ, ಆಕಾಶದಲ್ಲಿ ಈ ಯುದ್ಧವನ್ನು ಈಕ್ಷಿಸುತ್ತಿದ್ದ ದೇವತೆಗಳ ಸಮೂಹದಿಂದ ಎದ್ದ ಸ್ತೋತ್ರಪಾಠದ ಶಬ್ದವೂ ಒಟ್ಟಿಗೆ ಸೇರಿದ್ದು ಎಷ್ಟು ಆಶ್ಚರ್ಯಮಯವಾದದ್ದು ! ಹಗಲು ಮುಗಿದು ಸಂಧ್ಯಾಕಾಲವು ಕವಿಯುತ್ತಿದ್ದಿತಲ್ಲಾ, ಆಗ ದಿಕ್ಕು ದೆಸೆಗಳೆಲ್ಲವೂ ರಕ್ತವರ್ಣದಿಂದ ಆಚ್ಛಾದಿತವಾಗಿರಲು ನರಸಿಂಹರೂಪವನ್ನು ಧರಿಸಿದ ಸ್ವಾಮಿ ವೇಂಗಡದೊಡೆಯನು ಆವಿರ್ಭವಿಸಿ ಹಿರಣ್ಯಕಶಿಪುವನ್ನು ಕೊಂದದ್ದು ಹೇಗಿತ್ತೆಂದರೆ ಒಂದು ಬೆಟ್ಟದ ಮೇಲೆ ಕುಳಿತ ಸಿಂಹವು ಬೆಟ್ಟವನ್ನೇ ಸೀಳುತ್ತಿರುವಂತೆ ಕಾಣುತ್ತಿದ್ದಿತು. ಇದು ಮಹದಾಶ್ಚರ್ಯಕರವಾದ ದೃಶ್ಯವೇ ಸರಿ ! ಎರಡು ಕಡೆಗಳಿಂದ ಬಾಣಗಳು ತಾಕುತ್ತಿದ್ದಾಗ ಘೋಷವೇರ್ಪಡುತ್ತಿದ್ದಂತೆಯೇ ಆ ಬಾಣಾಘಾತಕ್ಕೆ ಸಿಲುಕಿ ಶತ ಶತ ರಾಕ್ಷಸರ ಶರೀರಗಳು ಬೆಟ್ಟದೋಪಾದಿ ಹೊರಳಿ ಹೊರಳಿ ರಾಶಿ ಬೀಳು ತ್ತಿರಲು, ಅವುಗಳಿಂದ ಪ್ರವಹಿಸುವ ಶೋಣಿತಧಾರೆ ಸಮುದ್ರದ ನೀರಿನೊಡನೆ ಬೆರೆತು ಸಮುದ್ರವನ್ನು ಸೇರುವ ನದಿಗಳೆಡೆಗೆ ಸಾಗುತ್ತಿದ್ದಂತೆ ವೇಂಗಡದೊಡೆಯನ ಮತ್ತೊಂದು ರೂಪವಾದ ಶ್ರೀರಾಮಚಂದ್ರನು ಲಂಕಾ ನಗರವನ್ನು ಧೂಳೀಪಟ ಮಾಡುವ ವೈಭವ ದೃಶ್ಯ ಅದ್ಭುತ ರೀತಿಯಿಂದ ಪ್ರಕಾಶಿಸಿತು ! ಶ್ರೀಕೃಷ್ಣನು ಬಾಣಾಸುರನನ್ನು ತೋಳುಗಳನ್ನು ಕತ್ತರಿಸಿ ಕೆಡಹಿದಾಗ ಕುಕ್ಕುಟಧ್ವಜನಾದ ಸುಬ್ರಹ್ಮಣ್ಯನೂ, ಪ್ರಜ್ವಲಿಸುತ್ತಿದ್ದ ಅಗ್ನಿಯೂ, ತ್ರಿಣೇತ್ರದಿಂದ ಮೆರೆಯುತ್ತಿದ್ದ ರುದ್ರನೂ ಹೇಳದೆ ಕೇಳದೆ ಹಿಂತಿರುಗಿ ಪಲಾಯನ ಮಾಡಿದರಲ್ಲಾ ಇದನ್ನು ಎಲ್ಲರೂ ಗಮನಿಸಲಿಲ್ಲವೇನು ? ಜಗತ್ಕಾರಣ ವಸ್ತುವಾದ ವೇಂಗಡದೊಡೆಯನು ಆದಿಯಲ್ಲಿ ಲೋಕಗಳನ್ನು ಸೃಷ್ಟಿಸಿದಾಗ ಪಂಚಭೂತಗಳನ್ನೂ, ಪರ್ವತ ನದಿ ಗಳನ್ನೂ, ಚಂದ್ರಸೂರ್ಯಾದಿ ತೇಜೋರಾಶಿಗಳನ್ನೂ, ಮಳೆಯನ್ನೂ, ಜೀವರಾಶಿ ಗಳನ್ನೂ, ದೇವತೆಗಳನ್ನೂ ಸೃಷ್ಟಿಸಿದನು. ಮೇಯುತ್ತಿದ್ದ ಪಶುಗಳು ಸುರಕ್ಷಿತ ವಾಗಿರುವಂತೆಯೂ, ಮಲೆಯ ಮೇಲಿನ ಮೃಗಗಳು ಹೊರಳಿ ಕೆಳಗುರುಳು ವಂತೆಯೂ, ಪ್ರವಹಿಸುತ್ತಿದ್ದ ಗಿರಿಪ್ರವಾಹಗಳು ಶಬ್ದದೊಡನೆ ಕೆಳಗೆ ಸುರಿಯು ವಂತೆಯೂ, ಗೋಪಾಲರೆಲ್ಲಾ ನಿರ್ಭೀತರಾಗಿರುವಂತೆಯೂ ತಿರುವೇಂಗಡ ದೊಡೆಯನು ಶ್ರೀಕೃಷ್ಣರೂಪದಿಂದ ಗಿರಿಯನ್ನು ಮೇಲೆತ್ತಿ ಇಂದ್ರಪ್ರೇರಿತವಾದ ಸತತ ವರ್ಷಧಾರೆಯನ್ನು ತಡೆದು ಎಲ್ಲರನ್ನೂ ಕಾಪಾಡಿದನು. ಇಂತಹ ಗಿರಿಧಾರಿಯಾದ ಸ್ವಾಮಿಗೆ ದಾಸಭೂತರಾದವರೊಡನೆ ಸೇರಿಕೊಂಡು ನಿಂತಿರುವ ಶ್ರೀಶಠಾರಿಮುನಿರಚಿತ ದಿವ್ಯ ಪ್ರಬಂಧದಲ್ಲಿನ ಸಾವಿರ ಪಾಶುರಗಳಲ್ಲಿನ ಈ

ದಶಕವನ್ನು ಅರ್ಥವರಿತು ಪಠಿಸುವವರಿಗೆ ಪರಮಾತ್ಮನು ಸಕಲ ಕಾರ್ಯಗಳಲ್ಲೂ 'ಯಶಸ್ಸು ದೊರೆಯುವಂತೆ' ಮಾಡುತ್ತಾನೆ.

ನಮ್ಮಾಳ್ವಾರ್‌ರ ಪಾಶುರಗಳಲ್ಲಿ ಕಂಡುಬರುವ ಭಕ್ತಿಯ ಪಾರವಶ್ಯತೆಗೆ ಸಮ ಬೇರೊಂದಿಲ್ಲ. ಅವರು ತಿರುವೇಂಗಡವನ್ನೇ ಸರ್ವಸ್ವವೆಂದು ಭಾವಿಸಿ ಆ ಬೆಟ್ಟ, ಆ ಸ್ವಾಮಿ ಇವರ ಮಹಿಮೆಗಳಲ್ಲಿ ಬೆರೆತು ಕರಗಿ ಒಂದಾಗಿಹೋಗುತ್ತಾರೆ. ನಮ್ಮನ್ನೂ ಈ ಭಾವಸಮಾಧಿಗೆ ಕರೆದೊಯ್ಯಬಲ್ಲ ಗಾರುಡಿಗತನವಿದೆ. ಇವರಲ್ಲಿ ಪ್ರಕೃತಿ ವರ್ಣನೆಗೆ ಸ್ಥಾನವಿಲ್ಲ. ಹಿಂದಿನ ಆಳ್ವಾರುಗಳ ಶೈಲಿಯೇ ಬೇರೆ, ಇವರ ಶೈಲಿಯೇ ಭಿನ್ನವಾದುದು. ತಿರುವೇಂಗಡದ ಝರಿ ಪ್ರವಾಹದೊಡನೆ ಮುತ್ತು ರತ್ನ ಸ್ವರ್ಣಾದಿ ಲೋಹಗಳು ಕೊಚ್ಚಿಕೊಂಡು ಬರುವುದನ್ನು ಇವರೂ ತಿರುಮಳಿಶೈ ಆಳ್ವಾರ್ ಅವರಂತೆಯೇ ವರ್ಣಿಸಿದ್ದಾರೆ. ಇದು ಕವಿಸಮಯ ವೆನ್ನದೆ ವಿಧಿ ಇಲ್ಲ. ಈ ಲೋಹ, ಹರಳುಗಳು ಸಂಯುಕ್ತ ವಸ್ತುಗಳಾಗಿ ಪ್ರಪಂಚದ ಪ್ರಕೃತಿಯಲ್ಲಿ ಬೆರೆತಿರುತ್ತವೆ ಎಂಬುವುದನ್ನು ಈ ಆಳ್ವಾರುಗಳು ಏತಕ್ಕೆ ಮರೆತಿರುವರೋ ತಿಳಿಯದಾಗಿದೆ. ಆಳ್ವಾರುಗಳು ವೈರಾಗ್ಯವಂತರು. ಇಂತಹ ವೈಭವಾದಿಗಳಿಂದ ಏತಕ್ಕೆ ಆಕರ್ಷಿತರಾಗಿದ್ದಾರೆಂಬುವುದು ವಿದಿತವಾಗದ ಅಂಶ. ಈ ರೀತಿಯ ಅಸ್ವಾಭಾವಿಕ ವರ್ಣನೆಗಳಿಂದ ಕಾವ್ಯ ವೈಭವ ಹೆಚ್ಚುವುದು ಎಂದು ಹಿಂದಿನ ಕವಿಗಳು ತಿಳಿದಿರುವಂತೆ ತೋರುತ್ತದೆ. ಇಂತಹ ಅಸಹಜ ವಿಚಾರಗಳನ್ನು ಬದಿಗೊತ್ತಿ ನಾವು ಈ ಕೃತಿಸೌಂದರ್ಯವನ್ನು ಆಸ್ವಾದಿಸಿದಾಗ ನಮಗೆ ದೊರೆಯು ವುದು ತೃಪ್ತಿ, ಶಾಂತಿ, ಭಕ್ತಿ, ಪುಣ್ಯ ಸಂಪಾದನೆ ಮತ್ತು ಶ್ರೇಯಸ್ಸು !.

ಛ

ಆಳ್ವಾರುಗಳಲ್ಲಿ ಕುಲಶೇಖರರ ಭಕ್ತಿ ಇನ್ನೊಂದು ತೆರ. ಅದೇ ಒಂದು ವಿಚಿತ್ರ. ಈ ಮೊದಲು ಯಾವ ಆಳ್ವಾರುಗಳೂ ತೋರಿಸದ ಇವರ ಭಕ್ತಿಯು ಮುಖ್ಯ ವೇಂಗಡನಾಥನ ವಿಚಾರದಲ್ಲಂತೂ ಅಭೂತಪೂರ್ವವಾದದ್ದಾಗಿ ಕಂಡುಬರುತ್ತದೆ. ಇವರು ಕೇರಳದ ಅರಸರಾದರೂ, ರಾಜ್ಯ, ಕೋಶ, ಪದವಿ, ವ್ಯಾಮೋಹಗಳಿಗೆ ಮರುಳಾಗದೆ ಯಾವಾಗಲೂ ದೇವರು, ಭಕ್ತರು, ದೈವಸ್ತುತಿ ಸಂಕೀರ್ತನೆಗಳಿಂದೇ ಜೀವಮಾನವನ್ನೆಲ್ಲಾ ಕಳೆದ ಭಕ್ತರು. ಇವರ ಪಾಶುರಗಳಲ್ಲೂ ಇಂತಹ ವಿಲಕ್ಷಣ ಭಕ್ತಿಮಾರ್ಗವನ್ನು ನಾವು ಕಾಣುತ್ತೇವೆ. ಇವರ ರಚನೆ 'ಪೆರುಮಾಳ್ ತಿರುಮೊಳಿ' ೧೦೫ ಪಾಶುರಗಳಿಂದ ಕೂಡಿದೆ. ಶೈಲಿ ಕ್ಲಿಷ್ಟವಾದದ್ದೇ. ಇದೇ ಒಂದು ಸಾಹಿತ್ಯ ಪ್ರಕಾರ. ಇವರು ಒಂದು ದಶಕ—ಎಂದರೆ ಹತ್ತು ಪಾಶುರಗಳು, ಒಂದು ಮಂಗಳ ಶ್ಲೋಕಗಳಲ್ಲಿ ತಿರುವೇಂಗಡದ ಮಂಗಳಾಶಾಸನ ಮಾಡಿದ್ದಾರೆ. ಇವರು ವೇಂಗಡ, ತಿರುವೇಂಗಡ, ವಡವೇಂಗಡ, ವೇಂಗಡತ್ತಾನ್ ಎನ್ನುವ ಬಳಕೆಯಲ್ಲಿನ ವಿಶೇಷಣಗಳನ್ನೇ ಬಳಸಿದ್ದಾರೆ.

ನೀಳಾದೇವಿಗಾಗಿ ಸಪ್ತವೃಷಭಗಳನ್ನು ಜಯಿಸಿದ ಸ್ವಾಮಿಯ ಕೈಂಕರ್ಯ ಮಾಡುವುದನ್ನು ಮಾತ್ರ ನಾನು ಬೇಡುತ್ತೇನೆಯೇ ಹೊರತು, ಮಾಂಸ ಮಜ್ಜೆಗಳನ್ನು ಬೆಳೆಸುವಂತಹ ಐಶ್ವರ್ಯದಿಂದ ನಾನು ಮೆರೆಯಬೇಕೆಂಬ ಆಸೆಯನ್ನು ಕೋರುವುದಿಲ್ಲ. ಬಲಮುರಿ ಶಂಖವನ್ನು ಹಿಡಿದ ವೇಂಗಡದೊಡೆಯನ ಕೋನೇರಿಯಲ್ಲಿ ಒಂದು ಬಕವಾಗಿ ಹುಟ್ಟಿ ಕೈಂಕರ್ಯವನ್ನು ಎಸಗಲು ಬಯಸುತ್ತೇನೆ. ಚಿರಯೌವ್ವನವಾಗಲಿ,ರಂಭಾದಿ ಸ್ವರ್ಗ ಭೋಗಗಳಾಗಲಿ ಬೇಕಿಲ್ಲ ; ಭೂಲೋಕ ಸಾಮ್ರಾಜ್ಯವೂ ಬೇಡ. ಜೇನುಗಳಿಂದ ಆವರಿಸಲ್ಪಟ್ಟ ಹೂ ಗೊಂಚಲಿನಿಂದ ಸುರಮ್ಯವಾದ ತಿರುವೇಂಗಡದ ಮೇಲೆ ಒಂದು ಮೀನಾಗಿ ಜನ್ಮ ತಳೆದರೂ ಸಾರ್ಥಕ. ಬ್ರಹ್ಮ ರುದ್ರ ಇಂದ್ರಾದಿಗಳು ಒಳಗೆ ಹೋಗಲು ಹಿಂಜರಿದು ದರ್ಶನಾಕಾಂಕ್ಷಿಗಳಾಗಿ ಬಾಗಿಲಲ್ಲಿ ನಿಂತಿರುವಾಗ, ಮಿಂಚಿನ ಪ್ರಕಾಶದ ಚಕ್ರವನ್ನು ಧರಿಸಿದ ವೇಂಗಡದೊಡೆಯನು ಉಗಿಯುವ ಬಾಯ್ತಂಬುಲವನ್ನು ಬಂಗಾರದ ಉಗುಳು ಪಾತ್ರೆಯಲ್ಲಿ ಹಿಡಿಯಲು ಸಿದ್ಧನಾಗಿರುವ ಊಳಿಗದವನು ನಾನಾಗಲು ಇಚ್ಛಿಸುತ್ತೇನೆ. ಆ ದೇವತೆಗಳಿಗೆ ಲಭಿಸದ ಅಂತರಂಗ ಊಳಿಗವನ್ನು ನಾನು ಕೈಗೊಳ್ಳುವ ಭಾಗ್ಯಶಾಲಿಯಾದೇನೇ ? ಅಂದವಾದ ಹವಳಗಳನ್ನು ನೀಡುವ ತಂಪಾದ ಪಾಲ್ಗಡಲಿನಲ್ಲಿ ಪವಡಿಸಿರುವ ಪರಮಾತ್ಮನನ್ನು ಅಲೆಗಳು ಸೇವಿಸುತ್ತಿರಲು, ಆವನ ಪಾದಾರವಿಂದಗಳನ್ನು ಸೇವಿಸಲು ಸೊಗಸಾಗಿ ಗಾನ ಮಾಡಿಕೊಂಡಿರುವ ವೇಂಗಡದಲ್ಲಿ, ಒಂದು ಸಂಪಿಗೆಯ ಮರವಾಗಿ ನಿಲ್ಲುವ ಭಾಗ್ಯವನ್ನು ಹೊಂದುತ್ತೇನೆಯೆ ? ಭೀತಿಯನ್ನುಂಟುಮಾಡುವ ಮದದಾನೆಯ ಅಂಬಾರಿಯಲ್ಲಿ ಕುಳಿತು ಮೆರೆಯುವ ರಾಜ ಭೋಗ ಭಾಗ್ಯಾದಿಗಳನ್ನು ನಾನು ಬಯಸುತ್ತಿಲ್ಲ. ನನ್ನ ಸ್ವಾಮಿಯು ಇರುವ ವೇಂಗಡದ ಮಲೆಯ ಮೇಲೆ ಒಂದು ಕಂಬವಾಗಿ ನಿಲ್ಲುವ ಭಾಗ್ಯವನ್ನು ಅಪೇಕ್ಷಿಸುತ್ತೇನೆ. ಮಿಂಚಿನಂತೆ ಬಳಕುವ ಸೊಂಟವುಳ್ಳ ಊರ್ವಶಿ ಮೇನಕೆ ಮುಂತಾದವರ ನೃತ್ಯ ಗಾಯನಗಳಲ್ಲಿ ನನಗೆ ಆಸಕ್ತಿಯಿಲ್ಲ. ತೆನ್‌ತೆನ (ನಿರಂತರ)ವೆಂದು ಹಾಡುತ್ತಿರುವ ತಿರುವೇಂಗಡದಲ್ಲಿ ಒಂದು ಶಿಖರವಾಗಿ ನಿಲ್ಲಬಯಸುತ್ತೇನೆ. ಬಾನನ್ನು ಆಳುವ ಪ್ರಕಾಶಮಾನವಾದ ಚಂದ್ರನಂತೆ ಶ್ವೇತಛತ್ರದಡಿಯಲ್ಲಿ ಕುಳಿತು ರಾಜಾಧಿರಾಜನಾಗಿ ಪ್ರಜೆಗಳನ್ನು ಆಳುವ ವೈಭವವೂ ಬೇಡ. ಮಧು ಸುಗಂಧದಿಂದ ಆವರಿಸಿದ ಹೂದೋಟದ ತಿರುವೇಂಗಡದಲ್ಲಿ ಹರಿಯುವ ಗಿರಿಝರಿಯಾಗಿರಲು ಆಶಿಸುತ್ತೇನೆ. ಚಂದ್ರನನ್ನು ಧರಿಸಿದ ಜಟೆಯುಳ್ಳ ರುದ್ರನೂ, ಬ್ರಹ್ಮ ಇಂದ್ರಾದಿಗಳೂ, ಅವರವರ ಅಧಿಕಾರಕ್ಕನುಗುಣವಾಗಿ ಮಾಡುವ ಯಜ್ಞಫಲಗಳಾಗಿ ಅವರವರ ಇಷ್ಟಗಳನ್ನು ತೀರಿಸುವ ವೇದ ಪ್ರತಿಪಾದ್ಯನಾದ ಸ್ವಾಮಿಯು ಇರುವ ಪರಿಮಳಭರಿತವಾದ, ಶೀತಲವಾದ ತಿರುಮಲೆಯ ಮೇಲೆ ಭಕ್ತರ ಪಾದದಡಿಯ ಹಾದಿಯಾಗಿರಲು ಬಯಸುತ್ತೇನೆ. ತನ್ನ ತಿರುವಡಿಗಳಲ್ಲಿ ತಲೆವಾಗಿಸಿದ ಭಕ್ತರ ಪಾಪ ಫಲವಾದ ಸಂಸಾರ

ಸಂಬಂಧಗಳನ್ನೆಲ್ಲಾ ಕತ್ತರಿಸಿಹಾಕಿಬಿಡುವ ಪರಮಾತ್ಮನೇ ! ಆಶ್ರಿತರ ವಿಷಯದಲ್ಲಿ ಆಸಕ್ತಿಯುಳ್ಳವನೆ ! ವೇಂಗಡದವನೇ ! ನಿನ್ನ ಗುಡಿಯ ಬಾಗಿಲಿನಲ್ಲಿ ನಮ್ಮಂಥವರೂ, ಬಾನವರೂ, ಅಪ್ಸರೆಯರೂ ದರ್ಶನಕ್ಕೆ ಬಂದಾಗ ಅವರ ಪಾದಸ್ಪರ್ಶಕ್ಕೆ ಒಳಪಡುವಂತಹ ಹೊಸ್ತಿಲಾಗಿ ಇದ್ದುಕೊಂಡು ನಿನ್ನ ಹವಳದಂತಹ ಬಾಯನ್ನು ಕಾಣುತ್ತೇನೆಯೋ ? ಸ್ವರ್ಗಾಧಿಪತ್ಯವೇ ದೊರೆತರೂ ಸರಿ, ಊರ್ವಶಿಯು ಊಳಿಗ ವೆಸಗಿದರೂ ಸರಿಯೆ ನನಗೆ ಬೇಕಾಗಿಲ್ಲ. ಚೆಂಬವಳದಂತಹ ಬಾಯುಳ್ಳ ತಿರುವೇಂಗಡ ದೊಡೆಯನ ಬಂಗಾರದಂತಹ ಗಿರಿಯ ಮೇಲೆ ಏನಾದರೊಂದು ಆಗಿಯೇ ಆಗುತ್ತೇನೆ. ಘನವಾದ ತೊರೆಗಳಿಂದ ಒಡಗೊಂಡ ವಡವೇಂಗಡದವನ ಬಂಗಾರದಂತಹ ಚರಣಗಳನ್ನು ಸೇವಿಸಲಾಶಿಸಿ, ಶತ್ರುಗಳ ಸಂಹಾರ ಕಾರ್ಯವೇ ವೃತ್ತಿಯುಳ್ಳ ಕುಲಶೇಖರರು ನುಡಿದ ಲಕ್ಷಣೋಪೇತವಾದ ಪಾಶುರಗಳನ್ನು ಬಲ್ಲವರು ಭಗವತ್ ಪ್ರೀತಿಗೆ ಅರ್ಹರಾಗುತ್ತಾರೆ.

‘ಏನಾದರೂ ಆಗುತ್ತೇನೆ’ ಎಂದು ಆಳ್ವಾರ್ ಹೇಳಿರುವುದಕ್ಕೆ ಅನಂದಳ್ವಾರ್ ಎನ್ನುವ ಆಚಾರ್ಯರು “ತಿರುವೇಂಗಡಮುಡೈಯಾನೇ ಆದರೂ ಈ ಮಾತಿಗೆ ಹೊಂದುತ್ತದೆ” ಎಂದಿರುವರಂತೆ ! ಅದರ ಅರ್ಥವನ್ನು ಪೆರಿಯವಾಚ್ಚಾನ್ ಪಿಳ್ಳೈ ಎನ್ನುವ ವ್ಯಾಖ್ಯಾನ ಚಕ್ರವರ್ತಿಗಳು ರಸಭರಿತವಾದ ವ್ಯಾಖ್ಯಾನ ಮಾಡಿದ್ದಾರೆ. ಏನೆಂದರೆ “ಶೇಷಭೂತರಾದವರಿಗೆ ಹೊರತಾಗಿ ಶೇಷಿಯಾಗಿರುವನೆಂದರೂ ಸರಿಹೊಂದುತ್ತದೆ” ಎಂದಿದ್ದಾರೆ. (ಶೇಷರು ಎಂದರೆ ಜೀವರು ; ಶೇಷಿ ಎಂದರೆ ಪರಮಾತ್ಮ) ಆ ಶೇಷನಾಗಿರದಿದ್ದರೆ ಸರಿ ಎನ್ನುವ ಅರ್ಥವಾಗುತ್ತದೆ. ಇದಕ್ಕೆ ಭಟ್ಟರ ವಿವರಣೆ ಹೀಗಿದೆ “ನಾನು ಅರಿಯುವುದು ಬೇಡ, ತಿರುವೇಂಗಡದೊಡೆಯನು ಕೂಡ ಅರಿಯುವುದು ಬೇಡ. ಕಂಡವರು ಅರಿತು ಶ್ಲಾಘಿಸುವುದೂ ಬೇಡ. ತಿರುಮಲೆಯ ಮೇಲಿರುವ ಪದಾರ್ಥವಾದರೆ ಅದೇ ಸಮಂಜಸ”

ಇದೊಂದು ವಿಚಿತ್ರ ರೀತಿಯ ಸಾಹಿತ್ಯ ಶೈಲಿಯಾಗಿದೆ. ಆದರೂ ಆಕರ್ಷಕವಾಗಿದೆ. ಈ ಹೊಸ ತೆರನಾದ ಭಕ್ತಿಭಾವದ ಆಕರ್ಷಣೆಯಿಂದ ನಮ್ಮನ್ನು ಬಿಡಿಸಿಕೊಂಡು ಪೆರಿಯಾಳ್ವಾರ್ ಅವರ ತಪಸ್ಯೆ ಎಂತಹುದೆಂದು ಮನಗಾಣೋಣ.

ಜಿ

ಶ್ರೀ ವಿಲ್ಲಿಪುತ್ತೂರಿನ ನಿವಾಸಿಗಳಾದ ಪೆರಿಯಾಳ್ವಾರ್ ಅವರಿಗೆ ವಿಷ್ಣು ಚಿತ್ತರೆಂದು ಹೆಸರು. ಇತರ ಮತಗಳ ಸ್ಪರ್ಧೆಯ ನಡುವೆ ವಿಷ್ಣುವಿನ ಉತ್ಕೃಷ್ಟತೆಯನ್ನು ಎತ್ತಿಹಿಡಿದು ಪರವಾದಗಳನ್ನು ನಿರಸನ ಮಾಡಿದರು.

ಹೀಗೆ ಮಾಡಿದಾಗ ತಮ್ಮ ಹೊಗಳಿಕೆಯಿಂದ ಪರಮಾತ್ಮನಿಗೆ ದೃಷ್ಟಿಯಾಗುವುದೆಂದು ಹೆದರಿ 'ತಿರುಪ್ಪಲ್ಲಾಂಡ್' ಎನ್ನುವ ರಕ್ಷೋಘ್ನ ಸ್ತೋತ್ರವನ್ನು ಮಂಗಳಾಶಾಸನ ರೂಪದಲ್ಲಿ ಮಹಾವಿಷ್ಣುವಿಗೆ ಹಾಡಿದರು. ಪಲ್ಲಾಂಡ್ ಪ್ರಬಂಧವು 'ವೇದಕ್ಕೆ ಓಂಕಾರವು ಹೇಗೋ ಹಾಗೇ ದ್ರಾವಿಡ ವೇದಕ್ಕೆಲ್ಲಾ ಪ್ರಣವ ಸ್ವರೂಪದಂತೆ ಇದೆ' ಎಂದುವಿದ್ವಾಂಸರಿಂದ ತೀರ್ಮಾನಿಸಲ್ಪಟ್ಟಿತು. ಈ ಹಿರಿಯರಿಗೆ ಪೆರಿಯಾಳ್ವಾರ್ ಎನ್ನುವ ಸಾರ್ಥಕನಾಮವೂ ಅಂದಿನಿಂದಲೇ ಅಲಂಕರಿಸಲ್ಪಟ್ಟಿತು. ಪೆರಿಯಾಳ್ವಾರ್ ಇಂತಹ ಹಿರಿಮೆಯ ವ್ಯಕ್ತಿಗಳು. ಇವರ ಮತ್ತೊಂದು ಕೃತಿ 'ಪೆರಿಯಾಳ್ವಾರ್ ತಿರುಮೊಳಿ' ೪೭೩ ಪಾಶುರಗಳಿಂದ ಯುಕ್ತವಾಗಿದೆ. ಇದರಲ್ಲಿ ಪೆರಿಯಾಳ್ವಾರ್ ಅವರ ಭಕ್ತಿಭಾವ 'ತಾಯಿಯು ಮಗುವನ್ನು ಕಂಡಂತೆ' ವ್ಯಕ್ತಗೊಳ್ಳುತ್ತದೆ. ಇವರ ಈ ಭಾವಪ್ರದರ್ಶನಕ್ಕೆ ಶ್ರೀಕೃಷ್ಣ ಪರಮಾತ್ಮನೇ ಕಾವ್ಯ ವಸ್ತುವಾಗಿ ಸಿಲುಕಿದ್ದಾನೆ. 'ತಾನು ಯಶೋದೆ, ಪರಮಾತ್ಮ ತನ್ನ ಮಗ' ಎನ್ನುವ ಪರವಶತೆಯಿಂದ ಇವರು ತಮ್ಮ ತಿರುಮೊಳಿಯಲ್ಲಿ ಭಾವನೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ಸರಳ ಸುಂದರ ಶೈಲಿಯಿಂದ ಇವರ ಪ್ರಬಂಧ ರಂಜಿಸಿದೆ. ಈ ಪ್ರಬಂಧದ ೭ ಪಾಶುರ ಗಳಲ್ಲಿ ಮಾತ್ರ ತಿರುವೇಂಗಡದ ದೇವರ ಪ್ರಸ್ತಾಪವಿದೆ. ಬಾಲಕೃಷ್ಣನನ್ನು ಶ್ರೀನಿವಾಸರೂಪಿಯೆಂಬುದಾಗಿ ಆಳ್ವಾರ್ ಕರೆದಿದ್ದಾರೆ ಅಷ್ಟೇ, ಮತ್ತೇನೂ ತಿರುಮಲೆಯ ವರ್ಣನೆ ಇವರ ಪಾಶುರಗಳಲ್ಲಿ ಇಲ್ಲ.

ಪ್ರಕಾಶದಿಂದ ಕೂಡಿದ, ವರ್ತುಲಾಕಾರದ, ಆಕಾಶದಗಲಕ್ಕೂ ನಾಲ್ಕು ದಿಕ್ಕು ಗಳಿಗೂ ತೇಜಸ್ಸನ್ನು ಪ್ರಸರಿಸುವ ಚಂದ್ರಮನೇ, ನನ್ನ ಮಗನ ಮುಖಮಂಡಲದ ಕಾಂತಿಗೆ ನಿನ್ನ ಕಾಂತಿ ಸಾಟಿಯಾಗುವುದಿಲ್ಲ. ಆದರೂ ವಿಚಿತ್ರ ವನ್ನು ನೋಡು. ಅವನು ನೀನೇ ಬೇಕೆಂದು ಕೈಎತ್ತಿ ಕರೆಯುತ್ತಿದ್ದಾನೆ. ಮಗುವಾದ ತಿರುವೇಂಗಡದೊಡೆಯನ ರೂಪವೇ ಕೃಷ್ಣ. ಅವನ ಕೈ ಚಿಕ್ಕದು. ನಿನ್ನನ್ನು ಕರೆದು ಕೈ ಸೋಲುತ್ತಿದೆ, ನೋವಾಗುತ್ತಿದೆ. ಹಾಗಾಗುವುದಕ್ಕೆ ಮುಂಚೆಯೇ ಓ ಚಂದ್ರಮಾ! ನೀನೇ ಅವನ ಕೈಗೆ ಸಿಕ್ಕಲು ಓಡಿ ಬಾ! (೧—೫—೩)

ಏನು ಆಶ್ಚರ್ಯ ! ನನ್ನ ಅಪ್ಪನನ್ನು ಅರ್ಥ ಮಾಡಿಕೊಳ್ಳಲು ಆಗುವುದೇ ಇಲ್ಲವಲ್ಲ (ಅಪ್ಪ ಎಂದರೆ ಪ್ರೀತಿಯಿಂದ ಮಗುವನ್ನು ಸಂಬೋಧಿಸುವ ರೀತಿ). ಒಮ್ಮೆ ಚಿಕ್ಕದಾದ ಆಕಾರ ಧರಿಸಿ, ಮತ್ತೆ ದೊಡ್ಡದಾಗಿ ಬೆಳೆದನು ; ತಾನು ಹಿಡಿದ ಪಟ್ಟನ್ನು ಬಿಡದೆ ನಮುಚಿಯನ್ನು ಎತ್ತಿಕೊಂಡು ಹೋಗಿ ಆಕಾಶದಲ್ಲಿ ತಿರುಗಿಸಿ ದನು. ಗೋವಿಂದಪಟ್ಟಾಭಿಷೇಕ ಮಾಡಿಸಿಕೊಂಡು ಮೆರೆದನು. ಇಂತಹ ಕಂದನಾದ ವೇಂಗಡದೊಡೆಯನ ರೂಪಿಯಾದ ಕೃಷ್ಣನೇ ! ಬಂದು ನನ್ನನ್ನು ಆಲಂಗಿಸಿಕೋ. ಎಷ್ಟಾದರೂ ನೀನು ನನ್ನ ಮಗು ! ಇತರರಿಗೆ ದೈವವಾಗಿರ ಬಹುದು ! ಮಹಾಮಹಿಮನಾಗಿರಬಹುದು ! (೧—೯—೮).

ದಕ್ಷಿಣದ ರಾಜ ರಾವಣನ ಶಿರಗಳನ್ನೂ, ತೋಳುಗಳನ್ನೂ ಕತ್ತರಿಸಿ ತುಂಡರಿಸಿದೆ ; ಪ್ರಕಾಶಿಸಿದೆ, ಆಭರಣಗಳಿಂದ ಅಲಂಕೃತನಾದೆ. ವಿಭೀಷಣನ ಮನೋರಥವನ್ನು — "ನನ್ನ ಹೆಸರು ಇರುವವರೆಗೂ ನೀನು ಲೋಕದಲ್ಲಿ ಶಾಶ್ವತ ನಾಗಿ ಬಾಳು" ಎನ್ನುವ ಚಿರಂಜೀವಿತ್ವವನ್ನು — ನೀಡಿದೆ. ನವರತ್ನ ಹಾರವನ್ನು ಕಟಾಕ್ಷಿಸಿದೆ. ಇಂತಹ ಕೃಷ್ಣರೂಪವನ್ನು ಧರಿಸಿದ ವೇಂಗಡ ದೊಡೆಯನೇ, ಬಾಲಕೃಷ್ಣನೆ ! ಪಸು ಓಡಿಸಲು ಕೋಲು ಒಂದು ಬೇಕೆಂದು ಗೋಗರೆದೆಯಲ್ಲವೆ ? ಒಂದು ಸೊಗಸಾದ ಕೋಲನ್ನು ವಿಭೀಷಣನು ತಂದು ಕೊಡುತ್ತಾನೆ. ನೀನು ಜಾಣನಾಗಿ ತಲೆ ಬಾಚಿಸಿಕೊಂಡು, ಹೂವು ಮುಡಿದು ಕೊಂಡು ಹೋಗಿ ಬಾ ! ವಿಭೀಷಣನೇ, ನಮ್ಮ ಮಗು ಕೃಷ್ಣನು, ಹಸು ಮೇಯಿಸಲು ಹೋಗಬೇಕು, ಒಂದು ಚೆನ್ನಾದ ಕೋಲು ತಂದುಕೊಡು (೨-೬-೯)

ಮಾಳಿಗೆಗೆ ಲಗ್ಗೆಹಾಕಿ ಗೋಪಸ್ತ್ರೀಯರ ನಡುವೆ ಪ್ರವೇಶಿಸಿ, ಅವರು ತೊಟ್ಟಿದ್ದ ರವಕೆಗಳನ್ನು ಹರಿದು, ಅವುಗಳ ಜರತಾರಿಗಳನ್ನು ನಾಶಪಡಿಸಿ, ಅವರುಟ್ಟ ಸೀರೆ ಗಳನ್ನು ಚಿಂದಿಮಾಡಿ, ಯಾವಾಗಲೂ ಅವರನ್ನು ಪರಿಹಾಸ ಮಾಡಿ ಗೋಳು ಹುಯ್ದುಕೊಳ್ಳುತ್ತೀಯೆ. ಆಕಾಶದ ಎತ್ತರಕ್ಕೂ ವ್ಯಾಪಿಸಿರುವ ವೇಂಗಡದ ಮೇಲೆ ವಾಸಮಾಡುವ ಸ್ವಾಮಿಯೇ, ಕೃಷ್ಣಾ, ಪಚ್ಚೆವರ್ಣದ ಪರಿಮಳಯುಕ್ತವಾದ ದವನ ಮಿಶ್ರಿತವಾದ ಪಾದರಿ ಹೂವನ್ನು ಮುಡಿಸುತ್ತೇನೆ, ಬೇಗನೆ ಬಾ ! (೨-೭-೩)

ಶ್ಲಾಘ್ಯವಾದ ಮಹಿಮೆಯುಳ್ಳ ಮುದ್ದುಕೃಷ್ಣನೆ ! ಗೋವರ್ಧನ ಪರ್ವತ ವನ್ನು ಕಿರುಬೆರಳಿನ ಮೇಲೆ ಎತ್ತಿ ನಿಲ್ಲಿಸಿದೆ. ಕುಂಭ ನೃತ್ಯ ಮಾಡಿದ ಅಲೌಕಿಕ ನರ್ತಕನೆ, ವೇದದ ಒಳಹೂರಣವೇ, ದಿವ್ಯಗುಣ ಪರಿಪೂರ್ಣನೇ ! ಬೇಗನೆ ಬಂದುಬಿಡು, ಬರುವುದಿಲ್ಲ ಎನ್ನಲೇ ಬೇಡ ! ಬೇರೆ ಮನೆಯವರೆಲ್ಲಾ ಬಂದು ಏನೇನೋ ದೂರು ಕೊಡಬಹುದು, ಅವರು ಏನಾದರೂ ಹೇಳಿಕೊಳ್ಳಲಿ. ನಾನು ಕೇಳುವುದಿಲ್ಲ, ತಿಳಿಯಿತೆ ? ನೀನು ಒಳ್ಳೆಯವನು. ಬೇಗನೆ ಬಂದುಬಿಡು. (೨- ೯- ೬)

ಪರಿಮಳಯುತವಾದ ವೇಂಗಡದಲ್ಲಿ ನಿತ್ಯವಾಸ ಮಾಡುವವನೇ ! ಗೋಕುಲದ ಕೃಷ್ಣನೇ ! ಕಪ್ಪುವರ್ಣದ, ಬಲಶಾಲಿಯಾದ, ಸ್ವೇಚ್ಛೆಯಾಗಿ ಸಂಚರಿಸುವ ವೃಷಭದಂತಿರುವವನೆ ! ನೀನು ಇಷ್ಟಪಡುವ, ಬಿಸಿಲಿನಿಂದ ರಕ್ಷಣೆ ಹೊಂದುವ ಸಲುವಾಗಿ ಕೊಡೆ, ಮುಳ್ಳು ಚುಚ್ಚಿ ನೋವಾಗದಿರಲು ಪಾದರಕ್ಷೆ ಮತ್ತು ನೀನು ಊದಲು ಪ್ರಿಯವಾದ ಕೊಳಲನ್ನೂ ತಂದಕೊಟ್ಟರೂ ಒಲ್ಲದೆ ಹಸುಗಳನ್ನು ಮೇಯಿಸಲು ಹೊರಟುಹೋಗುವೆಯಲ್ಲ ? ಕಡಿದಾದ ಕಾನನದಲ್ಲಿ

ಕರುಗಳ ಹಿಂದೆ ಅಲೆದರೆ ನಿನ್ನ ಕೆಂದಾವರೆಯಂತಹ ಸುಕೋಮಲ ಪಾದಗಳಿಗೆ ಕಲ್ಲುಮುಳ್ಳುಗಳ ದೆಸೆಯಿಂದ ಉಂಟಾಗುವ ಬಾಧೆಯನ್ನು ನೋಡಲು ನನ್ನಿಂದ ಸಹಿಸುವುದಿಲ್ಲ. ನಿನಗೆ ಕಣ್ಣು ಕೆಂಪಾಗಿ ಅಳುವೇ ಬಂದುಬಿಡುತ್ತದೆಯಲ್ಲವೆ ? ಕಾಲು ಕೂಡ ಸೋತೇ ಹೋಗುವುವಲ್ಲ. ನೀನು ನನ್ನ ಮುದ್ದುಮಗು ! ಇದನ್ನೆಲ್ಲಾ ಹೇಗೆ ನೋಡಿಕೊಂಡು ಸುಮ್ಮನಿರಲಿ, ನೀನೇ ಹೇಳು ? (೩– ೩– ೪).

ಆಕಾಶಕ್ಕೆ ಸೋಕುವ ಶಿಖರದಲ್ಲಿ ತಂಪಾಗಿ ನಿತ್ಯವಾಸಮಾಡುವ ವೇಂಗಡ ದೊಡೆಯನೇ, ಲೋಕವನ್ನು ಬಾಳುವಂತೆ ಮಾಡುತ್ತಿರುವ ಸ್ವಾಮಿಯೆ, ದಾಮೋದರನೆ, ಚತುರನಾದ ಆಶ್ರಿತ ಬಂಧುವೆ ! ನನ್ನನ್ನೂ, ನನ್ನ ತನುಮನಧನ ಸರ್ವಸ್ವವನ್ನೂ, ಚಕ್ರಾಂಕನದಿಂದ ಅಂಕಿತ ಮಾಡಿ ನಿನ್ನ ಕೃಪೆಕೊಂಡು ಸೇವೆ ಸಲ್ಲಿಸುವ ಆಶೆ ನನಗೆ. ಇನ್ನು ನನಗೇತರ ಆಯಾಸ ಪ್ರಭುವೇ ? (೫– ೪– ೧).

ಪೆರಿಯಾಳ್ವಾರ್ ಅವರ ಪಾಶುರಗಳಲ್ಲಿ ವೇಂಗಡ ವಿಷಯಗಳು ಅಷ್ಟಾಗಿ ಕಂಡುಬರುವುದಿಲ್ಲ. ಆದರೆ ಆ ದೇವನಲ್ಲಿ ಅವರು ಕೃಷ್ಣರೂಪವನ್ನು ಕಂಡಿದ್ದಾರೆ, ಅಷ್ಟೇ. ಪರಿಮಳಭರಿತ ಉದ್ಯಾನದ ತಿರುವೇಂಗಡ, ಮುಗಿಲನ್ನು ಸೋಕುವ ಶಿಖರಗಳಿಂದ ಒಡಗೊಂಡ ತಿರುವೇಂಗಡ ಇವರ ಮನ ಸೆಳೆದಿದೆ !

ಪರಬ್ರಹ್ಮನಾದ ವಿಷ್ಣುವಿನ ಮೇಲೆ ಇವರಿಗಿದ್ದ ಅತಿಶಯವಾದ ಅರುಮೆ ಯಿಂದಲೇ ಆಚಾರ್ಯ ಮನವಾಳಮಹಾಮುನಿಗಳು ಈ ರೀತಿ ಇವರನ್ನು ಕೀರ್ತಿಸಿದ್ದಾರೆ.

ಮಂಗಳಾಶಾಸನತ್ತಿಲ್ ಮತ್ತುಳ್ಳ ಆಳ್ವಾಱ್‌ಗಳ್
ದಂಗಳ್ ಆರ್ವತ್ತಳವು ತಾನ್ ಅನ್ರಿ ಪೊಂಗುಂ
ಪರಿವಾಲೇ ವಿಲ್ಲಿಪುತ್ತೂರ್ ಪಟ್ಟರಪಿರಾನ್ ಪೆತ್ತಾನ್
ಪೆರಿಯಾಳ್ವಾಱ್ ಎನ್ನುಂ ಪೇರ್ ॥

ಎಂದರೆ

ಮಂಗಳಾಶಾಸನದಲಿನ್ನುಳ್ಳ ಆಳ್ವಾರ
ರಿಂಗೆ ಮಿಗಿಲಿವರೊಲವು, ಉಕ್ಕುವುತ್ಸಾಹದಲಿ
ಕಟ್ಟೊಡೆದು ಹರಸಿ ಸಂದರು ವಿಲ್ಲಿಪುತ್ತೂರ
ಪಟ್ಟರ್‌ಪಿರಾನ್ ಪೆರಿಯಾಳ್ವಾರರೆಂದು ॥

(ಡಾ॥ ವಿನೋದ ಅವರ ಉಪದೇಶರತ್ನಮಾಲೆಯಿಂದ)

ಈ ಮಂಗಳಾಶಾಸನವನ್ನು ಪೆರಿಯಾಳ್ವಾರ್ ತಮ್ಮ ಮೇಲಿನ ಪಾಶುರಗಳಿಂದ ಶ್ರೀನಿವಾಸನಿಗೂ ಸಲ್ಲಿಸಿ ಧನ್ಯರಾಗಿದ್ದಾರೆ.

೬

ಇನ್ನು ನಾವು ಆಂಡಾಳ್ ಪ್ರಬಂಧವನ್ನು ಅವಲೋಕಿಸೋಣ. ಈಕೆ ಪೆರಿಯಾಳ್ವಾರ್‌ರ ಸಾಕುಮಗಳು. ಸೀತೆಯು ಜನಕನಿಗೆ ದೊರಕಿದಂತೆ ಈಕೆಯು ಭೂಮಿಯಲ್ಲಿ ಸಿಕ್ಕಿದ್ದಾಗಿ ಕತೆ! ಇದು ಉತ್ಪ್ರೇಕ್ಷೆ ಇರಬಹುದು. ಇರಲಿ, ಅಂತೂ ಪೆರಿಯಾಳ್ವಾರ್ ಅವರ ಪೋಷಣೆಯಲ್ಲಿ ಬೆಳೆದ ಈಕೆಗೆ ತಂದೆಯ ಸಾಹಿತ್ಯಾಸಕ್ತಿಯು ತಾನಾಗಿಯೇ ಮೈಗೂಡಿಕೊಂಡಿದ್ದುದರಲ್ಲಿ ಆಶ್ಚರ್ಯವಿಲ್ಲ. ಅವರ ಕವಿತಾರಚನೆ, ಓದಿ, ಕೇಳಿ, ತಿಳಿದ ವಿಚಾರಗಳು, ಅವರ ನಿತ್ಯ ಕೈಂಕರ್ಯ ಇವುಗಳೆಲ್ಲದರ ಫಲವಾಗಿ ಆಕೆ ಕೃಷ್ಣನಿಗೆ ಒಲಿದುದರಲ್ಲಿ ಆಶ್ಚರ್ಯವಿಲ್ಲ. ತಾನೂ ಗೋಕುಲದ ಗೋಪಿಯರಲ್ಲಿ ಓರ್ವಳು; ಕೃಷ್ಣನು ತನ್ನನ್ನು ಪ್ರೀತಿಸಿದ; ಮದುವೆಯಾದರೆ ಆ ಕೃಷ್ಣನನ್ನೇ ಎನ್ನುವ ಭಾವಗಳು ಅವಳು ಬೆಳೆದು ಯೌವ್ವನಶಾಲಿಯಾದಂತೆಲ್ಲಾ ಪಕ್ವವಾಗತೊಡಗಿತು ! ಕೃಷ್ಣ ಹೀಗೆ ಅವಳ ಪಾಲಿಗೆ ಮನಸ್ಸು, ಜೀವ, ಪ್ರಾಣ, ಸಕಲಸರ್ವಸ್ವವೂ ಆದನು. 'ಅವನಿಗೆ ಮೆಚ್ಚುಗೆಯಾಗುವಂತೆ ತಾನು ಅವನ ಕೈಂಕರ್ಯಗಳನ್ನು ಎಸಗಬೇಕು ! ಅವನಿಗೆ ಏರ್ಪಡುವ ಸಂತೋಷದಿಂದ ತಾನು ತನ್ನ ಇಷ್ಟಾರ್ಥವನ್ನು ಪಡೆಯಬೇಕು' ಎಂದೆಲ್ಲಾ ಈಕೆ 'ತಿರುಪ್ಪಾವೈ'ನಲ್ಲಿ ಕನಸು ಕಾಣುತ್ತಾಳೆ. ಇದಕ್ಕೆ ಹಿನ್ನೆಲೆಯಾದ ಕಥಾವಸ್ತುವನ್ನು ಈಕೆ ಭಾಗವತದ ಮೂಲದಿಂದ ಹೊಂದಿದ್ದಾಳೆ. ಇವಳು ತಿರುಪ್ಪಾವೈನಲ್ಲಿ ವಿವರಿಸಿರುವ ಭಾವ, ಭಕ್ತಿಗಳು ಶ್ರೀವೈಷ್ಣವರ ಪ್ರಪತ್ತಿಮಾರ್ಗಕ್ಕೆ ಅತಿ ಸಮೀಪವಾಗಿರುವುದರಿಂದಲೇ ಇದು ಶ್ರೀವೈಷ್ಣವ ತತ್ವ ಪ್ರತಿಪಾದನೆ ಮಾಡುವ ಅತ್ಯುಚ್ಚವಾದ ಪ್ರಬಂಧವೆಂದು ಆಚಾರ್ಯರುಗಳು ನಿರ್ಧರಿಸಿ, "ಇದನ್ನು ಅರಿಯದ ಮಾನವನನ್ನು ಭೂಮಿಯು ಹೊರುವುದು ಶುದ್ಧ ದಂಡ" ಎಂದು ತೀರ್ಮಾನವಿತ್ತಿದ್ದಾರೆ. ಶ್ರೀವೈಷ್ಣವರ ಅರುಮೆಯ ಕೃತಿ ಆಂಡಾಳ್ 'ತಿರುಪ್ಪಾವೈ'. ಹೀಗೆಯೇ ಈಕೆಯ ಮನಮೋಹಕವಾದ ಇನ್ನೊಂದು ಕೃತಿ 'ನಾಚ್ಚಿಯಾರ್ ತಿರುಮೊಳಿ'. 'ತಿರುಪ್ಪಾವೈ' ನಲ್ಲಿ ಇವಳ ಪ್ರೇಮಭಾವ ಪರಿಪೂರ್ಣತೆಯನ್ನು ಅಡರದೇ, 'ನಾಚ್ಚಿಯಾರ್ ತಿರುಮೊಳಿ'ಯಲ್ಲಿ ಅದರ ಔನ್ನತ್ಯವನ್ನು ನಾವು ಕಾಣಬಹುದು. ಇದನ್ನು "ಮಧುರಭಕ್ತಿ" ಎಂದು ಗುರುತಿಸಿರುವರು. ಈ ನಾಚ್ಚಿಯಾರ್ ತಿರುಮೊಳಿಯು ೧೪೦ ಪಾಶುರಗಳಿಂದ ಕೂಡಿರುವ ಪ್ರಣಯ ಕಾವ್ಯ. ಆಂಡಾಳ್ ಸಾಹಿತ್ಯಕ್ಕೆ ಈ ದೃಷ್ಟಿಯಿಂದ ಅತಿ ಹೆಚ್ಚಿನ ಸ್ಥಾನ ಸಲ್ಲುತ್ತದೆ.

೧೨ ಆಳ್ವಾರುಗಳ ಪೈಕಿ ಈಕೆ ಓರ್ವಳೇ ಕವಯಿತ್ರಿ ಎನ್ನುವುದು ಒಂದು ಅಂಶವಾದರೆ, ಪಕ್ವವಾದ ಕವಿತೆಯನ್ನು ಇವಳು ಕಿರಿಯ ವಯಸ್ಸಿನಲ್ಲೇ ನಿರ್ಮಿಸಿರುವುದು ಮತ್ತೊಂದು ಅಂಶ. ಇಂತಹ ಶೃಂಗಾರಭಾವ ಬೇರಾವ

ಪ್ರಬಂಧಗಳಲ್ಲೂ ಕಂಡುಬರುವುದಿಲ್ಲ. ಆಳ್ವಾರುಗಳು ಪುರುಷರು ; ತಾವು ನಾಯಕೀಭಾವವನ್ನು ತಮ್ಮ ಮನಸ್ಸಿನಲ್ಲಿ ಬೆಳೆಸಿಕೊಂಡು ಅದನ್ನು ಅಭಿವ್ಯಕ್ತಪಡಿಸಬೇಕಾದ ಒಂದು ಕಸರತ್ತು ಅವರ ಸಾಹಿತ್ಯಕ್ಕೆ ಇದೆ. ಆದರೆ ಆಂಡಾಳ್ ತಾನೇ ಸ್ತ್ರೀಯಾದ್ದರಿಂದಲೂ, ಅವಳಿಗೆ ಈ ಅನುಭಾವವು ಮೀನಿಗೆ ಈಜಿನಂತೆ ಸ್ವಾಭಾವಿಕವಾದುದ್ದರಿಂದಲೂ ಅವಳ ಕಾವ್ಯದಲ್ಲಿ ಆ ಕಾವ್ಯಗುಣ ಸಹಜವಾಗಿ ತುಂಬಿಬಂದಿದೆ. ಪ್ರಾಯಶಃ ತಮಿಳುಕಾವ್ಯ ಪ್ರಪಂಚದಲ್ಲಿ ಇದೇ ಮೊದಲನೆಯ ಶೃಂಗಾರ ಕಾವ್ಯವೆಂದು ತೋರುತ್ತದೆ. ಶೃಂಗಾರಕಾವ್ಯ ವೆಂದರೆ ಪರಮಾತ್ಮನಲ್ಲಿ ಭಕ್ತಿ, ಅನುಭವ ಪಡೆದ ಎನ್ನುವ ಅರ್ಥಮಾಡಬೇಕು ಮತ್ತು ಇಂತಹ ಕಾವ್ಯ ರಚನೆಯಲ್ಲೂ ಪ್ರಾಯಶಃ ಈಕೆಯೇ ಮೊದಲಿಗಳು ಎನ್ನ ಬೇಕು. ಕ್ರಿ.ಶ. ೬–೭ನೇ ಶತಮಾನಗಳಲ್ಲಿ ಇದ್ದ ಈಕೆ ತಮಿಳಿಗೆ ಮಾತ್ರವೇಕೆ, ಇಡೀ ಭಾರತೀಯ ಭಾಷಾ ಪ್ರಪಂಚದಲ್ಲೇ ಪ್ರೇಮಭಕ್ತಿಯ ಕಾವ್ಯರಚನೆ ಮಾಡುವುದರಲ್ಲಿ ಮೊದಲ ಕವಯಿತ್ರಿಯಾಗಿ ಮೆರೆಯುತ್ತಾಳೆಂದು ನನ್ನ ಅನಿಸಿಕೆ. ಅವ್ವೈಯಾರ್, ಕಾರೈಕಾಲಮ್ಮ ಮುಂತಾದ ಕವಯಿತ್ರಿಯರು ಇಂತಹ ಅನುಭಾವ ವನ್ನು ವ್ಯಕ್ತಪಡಿಸಿಲ್ಲವೆಂದು ತಿಳಿಯುತ್ತೇನೆ. ಆಂಡಾಳ್ ತಿರುಪ್ಪಾವೈ ಅನ್ನು 'ಸಂಘಂ' ತಮಿಳಿನವರು ಒಪ್ಪಿದ್ದರೆಂದು ಅದರ ೩೦ನೇ ಪಾಶುರದಿಂದ ತಿಳಿಯುತ್ತದೆ. ಇತರ ಆಳ್ವಾರ್ ಪಾಶುರಗಳನ್ನು 'ಸಂಘಂ' ತಮಿಳಿನವರು ಒಪ್ಪಿದ್ದರೋ ಬಿಟ್ಟರೋ ತಿಳಿಯುವುದಿಲ್ಲ. ನಮ್ಮಾಳ್ವಾರ್ ಅವರ ತಿರುವಾಯ್ಮೊಳಿ ಯನ್ನು 'ಸಂಘಂ' ತಮಿಳಿನವರು ಒಪ್ಪಿದ್ದರು ಎನ್ನುವುದಕ್ಕೆ ಒಂದು ಕತೆಯೇ ಇದೆ. ಕೆಲವರು ಪೆರಿಯಾಳ್ವಾರರೇ ಸಾಹಿತ್ಯ ನಿರ್ಮಾಣ ಮಾಡುವುದರಲ್ಲಿ ಸಿದ್ಧ ಹಸ್ತರಾದ್ದರಿಂದ, ಅವರೇ ಈ ಕೃತಿಗಳನ್ನೂ ನಿರ್ಮಿಸಿ, ತಮ್ಮ ಅರುಮೆಯ ಮಗಳಿಗೆ ಅಂಕಿತ ಮಾಡಿರಬಹುದಾದ ಸಂಭವವಿದೆ ಎನ್ನುತ್ತಾರೆ. ಈ ಮಾತಿನ ನಿಜಾಂಶ ಗೊತ್ತಾಗುವುದಿಲ್ಲ. ತಾವು ರಚಿಸಿರಬಹುದಾದ ತಿರುಪ್ಪಾವೈ ಅನ್ನು ಸಂಘಂ ಕವಿಜ್ಞರ ಮುಂದೆ – ವಾಲ್ಮೀಕಿಗಳು ಲವಕುಶರಿಂದ ರಾಮಾಯಣವನ್ನು ಹಾಡಿಸಿದಂತೆ ಈ ಆಳ್ವಾರ್ ಕಿರಿಯ ಬಾಲಕಿ ಆಂಡಾಳ್ ಮೂಲಕ ದಿಟ್ಟ ರೀತಿಯಲ್ಲಿ ಹಾಡಿಸಿ ಆ ಜನರ ಮೆಚ್ಚುಗೆಗೆ ಪಾತ್ರವಾಗುವಂತೆ ಮಾಡಿರಲಿಕ್ಕೂ ಸಾಕು ! ಒಂದು ವೇಳೆ ಈ ಎರಡೂ ಆಂಡಾಳ್‌ನಿಂದಲೇ ನಿರ್ಮಾಣಗೊಂಡಿರುವುದಾದ ಪಕ್ಷಕ್ಕೆ ನಿಜವಾಗಿಯೂ ಆ ಕಿರಿಯ ಕವಯಿತ್ರಿ ಶ್ರೀವೈಷ್ಣವರಿಂದ ಮಾತ್ರವೇಕೆ ಇಡೀ ವಿಶ್ವದ ಜನತೆ ಯಿಂದಲೇ ಅಭಿನಂದನೀಯಳೆಂದು ಘಂಟಾಘೋಷವಾಗಿ ಹೇಳುವುದಕ್ಕೆ ಸಂದೇಹ ಅಥವಾ ಸಂಕೋಚಪಡಬೇಕಾಗಿಲ್ಲ.

ತಿರುಪ್ಪಾವೈ ಶೈಲಿ ಸರಳ. ನಾಚ್ಚಿಯಾರ್ ತಿರುಮೊಳಿ ಶೈಲಿ ಇನ್ನೂ ಪ್ರಗಲ್ಭವಾದದ್ದು, ಪ್ರೌಢವಾದದ್ದು, ಭಾವನೆಗಳು ಯೌವ್ವನವತಿಯಾದ

ಹೆಣ್ಣಿನಿಂದ ವ್ಯಕ್ತಪಡುವಂತಹುದು. ತಿರುಪ್ಪಾವೈನಲ್ಲಿ ಪರಮಾತ್ಮನನ್ನು ಪಡೆ ಯಲು ವ್ರತಾಚರಣೆ ಮಾಡಬೇಕು ಎನ್ನುವ ಪ್ರಯತ್ನ, ಯಶಸ್ಸು ಇದ್ದರೆ ನಾಚ್ಚಿಯಾರ್ ತಿರುಮೊಳಿಯಲ್ಲಿ ಅವಳು ಅನುಭವಿಸುವ ವಿರಹ, ಏಕತೆ, ಇವುಗಳ ಹೃದಯವಿದ್ರಾವಿಕ ನಿರೂಪಣೆಯಿದೆ. ಪರಮಾತ್ಮನನ್ನು ಹೊಂದಿಯೇ ತೀರುವೆನೆಂಬ ಛಲವೂ ಇದೆ. ಕಡೆಗೆ ಪರಮಾತ್ಮನನ್ನು ಪಡೆದ ಧನ್ಯತೆಯೂ ಇದೆ. ಈ ಎರಡು ಪ್ರಬಂಧಗಳಲ್ಲೂ ಭಕ್ತಿ ಇದೆ, ವಸ್ತುವಿದೆ, ಸಂಗೀತವಿದೆ, ಸಾಹಿತ್ಯವಿದೆ, ಸಿದ್ಧಿ ಇದೆ, ತಂತ್ರವಿದೆ, ಪ್ರಪತ್ತಿ ಇದೆ, ಅಸಮವಾದ ಸಂವಿಧಾನವಿದೆ. ಇವುಗಳಲ್ಲಿ ಇಲ್ಲದಿರುವುದೇ ಇಲ್ಲವೆನ್ನಬೇಕು !

ನಾಚ್ಚಿಯಾರ್ ತಿರುಮೊಳಿಯು ನೂರ ನಲವತ್ತು ಪಾಶುರ ಭಾವುಕನಿಗೆ ರಸದೂಟ. ಇವುಗಳಲ್ಲಿ ಐದು ಬಿಡಿ ಪಾಶುರಗಳಲ್ಲೂ, ಹತ್ತು ಇಡೀ ಪಾಶುರ ಗಳಲ್ಲೂ (ದಶಕದಲ್ಲೂ) ಇವಳು ತಿರುಮಲೆಯ ಮಂಗಳಾಶಾಸನಗೈದಿದ್ದಾಳೆ. ಅದರ ಸೊಬಗನ್ನು ನಾವೀಗ ಕಂಡುಕೊಳ್ಳೋಣ.

ಮಾರ್ಗಶಿರ ಮಾಸವೆಲ್ಲಾ ವ್ರತಮಾಡಿ, ಅದನ್ನು ಪೂರೈಸಿ, ಮುಂದಿನ ಮಾಸವಾದ ಪುಷ್ಯದಲ್ಲಿ (ತಮಿಳಿನ ತೈ) ನೀನು ಬರುವ ಸ್ಥಳವನ್ನು ಸಾರಿಸಿ ಮಂಡಲವಿಟ್ಟು, ರಂಗವಲ್ಲಿಯಿಂದ ಸಿಂಗರಿಸಿ, ಹೀಗೆ ನೀನು ಬರುವ ಹಾದಿಯನ್ನು ಸಿದ್ಧಪಡಿಸಿದ್ದೇನೆ, ಸ್ವಾಗತ ಮಾಡಲು ಕಾಯುತ್ತಿದ್ದೇನೆ. ಕಾಮದೇವನೇ, ನನ್ನಲ್ಲಿ ಪ್ರಸನ್ನನಾಗು. ನಿನ್ನ ತಮ್ಮ ಅನಿರುದ್ಧನಿಗೂ ಕೈಮುಗಿಯುತ್ತೇನೆ. ಶತ್ರುಗಳಿಗೆ ಅಗ್ನಿ ಸದೃಶವೂ, ಮಿತ್ರರಿಗೆ ಆಭರಣದಂತೆಯೂ, ಮನೋಹರವಾಗಿ ಕಂಗೊಳಿ ಸುವ ಚಕ್ರಧಾರಿಯಾದ ವೇಂಗಡದ ಒಡೆಯನಲ್ಲಿಗೆ ನನ್ನನ್ನು ಸೇರಿಸಬೇಕೆಂಬುದಾಗಿ ಬೇಡುತ್ತೇನೆ.

ಮಧುರವಾದ ಊಮತ್ತಿ ಮತ್ತು ಮುತ್ತುಗದ ಹೂಗಳಿಂದ ನಿನ್ನ ಅಡಿ ದಾವರೆಗಳನ್ನು ಪೂಜಿಸಿ ನಮಸ್ಕರಿಸುತ್ತೇನೆ. "ನೀನು ಸತ್ಯವಾದಿಯೆಂದೂ, ಯಾರೂ ನಿನ್ನನ್ನು ಬೈಯದಿರುವಂತೆಯೂ ಮೊದಲು ಏರ್ಪಡಿಸಿಕೋ". ಅಲರ ಗಣೆಯನ್ನು ಧರಿಸಿ, ಗೋವಿಂದನೆಂಬ ಹೆಸರನ್ನು ಹೃದಯದಲ್ಲಿ ಧರಿಸಿರುವೆ. ಆಶ್ಚರ್ಯ ಗುಣಚೇಷ್ಟಿತನಾದ ವೇಂಗಡದ ದೇದೀಪ್ಯಮಾನನಾದ ದೇವನೊಡನೆ ನಾನು ಸೇರುವಂತೆ ಏರ್ಪಡಿಸು.

ಪರಮಪದವನ್ನು ತೊರೆದು ತಿರುವೇಂಗಡ ಮತ್ತು ತಿರುಕಣಪುರಗಳಲ್ಲಿ ಸಂತೋಷದಿಂದ ನಿತ್ಯವಾಸಮಾಡುತ್ತಿರುವ ಸರ್ವೇಶ್ವರನು ಓಡೋಡಿ ಬಂದು ಕೈಹಿಡಿದು, ನನ್ನೊಡನೆ ಕೂಡುವುದಾದರೆ, ಕೂಡಲೇ ! ನೀನು ಹಾಗೆ ಸೇರು.

(ಗೋಪಿಯರು 'ಕೂಡಲ್' ಎಂಬ ಪಕ್ಷಿಯನ್ನು ರಚಿಸಿ, ಅದನ್ನು ಪೂಜಿಸಿ ಅದರ ಮೂಲಕ ಕೃಷ್ಣನು ತಮ್ಮೊಡನೆ ಸೇರುವನೆ ? ಇಲ್ಲವೆ ? ಎಂಬ ಭವಿಷ್ಯವನ್ನು ಅರಿಯುತ್ತಿದ್ದರು ಎಂದು ವಿವರಣೆ) ನಾನ್‌ಮುಗನ್ ತಿರುವಂದಾದಿಯಲ್ಲಿ ತಿರುಮಳಿಶೈ ಆಳ್ವಾರ್ ಇದೇ ರೀತಿ ಕೂಡಲಿನ ಸನ್ನಿವೇಶವನ್ನು ನೀಡಿದ್ದಾರೆ.

ಜೇನು ಒಸರುವ ಸಂಪಿಗೆ ಹೂವಿನಿಂದ ಸಂಭ್ರಮಿಸಿ ಹಾಡುವ ಕೋಗಿಲೆಯೆ ! ಎಡಗೈಯ್ಯಲ್ಲಿ ಬಿಳಿಯ ಶಂಖವನ್ನು ಧರಿಸಿದ ವಿಮಲನು ನನಗೆ ತನ್ನ ರೂಪವನ್ನು ತೋರಿಸುತ್ತಿಲ್ಲ ! ನನ್ನ ಮನಸ್ಸಿನ ಒಳಹೊಕ್ಕು, ನನ್ನನ್ನು ಬಾಧೆಪಡಿಸಿ, ತನ್ನನ್ನು ಮರೆಯದಂತೆ ಮಾಡಿ, ವ್ಯರ್ಥ ಆಯುಸ್ಸನ್ನು ನನಗೆ ನೀಡಿ, ಪ್ರತಿದಿನವೂ ನಾನು ಕಷ್ಟ ಕ್ಲೇಶಗಳನ್ನು ಅನುಭವಿಸುತ್ತಾ ತೊಂದರೆಪಡುವುದನ್ನು ನೋಡಿ ಆನಂದಿಸು ತ್ತಿದ್ದಾನಲ್ಲ. ನೀನು ಹೋಗಿ ಅವನ ಪಕ್ಕದಲ್ಲಿದ್ದು ಈಗ ನಾನು ಹೇಳುವ ಮಾತು ಗಳನ್ನು ಅನುಕರಣೆ ಮಾಡಿ ಅವನಿಗೆ ನನ್ನ ಭಾವ ತಿಳಿಯುವಂತೆಯೂ, ಮತ್ತೆ ನನ್ನ ನೆನಪು ಅವನಲ್ಲಿ ಮರುಕೊಳಿಸಿಕೊಳ್ಳುವಂತೆಯೂ, ನಿನ್ನ ವಿಲಾಸಗಳಿಂದ ಮಾಡಲಾರೆಯಾ ? ಅವನನ್ನು ಹೇಗಾದರೂ ನನ್ನ ಬಳಿಗೆ ಬರುವಂತೆ ಏರ್ಪಡಿಸ ಬೇಕು, ತಿಳಿಯಿತೆ ?

ಹಾಡುವ ಕೋಗಿಲೆಗಳೆ, ಕರ್ಣಕಠೋರವಾಗಿಯೂ, ಕರ್ಕಶವಾಗಿಯೂ ಇವೆ ನಿಮ್ಮ ಹಾಡುಗಳು. ವಿಲಕ್ಷಣವಾದ ವೇಂಗಡದಲ್ಲಿ ವಾಸಿಸುವವನು ನಿಮ್ಮ ಹಾಡನ್ನು ಕೇಳುವ ಸೌಭಾಗ್ಯವನ್ನು ತಂದಲ್ಲಿ ಮಾತ್ರ ನೀವು ನನ್ನ ಬಳಿ ಹಾಡಿ ; ಗರುಡ ಧ್ವಜನಾದವನು ದಯೆಗೈದು ಬಂದು ನನ್ನೊಡನೆ ಕೂಡುವನೆಂದರೆ ಮಾತ್ರ ನಾನು ನಿಮ್ಮ ಹಾಡನ್ನೂ ಮಧುರತೆಯನ್ನೂ ಸವಿಯಬಲ್ಲವಳಾಗುತ್ತೇನೆ. ಈಗಂತೂ ನಿಮ್ಮ ಹಾಡುಗಳು ರುಚಿಸುತ್ತಿಲ್ಲ. ಅವನ ವಿರಹದಲ್ಲಿ ಯಾವುದು ತಾನೇ ಬೇಕಾಗಿರುತ್ತದೆ ? ಯಾವುದೂ ಸಂತೋಷ ನೀಡದು. ನನ್ನ ಕರಣಗಳು ಅವನನ್ನಲ್ಲದೆ ಬೇರೊಂದನ್ನೂ ಸ್ವೀಕರಿಸಲು ಸಿದ್ಧವಿಲ್ಲ. ನಿಮ್ಮ ಸಾನ್ನಿಧ್ಯದಿಂದ ನನ್ನ ಬೇಸರ ಇನ್ನೂ ಹೆಚ್ಚುತ್ತಿದೆ (ನಮ್ಮಾಳ್ವಾರ್ ತಿರುವಿರುತ್ತಂನಲ್ಲಿಯೂ ಇಂತಹುದೇ ಸನ್ನಿವೇಶವು ಬರುತ್ತದೆ.)

ಮಣ್ಣನ್ನು ಹೊರಗೆ ಪೂಸಿ ಒಳಗೆ ಮೇಣವನ್ನು ಕಾಯಿಸಿಬಿಟ್ಟಂತೆ, ಈ ಮಳೆಯನ್ನು ಸುರಿಸಿ, ಉರಿಯುವ ವಿರಹಾನಲವು ಮತ್ತೂ ಪ್ರಜ್ವಲಿಸುವಂತೆ ಮಾಡುತ್ತಿರುವ ಮೋಡಗಳೇ ! ಸುಮ್ಮನೆ ನನ್ನನ್ನು ಸತಾಯಿಸಬೇಡಿ. ಅದಕ್ಕೆ ಬದಲಾಗಿ ಚೆಲುವಾದ ವೇಂಗಡದ ಮೇಲೆ ಆಶ್ರಿತಾರ್ಥಿಯಾಗಿ ನಿಂತಿರುವ ಉಪ ಕಾರಕನಾದ ಚೆಲುವನು ನನ್ನ ಮನಸ್ಸಿನಲ್ಲಿ ಪ್ರಕಾಶಿಸುತ್ತಿರುವಂತೆಯೇ ಅವನನ್ನು

ನಾನು ನನ್ನ ಬಾಹುಗಳಿಂದ ಬಳಸಿ ಅಲಂಗಿಸಿಕೊಳ್ಳುವಂತೆ ನೀವು ಮಾಡುವುದಿಲ್ಲ ವಲ್ಲ ? ಏತಕ್ಕೆ ? ಏತಕ್ಕೆ ?

ಈ ಮುಂದಿನ ಹತ್ತು ಪಾಶುರಗಳಲ್ಲಂತೂ ಆಂಡಾಳ್ ತನ್ನ ಮನೋವೇದನೆಯನ್ನು ತೋಡಿಕೊಳ್ಳುವ ವಿಧಾನ ತಲಸ್ಪರ್ಶಿ. ಆಂಡಾಳ್‌ನ ಉತ್ತಮ ಕವಿತಾ ಮನೋಧರ್ಮವನ್ನು ವ್ಯಕ್ತಪಡಿಸುತ್ತದೆ. ನಮ್ಮನ್ನು ಬೇರೊಂದು ಲೋಕಕ್ಕೇ ಕರೆದೊಯ್ಯುತ್ತದೆ. ನಮ್ಮಲ್ಲೂ 'ಅಯ್ಯೋ ಪಾಪ. ಅವಳ ಪ್ರಿಯನು ಒಡನೆಯೇ ಬಂದು ಅವಳನ್ನು ಸಂತೋಷಪಡಿಸಕೂಡದೇ' ಎನ್ನುವ ಅನುತಾಪ ಏರ್ಪಡುತ್ತದೆ. ಇದೇ ತಾನೇ ಸಾಹಿತ್ಯದ ಪರಿಣಾಮ, ಇದೇ ತಾನೇ ಕವಿಯ ಸಾಮರ್ಥ್ಯ !

ಆಕಾಶದಲ್ಲಿ ಮೇಲ್ಕಟ್ಟನ್ನು ನೀಲಿ ಬಣ್ಣಕ್ಕೆ ಕಟ್ಟಿರುವಂತೆ ಕಾಣಿಸುವ ಮೇಘಗಳೇ ! ತಿಳಿನೀರಿನಿಂದ ಕಂಗೊಳಿಸುವ ಝರಿಗಳ ತಿರುವೇಂಗಡದಲ್ಲಿ ನಿಂತಿರುವವನು ನನ್ನನ್ನು ದೂರ ಮಾಡಿಬಿಟ್ಟನೆ ? ನನ್ನ ಸ್ತನಗಳ ಮೇಲೆ ಕಣ್ಣು ಹನಿಗಳು ಉದುರಿಬಿದ್ದು ಹರಿಯುತ್ತಿದೆ. ಇಂತಹ ಉತ್ತಮವಾದ ಸ್ತ್ರೀತ್ವವನ್ನು ವ್ಯರ್ಥಮಾಡುತ್ತಿರುವನಲ್ಲ, ಅವನಿಗೇ ಇದು ಸರಿಯೇ ?

ಬೆಲೆಬಾಳುವ ಮುತ್ತನ್ನೂ ನಿಧಿಯನ್ನೂ ಸುರಿಸುವ ಹಿರಿಯ ಮುಗಿಲುಗಳೆ ! ತಿರುವೇಂಗಡದಲ್ಲಿ ನಿಮ್ಮಂತೆಯೇ ನಿಂತಿರುವ ಶ್ಯಾಮಲಕಾಯ ಸ್ವಾಮಿಗೆ ಹೇಳಿ ಕಳುಹಿಸುವ ಮಾತಾದರೂ ಏನೆಂದು ತಿಳಿದಿರುವುದೇ ? ವಿರಹಾಗ್ನಿ ನನ್ನನ್ನೂ ಅತಿಯಾಗಿ ಬೇಯುವಂತೆ ಮಾಡುತ್ತಿದೆ, ಇರುಳು ನನ್ನನ್ನು ದಹಿಸುತ್ತಿದೆ. ಹೀಗಿರುವಾಗ ತೆಂಕಣ ಗಾಳಿಗೆ ಮೈಯೊಡ್ಡಿ ಹೇಗೆ ತಾನೇ ನಿಂತಿರಲಿ ?

ದಯಾಳು ಮೇಘಗಳೇ ! ನನ್ನ ದೇಹದ ಕಾಂತಿ ಆರಿತು, ಬಣ್ಣ ಒಣಗಿತು, ಬಳೆ ಸಡಿಲಗೊಂಡಿತು, ಮನಸ್ಸು, ನಿದ್ದೆ ಎಲ್ಲ ಎಲ್ಲಿಗೋ ಹೋಯಿತು. ನಾನೀಗ ಆರ್ತೆ, ದುಃಖಿ. ತಂಪಾದ ಝರಿಗಳಿಂದ ಯುಕ್ತವಾದ ವೇಂಗಡದಲ್ಲಿ ನಿಂತ ಸಕಲ ತಾಪಪರಿಹಾರಕನಾದ ಆ ಪರಮಾತ್ಮನ ಬರವನ್ನೇ ಕಾಯುತ್ತಾ, ಅವನನ್ನೇ ಹಾಡುತ್ತಾ, ಅವನು ಬರುವವರೆಗೂ ಜೀವವನ್ನು ಹಿಡಿದಿರುತ್ತಾ ಕಾಯುತ್ತೇನೆ, ತಿಳಿಯಿತೆ ?

ಶರೀರದೊಳಗೆ ಮಿಂಚನ್ನು ಧರಿಸಿದ ಮೇಘಗಳೇ ! ಮೇಲೇರಿದಂತೆಲ್ಲಾ ಆಗಸವನ್ನು ಮಾತ್ರ ನಿಮ್ಮ ತನು ಕಾಂತಿಯಿಂದ ಮಸಗುತ್ತೀರಲ್ಲ ! ನನ್ನ ಮನಸ್ಸನ್ನೂ ಹಾಗೆಯೇ ಬೆಳಗಿಸಬೇಡವೇ ? ನಿಮಗೆ ಆ ಮನಸ್ಸೇ ಇಲ್ಲವೇ ? ನನ್ನ ಮೊಲೆಗಳು ತಿರುವೇಂಗಡದೊಡೆಯನಿಗೇ ತಹತಹಿಸುತ್ತಿದೆ. ಅವನ ಚೆಲುವಾದ ವಕ್ಷ ಪ್ರದೇಶವನ್ನು ಆಲಂಗಿಸಲು ಪ್ರತಿದಿನ ಉಂಟಾದ ಆಸೆಯನ್ನು, ಶ್ರೀ ದೇವಿಯನ್ನು ಎದೆಯಲ್ಲಿ ಧರಿಸಿದ ವೇಂಗಡದೊಡೆಯನಿಗೆ ಬಿನ್ನವಿಸಿರಿ !

ಆಗಸವನ್ನೆಲ್ಲಾ ವ್ಯಾಪಿಸಿ ದಟ್ಟಯಿಸುತ್ತಿರುವ ಮತ್ತು ಜೇನು ತುಂಬಿದ ಹೂಗಳು ಚದುರಿ ಹರಡುವಂತೆ ಮಾಡುವ ಮಳೆಯನ್ನು ವ್ಯಾಪಕವಾಗಿ ಸುರಿಸುವ ಮೋಡಗಳೇ ! ಬಲವಾದ ಹರಿತವಾದ ಉಗುರಿನಿಂದ ಹಿರಣ್ಯಕನ ಒಡಲನ್ನು ಬಗೆದ ಭಗವಂತನು ತಾನೇ ಅಪಹರಿಸಿಕೊಂಡ (ಅವನ ವಿಶ್ಲೇಷದಿಂದ ಕಳಚಿದ) ನನ್ನ ಬಳೆಗಳನ್ನು ಮತ್ತೆ ತಂದುಕೊಡುವಂತೆ ನೀವು ಹೇಳಿರಿ !

ಕಡಲ ನೀರನ್ನು ಕುಡಿದು ಸೊಕ್ಕೇರಿದ ಮುಗಿಲುಗಳೇ ! ಮಹಾಬಲಿಯನ್ನು ಬೇಡಿ ಭೂಮಿಯನ್ನಳೆದವನು ವಾಸಿಸುವ ತಿರುವೇಂಗಡದಲ್ಲಿ ದಟ್ಟಯಿಸಿ ಮಳೆಯನ್ನು ಸುರಿಸುವವರೇ ! ನೊಣಗಳು ಮೇಲೆ ಕುಳಿತ ಮಾತ್ರದಿಂದಲೇ ಅಂತಸ್ಸಾರವನ್ನೆಲ್ಲಾ ಕಳೆದುಕೊಳ್ಳುವ ಬೇಲದಂತೆ ನಾನು ಶಿಥಿಲಳಾಗಿದ್ದೇನೆ. ಅವನ ಕೇವಲ ಆಲಿಂಗನವೇ ಈ ರೀತಿ ನನ್ನನ್ನು ಸಂಪೂರ್ಣವಾಗಿ ಸೂರೆಗೊಂಡ ನಾರಾಯಣನಿಗೆ ನನ್ನ ಬಾಧೆಯನ್ನು ತಿಳಿಸಿರಿ.

ಶಂಖಗಳು ತುಂಬಿದ ಮಹಾಕಡಲನ್ನು ಕಡೆದವನ ತಿರುವೇಂಗಡದ ಗಿರಿಯ ಮೇಲೆ ಸಂಚರಿಸುವ ತಣ್ ಮುಗಿಲುಗಳೇ ! ಕಮಲೇಕ್ಷಣನಾದ ನನ್ನ ಸ್ವಾಮಿಯ ಅಡಿದಾವರೆಗಳಲ್ಲಿ ಮಾಡುವ ಬಿನ್ನಹ ಇದು. ನನ್ನ ಸ್ತನಗಳ ಮೇಲಿರುವ ಕುಂಕುಮಕರ್ದಮವು ಅಳಿಯುವಂತೆ ಒಂದು ದಿನವಾದರೂ ಬಂದು ತಂಗಿದರೂ (ಆಲಂಗಿಸಿದರೂ) ನನ್ನ ಪ್ರಾಣವು ನಿಲ್ಲುವುದು. ಅವನು ಹಾಗೆ ಬಂದು ಸುಖ ನೀಡದೇಹೋದರೆ ನಾನು ಉಳಿಯುವುದೇ ಅನುಮಾನವು.

ಕಾರ್ಗಾಲದಲ್ಲಿ ಮೈದೋರುವ ಕಾರ್ಮುಗಿಲುಗಳಿರ ! ರಾಮಾವತಾರ ಕಾಲದಲ್ಲಿ ರಾವಣನೊಡನೆ ಹೋರಾಡಿದ ಈ ವೇಂಗಡನಾಥನ ಹೆಸರುಗಳನ್ನು ಹೇಳಿಕೊಂಡು ನಾನು ಜೀವ ಧರಿಸಬಹುದು ಎಂದುಕೊಂಡು ತಿಳಿದಿದ್ದೆ. ಆದರೆ ಆ ಹೆಸರೇ ಈಗ ನನ್ನನ್ನು ಮತ್ತೂ ಶಿಥಿಲಗೊಳ್ಳುವಂತೆ ಮಾಡಿದೆ. ಬೇಸಿಗೆಯ ಬಿಸಿಲಿಗೆ ಒಣಗಿ ಜೊಳ್ಳಾದ ಎಕ್ಕದ ಎಲೆ ಮಳೆಗಾಲದ ಹನಿಯೊಂದು ಬಿದ್ದರೆ ಕೂಡಲೇ ಕೆಳಗೆ ಉದುರಿ ಬೀಳುವಂತೆ ಅವನ ವಿರಹದಿಂದ ನೊಂದು ನಾಮೋಚ್ಚಾರಣದಿಂದಲೇ ಶಿಥಿಲೆಯಾಗಿ ಕೆಳಗೆ ಕುಸಿಯುತ್ತಿದ್ದೇನೆ. ಬಹುಕಾಲ ಕಳೆದರೂ ಕೂಡ ಒಂದು ದಿನವಾದರೂ ನನಗೆ ಸಂದೇಶವನ್ನು ನಿಮ್ಮ ಮೂಲಕ ಕಳುಹಿಸಕೂಡದೆ ? ಅದೇಕೆ ಅಷ್ಟೊಂದು ನಿರ್ಘೃಣನಾಗಿದ್ದಾನೆ.

ವೇಂಗಡದಲ್ಲಿ ನಿತ್ಯ ವಾಸ ಮಾಡುವ ಮತ್ತು ಮಾತಂಗ ಸದೃಶವಾದ ಮುಗಿಲುಗಳಿರಾ ! ಶೇಷಶಾಯಿಯ ಮಾತಾದರೂ ಏನು ? • "ತಾನೇ ಎಲ್ಲಾ ಕಾಲದಲ್ಲೂ ರಕ್ಷಕನಾಗಿರುವನು. ಅಂತಹವನೇ ಈ ವಚನವನ್ನು ಪಾಲಿಸದೆ, ಒಂದು ಸ್ತ್ರೀಲತೆಯನ್ನು ಬಳಲಿಸಿ ವಧೆ ಮಾಡಿದನು" ಎಂಬ ಮಾತನ್ನು ಲೋಕದ ಜನರು ಅವನನ್ನು ಕುರಿತು ಲಘುವಾಗಿ ಮಾತನಾಡುವಂತೆ ಮಾಡಿಕೊಂಡಿರುವನು.

ಹೀಗಾದರೆ ಮುಂದೆ ಜನ ಅವನನ್ನು ಲೋಕರಕ್ಷಕನೆಂದು ಭಾವಿಸುವುದು ಬೇಡವೇನು ?

ಭಗವತ್ಸಂಬಂಧವುಳ್ಳ ಎಲ್ಲಾ ಭೋಗಗಳಲ್ಲಿಯೂ ಕೊರತೆಯಿನಿತಿಲ್ಲದ ಶ್ರೀವಿಲ್ಲಿಪುತ್ತೂರಿನ ಹಿರಿಯರ ಮಗಳು ಗೋದೆಯು ಶೇಷಶಾಯಿಯಾದ ವೇಂಗಡದೊಡೆಯನನ್ನು ಆಶಿಸಿ ಸ್ತುತಿಮಾಡಿ ಅವನೆಡೆಗೆ ಮೋಡಗಳನ್ನು ದೂತರೆಂದು ಭಾವಿಸಿ ಸಂದೇಶವನ್ನು ಅಟ್ಟುವ ಈ ತಮಿಳು ಪದ್ಯಮಾಲೆಯನ್ನು ಆಪದ್ಧನದಂತೆ ಕಾಪಾಡಿಕೊಂಡು ತಮ್ಮ ಮನಃಪೂರ್ವಕವಾಗಿ ಭಗವಂತನನ್ನು ಕುರಿತು ಸ್ತೋತ್ರ ಮಾಡುವವರು ಭಗವಂತನಿಗೆ ದಾಸರಾಗಿ ಬಾಳುವರು.

ಈ ಪಾಶುರಗಳಲ್ಲಿ ಅಭಿವ್ಯಕ್ತಗೊಂಡಿರುವ ವಸ್ತುವಿನ್ಯಾಸ ಅಪೂರ್ವ ! ಒಂದು ರೀತಿಯಿಂದ ಈ ಪ್ರಬಂಧವು ತಿರುಪ್ಪಾವೈನ ಎರಡನೆಯ ಭಾಗವಾಗಿ ಭಾವಿಸಬಹುದು. ತಿರುಪ್ಪಾವೈ ಮಾರ್ಗಶೀರ್ಷ ಮಾಸದವರೆಗಿನ ದಿನಚರಿ ಆದರೆ ಇದು ಪುಷ್ಯ ಮಾಸದ ದಿನಚರಿಯಾಗುತ್ತೆ. ಮಾಗಿಯ ಛಳಿ ಮುಗಿದು ಬೇಸಿಗೆಯ ಆರಂಭವಾದ್ದರಿಂದ ಅದರ ಬೇಗೆಯೂ ಆಂಡಾಳ್‌ಗೆ ಅಸಹನೀಯ ವಾಗಿರುತ್ತದೆ.

ಈ ನಾಚ್ಚಿಯಾರ್ ತಿರುಮೊಳಿಯ ಪ್ರಾರಂಭದಲ್ಲಿ ಆಂಡಾಳ್ ಕಾಮದೇವನನ್ನು ಪ್ರಾರ್ಥಿಸಿ ವೇಂಗಡದೊಡೆಯನ ಜೊತೆ ಸೇರಿಸೆಂದು ಪ್ರಾರ್ಥಿಸುವುದರಿಂದ ಇಡೀ ನಾಚ್ಚಿಯಾರ್ ತಿರುಮೊಳಿಯು ವೇಂಗಡದವನನ್ನು ಕುರಿತ ಮಂಗಳಾಶಾಸನ ಪ್ರಬಂಧ ಎಂದು ವಾದ ಮಾಡುವವರು ಇದ್ದಾರೆ. ಹೀಗೆ ಹೇಳುತ್ತಾ ಹೋದರೆ ಇಡೀ ನಾಲಾಯಿರ ಪ್ರಬಂಧವೆಲ್ಲ ವೇಂಗಡದೊಡೆಯನಿಗೇ ಮುಡಿಪಾದಂತೆ ಎಂದೂ ವಾದ ಮಾಡಲು ಸಾಧ್ಯ. ಆದ್ದರಿಂದ ನಮಗೆ ಈಗ ವಾಚ್ಯವಾಗಿ ಪಾಶುರಗಳಲ್ಲಿ ವೇಂಗಡ ವಿಚಾರವು ಕಂಡುಬಂದರೆ ಅವುಗಳನ್ನು ಮಾತ್ರ ನಾವು ನಮ್ಮ ಅಧ್ಯಯನಕ್ಕೆ ತೆಗೆದುಕೊಂಡಿರುವುದು.

ಮತ್ತೊಂದು ವಿಶೇಷ. ಆಂಡಾಳ್ ತನ್ನನ್ನು ದೇವರ ಜೊತೆ ಕೂಡಿಸಲು ಮನ್ಮಥನನ್ನು ಬೇಡಿಕೊಂಡಿದ್ದಾಳೆ. ಆಂಡಾಳ್‌ಗೆ ಏಕೆ ಈ ಚಿಕ್ಕ ಪುಟ್ಟ ದೇವರುಗಳ ಅಥವಾ ದೇವತಾಂತರಗಳನ್ನು ಮೊರೆ ಹೋಗುವ ಬುದ್ಧಿ ಏರ್ಪಟ್ಟಿತು ಎಂದು ವ್ಯಾಖ್ಯಾನಕಾರರು ಚರ್ಚಿಸಿದ್ದಾರೆ. ಇದು ಸರಿಯೇ ಎಂದು ಸಮಾಧಾನಪಟ್ಟು ಕೊಂಡರು. ಏತಕ್ಕೆಂದರೆ ರಾಮಾಯಣದ ಅಯೋಧ್ಯಾ ಕಾಂಡದಲ್ಲಿ ಶ್ರೀರಾಮನು ಪಟ್ಟಾಭಿಷಿಕ್ತನಾಗುವನೆಂಬ ಸುದ್ದಿ ತಿಳಿದ ಒಡನೆಯೇ ಅಯೋಧ್ಯೆಯ ಆಬಾಲ ವೃದ್ಧರು ಅವನ ಹಿರಿಮೆಯನ್ನು ಮರೆತು "ಸರ್ವಾನ್ ದೇವಾನ್ ನಮಸ್ಯಂತಿ ರಾಮಸ್ಯಾರ್ಥೇ ಯಶಸ್ವಿನಃ" ಎಂಬುದಾಗಿ ವಾಲ್ಮೀಕಿ ಮಹರ್ಷಿಗಳು ಹೇಳಿದ್ದಾರೆ. ರಾಮನ ಯಶಸ್ಸಿಗೋಸ್ಕರ ಶ್ರೇಯಸ್ಸಿಗೋಸ್ಕರವಾಗಿ ಪೌರರೆಲ್ಲರೂ ಎಲ್ಲ

ದೇವತೆಗಳಿಗೂ ನಮಸ್ಕರಿಸಿದರಂತೆ! ಒರ್ವನ ಮೇಲಿನ ಪ್ರೀತಿಯು ಅತ್ಯಂತ ಗಾಢತಮದ್ದೆಂದಾದರೆ ಮನುಷ್ಯನಾದವನು ತನ್ನ ವಿವೇಚನಾ ಶಕ್ತಿಯನ್ನೂ ಮರೆತು ಹೇಗಾದರೂ ಅವನಿಗೆ ಒಳ್ಳೆಯದಾಗಲಿ ಎನ್ನುವ ಬುದ್ಧಿಯಿಂದ ಇವನನ್ನು ಕೇಳಬೇಕು, ಇವನನ್ನು ಕೇಳಕೂಡದು ಎಂದು ತಾರತಮ್ಯ ಜ್ಞಾನವನ್ನು ಉಪಯೋಗಿಸುವುದಿಲ್ಲ. ಇದು ಆತುರ, ಪ್ರೀತಿ ಇವೆಲ್ಲದರ ಮಿಶ್ರಿತಭಾವ. ಇದೇ ರೀತಿ ಸುಂದರ ಕಾಂಡದಲ್ಲಿ ಸೀತೆಯನ್ನು ಹನುಮಂತನು ಅರಸಿ ಕಾಣದಾಗ ಕಂಡ ಕಂಡ ದೇವರುಗಳನ್ನು ಕೈಮುಗಿದು ಸಹಾಯ ಮಾಡಲು ಬೇಡುತ್ತಾನೆ. "ನಮೋಸ್ತು ರುದ್ರೇಂದ್ರ ಯಮಾನಿಲೇಭ್ಯೋ ನಮೋಸ್ತು ಚಂದ್ರಾರ್ಕಮರುದ್ಗಣೇಭ್ಯಃ". ಇದರಲ್ಲಿ ಮನುಷ್ಯನ ಪ್ರಾಕೃತಿಕ ವ್ಯಾಪಾರದ ಅರಿವು ಇದೆ. ಇದೇ ರೀತಿ ನಮ್ಮಾಳ್ವಾರ್ 'ದೈವಂಗಾಳ್' ಎಂದು ದೇವತೆಗಳನ್ನು ಮುಂದಿಟ್ಟು ಪರಮಾತ್ಮ ದರ್ಶನಕ್ಕೆ ಯತ್ನಿಸಿದರು ಎಂದು ವ್ಯಾಖ್ಯಾನಕಾರರ ವಿವರಣೆ. ಇದು ಸ್ವಾರಸ್ಯವಾದ ವಿವರಣೆ ಆದ್ದರಿಂದ ಇಲ್ಲಿ ತಿಳಿಸಿದ್ದೇನೆ. ಇದೇ ರೀತಿ ಆಂಡಾಳ್ ಇನ್ನೊಂದು ವರ್ಣನೆ ಮಾಡುತ್ತಾಳೆ. ಭಗವಂತನು ನಾಯಕಿಯ ಬಳೆಗಳನ್ನು ಕಳಚಿಕೊಂಡು ಹೋಗಿರುವನಂತೆ, ಅದನ್ನು ಮತ್ತೆ ತಂದು ಧರಿಸಲು ಕೊಡಬೇಕೆಂದು ದೌತ್ಯವಟ್ಟುತ್ತಾಳೆ. ಇವರ ಅರ್ಥವೇನು ? ಪರಮಾತ್ಮನ ವಿರಹದಿಂದ ಕೊರಗಿ ತೋಳುಗಳು ಸಣ್ಣದಾಗಿ ಕೈಬಳೆ ಕಳಚಿಬಂದಿವೆ. ಪರಮಾತ್ಮನು ಮತ್ತೆ ಅವಳೊಡನೆ ಸಂಶ್ಲೇಷೆ ಮಾಡಿದರೆ ಅದರಿಂದ ಅವಳಿಗೆ ನೆಮ್ಮದಿ ಉಂಟಾಗಿ ಅವಳ ಮೈತುಂಬಿಕೊಂಡು ಬಳೆಯನ್ನು ಧರಿಸಲು ತೋಳುಗಳು ಸಿದ್ಧವಾಗುತ್ತದೆ ಎಂದು ವಿವರಣೆ. ಮತ್ತೆ ಮೋಡವು ಮಳೆಯನ್ನು ಸುರಿಸದೆ ಹಾಗೆಯೇ ಇದ್ದರೆ ಅದರಿಂದ ಅವಳ ಮನಸ್ಸಿಗೆ ನೆಮ್ಮದಿ ಇರುವುದಂತೆ! ಮೋಡಗಳು ಕಪ್ಪುಬಣ್ಣ. ಪರಮಾತ್ಮನು ನೀಲಮೇಘ ಶ್ಯಾಮ! ಒಂದು ವೇಳೆ ಮೋಡಗಳು ಮಳೆ ಸುರಿಸಿದರೆ ಅವು ತಮ್ಮ ಕಪ್ಪುಬಣ್ಣವನ್ನು ಕಳೆದುಕೊಂಡು ಬಿಳಿದಾಗಿಬಿಡುವುದು. ಈಗಲಾದರೋ ಮೋಡಗಳ ಅವಲೋಕನದಿಂದ ಅವಳಿಗೆ ತನ್ನ ಪ್ರಿಯನ ನೆನಪು ಆವರಿಸಿ ಒಂದು ವಿಧವಾದ ತೃಪ್ತಿಯೇರ್ಪಡುತ್ತದೆ. ಆಂಡಾಳ್‌ನ ಚೇತೋಹಾರಿ ವಿವರಗಳು ನಮ್ಮಗಳ ಮನಸ್ಸನ್ನು ತೃಪ್ತಿಪಡಿಸುವುದರಲ್ಲಿ ಸಂದೇಹವಿಲ್ಲ.

ಈ ರೀತಿ ಆಂಡಾಳ್ ಆಳ್ವಾರ್ ಪಂಕ್ತಿಯಲ್ಲಿ ಹಿರಿಯಳಾಗಿ ಮೆರೆಯುತ್ತಾಳೆ, ಮನವಾಳಮಾಮುನಿಗಳು ಇವಳನ್ನು ಕುರಿತು ಮಾಡಿರುವ ಪ್ರಶಂಸೆ ನಿಜ.

ಇನ್‌ಱೋ ತಿರುವಾಡಿಪ್ಪೂರಂ ಎಮಕ್ಕಾಗ<br>
ಅನ್‌ಱೋ ಇಂಗಾಂಡಾಳ್ ಅವದರಿತ್ತಾಳ್ ಕುನ್‌ಱಾದ<br>
ವಾಟ್ವಾಗ ವೈಗುಂದವಾನ್ ಬೋಗಂದನ್ನೈಯಿಗಟ್ಟೊಂಡು<br>
ಆಱ್ವಾರ್ ತಿರುಮಗಳಾರ್ ಆಯ್

ಇಂದು ದಿಟ ತಿರುವಾಡಿಪ್ಪೂರವೆಮಗಾಗಿ
ಬಂದೊಗೆದಳಾಂಡಾಳ್, ಕುಂದದಾ ಬಾಳಸಿರಿ
ನಮಗೊದಗೆ ವೈಕುಂಠ ಭೋಗವನು ತಾಜರಿದು
ಅವತರಿಸುತಾಳ್ವಾರ್ ಸಿರಿಮಗಳಾಗಿ
(ಡಾ. ವಿನೋದ ಅವರ ಉಪದೇಶರತ್ನಿನಮಾಲೈ ಪುಸ್ತಕದಿಂದ)

ಇನ್ನು ಆಂಡಾಳ್ ಬಗ್ಗೆ ಹೆಚ್ಚೇನೂ ಹೇಳಬೇಕಾದ್ದಿಲ್ಲ. ಹಾಗೆ ಹೇಳಲು ಉಳಿದಿರುವುದಾದರೂ ಏನು ?

## ೭

ತಿರುಪ್ಪಾಣಿ ಆಳ್ವಾರ್ ಅವರ ಮಂಗಳಾಶಾಸನ ಪಾಶುರಗಳನ್ನು ಅಭ್ಯಸಿ ಸೋಣ. ಇವರು ಅಂತ್ಯಜರು, ಹತ್ತೇ ಪಾಶುರಗಳಲ್ಲಿ ರಂಗನಾಥನನ್ನು ವರ್ಣಿಸಿ ಪರಮಾತ್ಮನಲ್ಲಿ ಒಂದಾದರು. ಇವರು ಸಂದರ್ಭ ವಶದಿಂದ ಶ್ರೀರಂಗ ನಾಥನ ಸನ್ನಿಧಿಗೆ ಒಯ್ಯಲ್ಪಟ್ಟಾಗ ಭಕ್ತಿಯು ಅತಿರೇಕದಿಂದ ಹೊರಹೊಮ್ಮಿ ಬಂದ 'ಅಮಲನಾದಿಪಿರಾನ್'' ಪ್ರಬಂಧದಲ್ಲಿ ರಂಗನಾಥನ ಪಾದಾದಿಕೇಶಾಂತ ಸ್ವರೂಪದ ದಿವ್ಯವರ್ಣನೆ ಇದೆ. ಇವರ ಭಾವೋದ್ವೇಗ ಎಷ್ಟೊಂದು ಮಹತ್ತಿನ ದೆಂದರೆ ಅವರು ಈ ಪ್ರಬಂಧವನ್ನು ಹೇಳಿ ಮುಗಿಸುತ್ತಿದ್ದಂತೆಯೇ ರಂಗನಾಥನಲ್ಲಿ ಲೀನವಾದರು. ಇವರ ಈ ಆಶು (?) ಪ್ರಬಂಧದ ಸಂವಿಧಾನವನ್ನು ನಾವು ಅವಲೋಕಿಸಿದರೆ ಇಂತಹ ಅಪೂರ್ವ ಕಾವ್ಯ ವೈಭವ ಮೊದಲಿನಿಂದ ಕವನ ಕೃಷಿ ಮಾಡುವ ಕವಿಯೊಬ್ಬನಿಂದಲೇ ಸಾಧ್ಯ ಎನಿಸದೇ ಇರದು. ಆದ್ದರಿಂದ ಇವರು ಮತ್ತೂ ದೈವಕೃತಿಗಳನ್ನು ಮಾಡಿದ್ದರೂ ಇರಬಹುದು. ಏತಕ್ಕೆಂದರೆ ಇವರ ಚರಿತ್ರೆಯಿಂದ ಇವರು ಪ್ರತಿದಿನವೂ ಕಾವೇರಿಯಲ್ಲಿ ಸ್ನಾನಮಾಡಿ ಮರಳಿನಲ್ಲಿ ರಂಗನಾಥನ ಪ್ರತಿಮೆಯನ್ನು ನಿರ್ಮಿಸಿ ಅದರ ಮುಂದೆ ಮೈಮರೆತು ತಂಬೂರಿ ಮೀಟುತ್ತಾ ತಾಳವನ್ನು ತಟ್ಟುತ್ತಾ ಗಂಟೆಗಟ್ಟಲೆ ಹಾಡುತ್ತಲೇ ಇರುತ್ತಿದ್ದಂತೆ ತಿಳಿಯುತ್ತದೆ. ಈ ಹಾಡುಗಳು ಏತಕ್ಕೆ ಅವರದೇ ರಚನೆ ಇದ್ದಿರಬಾರದು. ಆಗಿನ ಕಾಲಕ್ಕೆ ಯಾರೂ ಇದರೆಡೆ ಲಕ್ಷ್ಯ ನೀಡಿದಂತೆ ಕಂಡುಬರುವುದಿಲ್ಲ. ಪರಮಾತ್ಮನು ಇವರನ್ನು ತನ್ನ ಎಡೆಗೆ ಕರೆಸಿಕೊಂಡಾಗ ಅವರಿಗೆ ಜಾಗೃತಿ ಉಂಟಾಯಿತು. ಆಗ ಹಾಡಿದ ಅವರ ಕಿರುಕಾವ್ಯ ಮೇರುಕೃತಿಯಾಗಿ ಮೆರೆಯಿತು ! ಎಂದು ತಿಳಿಯುತ್ತದೆ. ಅಂತೂ ಈ ಚಿಕ್ಕ ಕೃತಿ ಅವರಿಗೆ ಆಳ್ವಾರ್ ಸ್ಥಾನವನ್ನು ಸಂಪಾದಿಸಿಕೊಟ್ಟಿತು. ಇವರು ಈ ಕೃತಿಯಲ್ಲೂ ಎರಡು ಪಾಶುರ ಗಳಲ್ಲಿ ತಿರುವೇಂಗಡದೊಡೆಯನ ಪ್ರಸ್ತಾಪ ಮಾಡುತ್ತಾರೆ. ಆದರೆ ರಂಗನಾಥನ ಮುಂದೆ, ಅದರಲ್ಲೂ ವಿಶೇಷ ಸಂದರ್ಭದಲ್ಲಿ, ಮತ್ತೆ ಕಿರಿಯ ಆಶುಕೃತಿ ಹೊಮ್ಮಿರ ಬೇಕಾದರೆ ಇವರಿಗೆ ರಂಗನಾಥನಲ್ಲಿ ಹೇಗೆ ಮತ್ತು ಏಕೆ ತಕ್ಷಣವೇ ವೇಂಗಡದೊಡೆ

ಯನು ಕಾಣಿಸಿಕೊಂಡನೆನ್ನುವ ಅಂಶ ಅರ್ಥವಾಗುವುದಿಲ್ಲ. ಇವರು ತಿರುವೇಂಗಡಕ್ಕೆ ಹೋಗುವ ಸಂಭವವೂ ಇಲ್ಲ. ಇಲ್ಲ ಅವರಿವರ ಬಾಯಿಯಿಂದ ಅವನ ಮಹಿಮೆ ತಿಳಿದಿರಬೇಕು ಎಂದರೂ ಈ ಜರೂರು ಸಂದರ್ಭದಲ್ಲಿ ಆ ವೇಂಗಡ ನಾಥನ ನೆನಪು ಹೇಗೆ ಉಂಟಾಗಿರುತ್ತದೆ ಎಂದು ಊಹಿಸಲೂ ಅಸಾಧ್ಯವಾಗಿದೆ. ಇವರ ಇತರ ಪಾಶುರಗಳು ದೊರೆಯದೇ ಇರುವುದು ನಮ್ಮ ದೌರ್ಭಾಗ್ಯವೆಂದೇ ಭಾವಿಸಬೇಕು.

ಅವರ ಎರಡು ಪಾಶುರಗಳಿಂದ ವೇಂಗಡದ ಚಿತ್ರ ಹೇಗೆ ದೊರಕುತ್ತದೆ ಎಂಬುದನ್ನು ಗಮನಿಸೋಣ.

ಪರಿಶುದ್ಧನು ; ಜಗತ್ಕಾರಣನು ; ತನ್ನ ಭಕ್ತರಿಗೆ ತನ್ನನ್ನು ದಾಸನನ್ನಾಗಿ ಅರ್ಪಿಸಿಕೊಂಡವನು ; ಔದಾರ್ಯ ಔಜ್ವಲ್ಯ ಕಲ್ಯಾಣಗುಣ ಸನ್ನಿಭನು ; ನಿತ್ಯಸೂರಿ ಗಳ ಒಡೆಯನು ; ಪರಿಮಳಭರಿತವಾದ ದಿವ್ಯಧಾಮಗಳ ನೆಲೆಯಹಾದ ವೇಂಗಡದ ಬೆಟ್ಟದಲ್ಲಿ ನಿತ್ಯವಾಸ ಮಾಡುವವನು. ಕೋರಿದ್ದನ್ನು ನೆರವೇರಿಸುವವನು, ನೀತಿಯುತನು, ನಿತ್ಯ ವಿಭೂತಿಗಳಲ್ಲಿ ನೆಲಸಿರುವವನು, ಮಹೋನ್ನತ ಪ್ರಾಕಾರದ ಶ್ರೀರಂಗದಲ್ಲಿನ ಸ್ವಾಮಿಯು ! ಅಂತಹವನ ಕಮಲ ಕೋಮಲ ಪಾದಗಳು ನನ್ನ ಕಣ್ಣಿನೊಳಗೆ ಹೊಕ್ಕಿರುವುದಲ್ಲವೆ ?

ಗಂಡು ಕಪಿಗಳು ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಹಾರಿ ಕುಣಿದಾಡುತ್ತಿರುವ ತಿರುವೇಂಗಡದ ಮೇಲೆ ನಿತ್ಯಸೂರಿಗಳು ಪುಷ್ಪಫಲಾದ್ಯುಪಕರಣ ಗಳನ್ನು ಕೊಂಡೊಯ್ದು ಆರಾಧಿಸಲು ತಕ್ಕ ಮೂರ್ತಿಯಹಾದ ಶ್ರೀರಂಗದ ಅಹಿಶಯ್ಯೆಯಲ್ಲಿ ಮಲಗಿದ ಪುರುಷೋತ್ತಮನು ಉಟ್ಟಿರುವ ದಿವ್ಯದುಕೂಲವೂ ಅದರ ಮೇಲೆ ವಿರಾಜಿಸುವ ಬ್ರಹ್ಮನ ಉತ್ಪತ್ತಿ ಸ್ಥಾನವಾದ ಅಸದೃಶ ಸೌಂದರ್ಯೋಪೇತವಾದ ನಿಮ್ಮ ನಾಭಿಯ ಮೇಲೆ ಈ ದಾಸನ ಮನಸ್ಸು ನೆಲಸಿದೆ. ಮಧುರವಾದ ಈ ಜೀವಾತ್ಮಕ್ಕೆ ಉಜ್ಜೀವಿಸಲು ಪ್ರೇರಿಸುತ್ತಿದೆ.

ಇದು ತಿರುಪ್ಪಾಣಿ ಆಳ್ವಾರ್ ಅವರ ಸಾಹಿತ್ಯ ಪರಿಚಯ. ವೇಂಗಡ ದೊಡೆಯನಲ್ಲಿ ರಂಗನಾಥನನ್ನು ಅಥವಾ ರಂಗನಾಥನಲ್ಲಿ ವೇಂಗಡದೊಡೆಯನನ್ನು ಕಂಡ ಸೊಗಸಾದ ಅನುಭಾವ.

೮

ನಾವೀಗ ಸಾಗುವುದು ತಿರುಮಂಗೈ ಆಳ್ವಾರ್ ಅವರ ಪಾಶುರ ಪರಿಚಯ ಅಧ್ಯಯನಕ್ಕಾಗಿ. ತಿರುಮಂಗೈ ಆಳ್ವಾರ್, ಆಳ್ವಾರ್ ಪರಂಪರೆಯಲ್ಲಿ ಕಡೆಯವರಾಗಿ ಮತ್ತು ವೇಂಗಡದೊಡೆಯನಿಗೆ ಮಂಗಳಾಶಾಸನ ಮಾಡಿರುವವರಲ್ಲಿ ಹತ್ತನೆಯರು. ಈ ಆಳ್ವಾರ್‌ಗಳನ್ನು ಶ್ರೀವೈಷ್ಣವರು "ತೊಂಡಕ್ಕುಲತ್ತವರ್" ಎಂದೂ ಬಹಳ

ಆದರದಿಂದಲೂ, ಸ್ವಾರಸ್ಯವಾಗಿಯೂ ಕೀರ್ತಿಸಿರುತ್ತಾರೆ. ಏತಕ್ಕೆಂದರೆ ಆಳ್ವಾರ್‌ಗಳಲ್ಲಿ ಎಲ್ಲ ಜಾತಿ ಪಂಥದವರೂ ಇದ್ದಾರೆ. ಕೆಲವರು ಬ್ರಾಹ್ಮಣರು, ಕೆಲವರು ಕ್ಷತ್ರಿಯರು, ಕೆಲವರು ನಾಲ್ಕನೆಯ ವರ್ಣದವರು, ಕೆಲವರು ಅಂತ್ಯಜರೂ ಇದ್ದಾರೆ. ಆಂಡಾಳ್ ಅನ್ನು ಅಂತೂ ಅಯೋನಿಜೆ ಎನ್ನುತ್ತಾರೆ. ಆದರೆ ಜಾತಿಯೊಂದೇ ಅಡ್ಡ ಗೋಡೆಯಾಗಿ ನಿಂತು ಅವರ ಮಹಿಮೆಗೆ ಅಡ್ಡವಾಗಲಿಲ್ಲ. ಎಲ್ಲರೂ ಪರಮಾತ್ಮನನ್ನು ಒಲಿಸಿಕೊಂಡು ದಿವ್ಯ ಪುರುಷರಾಗಿ ಮೆರೆದರು. ಎಲ್ಲರೂ ಭಗವಂತನ ಕೈಂಕರ್ಯ ಭಾವವನ್ನೇ ಧ್ಯೇಯವನ್ನಾಗಿ ಇಟ್ಟುಕೊಂಡು ಅವನಲ್ಲಿ ದಾಸ್ಯತ್ವವನ್ನು ತೋರಿಸಿದ್ದರಿಂದಲೇ ಇವರನ್ನು ತೊಂಡಕ್ಕುಲತ್ತವರ್ (ದಾಸರಾದ ಪಂಥವನ್ನು ಅವಲಂಬಿಸಿದವರು) ಎಂದು ಕರೆದರು. ಹೀಗೆ ಕರೆದಿದ್ದೂ ಅಲ್ಲದೆ ಇವರನ್ನು ಶ್ರೀವೈಷ್ಣವ ಸಿದ್ಧಾಂತವನ್ನೇ ರೂಪಿಸುವುದಕ್ಕೆ ಪ್ರೇರಕ ಶಕ್ತಿಗಳಾಗಿ ಸ್ವೀಕರಿಸಿದರು. ಭಾಗವತ ಪಂಥಕ್ಕೆ ಸೇರಿದ ಇವರೆಲ್ಲರೂ ಜಾತ್ಯತೀತರು. ಇವರು ಒಂದೇ ಜಾತಿಗೆ ಸೇರಿದವರು. ಇವರನ್ನು ನಮ್ಮ ಜಾತಿಗೆ ಸೇರಿದವರು ಎಂದು ಭೇದಭಾವ ಮಾಡಿದವರ ಕ್ಷುಲ್ಲಕ ಮನೋಭಾವವೇ ತುಂಬಿರುತ್ತದೆ. ಕಾಳಿದಾಸ, ವಾಲ್ಮೀಕಿ ಮುಂತಾದ ವಿಶ್ವ ಪಥದಲ್ಲಿ ನಿಲ್ಲುವ ವ್ಯಕ್ತಿಗಳನ್ನು ನಮ್ಮವನು ಎಂದು ಕೆಲವು ಪಂಥದವರು ತಮ್ಮ ಪರಿಮಿತಿಗೆ ಎಳೆಯುವಂತೆ ಆಗುತ್ತದೆ. ಇವರೆಲ್ಲ ವಿಶ್ವಮಾನವರು, ತಮ್ಮ ಪಂಥದಿಂದ ನೀಡಲ್ಪಟ್ಟ ಒಂದು ಮಹತ್ತಾದ ಕೊಡುಗೆ ಎಂದು ಭಾವಿಸಿ ಅವರ ಆದರ್ಶವನ್ನು ಪಾಲಿಸಿ ತಾವೂ ಔನ್ನತ್ಯವನ್ನು ಪಡೆಯದೆ ಸಂಕುಚಿತಭಾವ ವ್ಯಕ್ತಪಡಿಸಿದರೆ ಆ ಮಹಾತ್ಮರಿಗೂ ಅನ್ಯಾಯ, ತಮ್ಮನ್ನೂ ಅನ್ಯಾಯ ಮಾಡಿಕೊಂಡಂತೆ ಆಗುತ್ತದೆ ಅಲ್ಲವೆ ? ಈ ತೊಂಡಕ್ಕುಲದವರ ವಾಙ್ಮಯ ಇಂದು ಶ್ರೀವೈಷ್ಣವ ಮಾರ್ಗದರ್ಶನವಾಗಿಯೂ ಪರಮ ಪೂಜನೀಯವಾಗಿಯೂ ಪವಿತ್ರವಾಗಿಯೂ ಪರಿಗಣಿತವಾಗಿದೆ.

ಹೀಗೆ ತಿರುಮಂಗೈ ಆಳ್ವಾರ್ ಆರು ದಿವ್ಯಪ್ರಬಂಧಗಳನ್ನು ರಚಿಸಿ ಯಶೋವಂತರಾಗಿದ್ದಾರೆ ! ಇವರ ಕಾವ್ಯದಲ್ಲಿ ರಸಿಕತೆ, ಅಲಂಕಾರ, ಸಂಗೀತ ಮುಂತಾದ ಸಾಹಿತ್ಯದ ವಿವಿಧ ಪ್ರಕಾರಗಳು ಕಂಡುಬರುತ್ತವೆ. ಎಂದು ಲಾಕ್ಷಣಿಕರು ಹೇಳಿದ್ದಾರೆ. ಭಕ್ತಿಯ ಆವೇಗ, ಪರಮೋಚ್ಚತೆ ಇವುಗಳಲ್ಲಿ ತುಂಬಿದೆ. ಕಳ್ಳನಾಗಿ ಕೊಳ್ಳೆ ಹೊಡೆಯುತ್ತಿದ್ದ ಇವರನ್ನು ಭಕ್ತನನ್ನಾಗಿ ಪರಿವರ್ತಿಸಲು ಸ್ವತಃ ಪರಮಾತ್ಮನೇ ವೈಕುಂಠದಿಂದ ಇಳಿದು ಬಂದು ಇವರಿಗೆ ತನ್ನ ಸಾಕ್ಷಾತ್ಕಾರವನ್ನು ಉಂಟುಮಾಡಿಸಿದನು. ಲೋಕಮಾತೆಯ ಪಾದಸ್ಪರ್ಶ, ಪರಮಾತ್ಮನ ದಿವ್ಯೋಪದೇಶ ಇವುಗಳ ಪರಿಣಾಮವಾಗಿ ತಿರುಮಂಗೈಗೆ ಜ್ಞಾನೋದಯ ಮಾತ್ರ ಉಂಟಾದುದಲ್ಲದೆ, ಅವರ ಬಾಯಿಂದ ನಿರಂತರವಾದ

ಸ್ತೋತ್ರ ಸಾಹಿತ್ಯವು ದಿವ್ಯಸ್ರೋತವಾಗಿ ಪ್ರವಹಿಸಿತು. "ನಾನ್ ಕಂಡುಕೊಂಡೇನ್ ನಾರಾಯಣಾ ಎನ್ನುನಾಮಂ" ಎಂದು ಪ್ರಾರಂಭಗೊಳ್ಳುವ ಅವರ ಸಾಹಿತ್ಯ ವಾಹಿನಿ ತೊಂಕಿಲ್ಲ, ತೊಡಕಿಲ್ಲದೆ ಇಂದಿಗೂ ಪಾಮರರನ್ನು ಉದ್ಧರಿಸುವ ಪವಿತ್ರ ವೇದ ವಾಙ್ಮಯಕ್ಕೆ ಸರಿಸಮನಾಗಿ ಪರಮಾತ್ಮನ ಕಡೆಗೆ ಸೆಳೆದೊಯ್ಯುವ ಸಾಧನ ಸಂಪತ್ತಾಗಿ ಕಂಗೊಳಿಸುತ್ತದೆ.

ತಿರುಮಂಗೈ ಆಳ್ವಾರ್ ಪ್ರಬಂಧಗಳು ಆರು. ಇವುಗಳನ್ನು ಆರು ವೇದಾಂತ ಗಳಿಗೆ ಸಾಮ್ಯ ಮಾಡುತ್ತಾರೆ. ಇವರ ಪ್ರತಿಭೆಯನ್ನು ಗುರುತಿಸಿದ ಲಾಕ್ಷಣಿಕರು ಇವರನ್ನು 'ನಾಲುಕವಿಪ್ಪೆರುಮಾನ್' ಎಂದು ಬಿರುದಿತ್ತು ಗೌರವಿಸಿದ್ದಾರೆ. ಎಂದರೆ ನಾಲ್ಕು ರೀತಿಯ ಕವಿತಾ ರಚನೆಯಲ್ಲಿ ಇವರು ಪ್ರಬುದ್ಧರು ಎಂದು ಅರ್ಥ. ವಿಸ್ತಾರ ಕವಿತೆ, ಹ್ರಸ್ವಕವಿತೆ, ಚಿತ್ರಕವಿತೆ, ಆಶುಕವಿತೆ ಇವುಗಳೇ ಆ ನಾಲ್ಕು ವಿಧ ಪ್ರಕಾರಗಳು. ತಿರುಮಂಗೈ ಅವರ ಈ ಕಾವ್ಯ ಮಾರ್ಗಕ್ಕೆ ಮರುಳಾದವರು ನಾಯನ ಮಾರ್ರಲ್ಲಿ ಒಬ್ಬರಾದ ತಿರುಜ್ಞಾನ ಸಂಬಂಧರ್ ಎಂದು ಹೇಳುತ್ತಾರೆ. ಇವರೇ ಆ ಬಿರುದನ್ನು ನೀಡಿ ತಮ್ಮ ಕೈಯ್ಯಲ್ಲಿನ ವೇಲಾಯುಧವನ್ನು ನೀಡಿದರು ಎಂದು ಕತೆ ಇದೆ. ಎಷ್ಟು ನಿಜವೋ ತಿಳಿಯದು. ಇವರ ಪ್ರಬಂಧಗಳು ಕ್ರಮವಾಗಿ ಪೆರಿಯತಿರುಮೊಳಿ, ತಿರುಕ್ಕುರುಂದಾಂಡಗಂ, ತಿರುನೆಡುಂದಾಂಡಗಂ, ತಿರುವೆಳುಕ್ಕೂತ್ತಿರುಕ್ಕೈ, ಶಿರಿಯ ತಿರುಮಡಲ್ ಮತ್ತು ಪೆರಿಯ ತಿರುಮಡಲ್. ತಿರುಮಂಗೈ ಆಳ್ವಾರ್ ಒರ್ವರೇ ಆಸೇತು ಹಿಮಾಚಲ ಪರ್ಯಂತ ಕ್ಷೇತ್ರ ದರ್ಶನಗಳನ್ನು ಹಲವು ಸಲ ಮಾಡಿದರು ಎಂಬುದಾಗಿ ಹೇಳುತ್ತಾರೆ. ಇವರು ೧೦೫ ವರ್ಷ ಪೂರ್ಣಾಯುಷ್ಯ ಬಾಳಿ ಎಲ್ಲ ದೇವರುಗಳನ್ನು ಸ್ತುತಿಸಿ ಜೀವನ ಸಾರ್ಥಕ್ಯತೆ ಪಡೆದಿರುವರು ಎಂಬುವುದು ಇವರ ಹಿರಿಮೆ. ಈಗ ನಾವು ಶ್ರೀವೈಷ್ಣವ ಆಲಯ ಗಳಲ್ಲಿ ಏನು ಕೊಠಾರೋತ್ಸವ ಅಥವಾ ಅಧ್ಯಯನೋತ್ಸವ ಎಂಬುವುದನ್ನು ಕಾಣುತ್ತೇವೆಯೋ ಅದನ್ನು ರೂಪುಗೊಳಿಸಿದವರು ಈ ಆಳ್ವಾರ್ ಎನ್ನುತ್ತಾರೆ. ಮುಂದೆ ಈ ಕ್ರಮ ನಿಂತುಹೋದದ್ದನ್ನು ಪುನರ್ರೂಪಿಸಿದವರು ನಾಥಮುನಿಗಳು ; ಅವರ ತರುವಾಯ ರಾಮಾನುಜರು.

ಈ ಎಲ್ಲ ದೃಷ್ಟಿಯಿಂದಲೂ ಹಿರಿಮೆಗೊಂಡಿರುವ ತಿರುಮಂಗೈ ಆಳ್ವಾರ್ ಸಾಹಿತ್ಯವೇ ನಾಲಾಯಿರ ದಿವ್ಯ ಪ್ರಬಂಧದ ಬಹುಪಾಲನ್ನು ಆಕ್ರಮಿಸುತ್ತದೆ. ನಾಲಾಯಿರ ದಿವ್ಯಪ್ರಬಂಧದಲ್ಲಿ ನಮ್ಮಾಳ್ವಾರ್ ನಂತರ ಇವರ ಸಾಹಿತ್ಯಕ್ಕೆ ವಿಶಿಷ್ಟ ಸ್ಥಾನ.

ಈ ಆರು ಪ್ರಬಂಧಗಳಲ್ಲಿ ತಿರುಮಂಗೈ ತಿರುವೇಂಗಡದ ಮೇಲೆ ಮಂಗಳಾ ಶಾಸನ ಮಾಡಿರುವುದು ೬೫ ಪಾಶುರಗಳಲ್ಲಿ. ಇವುಗಳಲ್ಲಿ ೪೧ ಪಾಶುರಗಳಲ್ಲಿ ಇವರು ಅನುಸ್ಯೂತವಾಗಿ ಅವನನ್ನು ಹಾಡಿದ್ದಾರೆ. ಎಲ್ಲಾ ಆಳ್ವಾರುಗಳಿಗಿಂತ ಇವರು

ಹೆಚ್ಚಿನ ಸಂಖ್ಯೆಯಲ್ಲಿನ ಪಾಶುರಗಳಲ್ಲಿ ತಿರುವೇಂಗಡವನ್ನು ಸ್ತುತಿಸಿದ್ದಾರೆ. ಇವುಗಳಲ್ಲಿ ಪೆರಿಯ ತಿರುಮೊಳಿಯಲ್ಲಿಯೇ ಈ ಪಾಶುರಗಳು ಹೆಚ್ಚಿನ ಸಂಖ್ಯೆಯಲ್ಲಿದೆ. ಹದಿನಾಲ್ಕು ಬಿಡಿ ಪಾಶುರಗಳೂ, ೪೧ ನಿರಂತರವಾಗಿ ಓಡುವ ಪಾಶುರಗಳೂ ವೇಂಗಡಕ್ಕೆ ಸಂಬಂಧಿಸಿದುವು. ತಿರುಕ್ಕುರುಂದಾಂಡಗಂನ ೧ ಪಾಶುರ, ತಿರುನೆಡುಂದಾಂಡಗಂನ ೪ ಪಾಶುರಗಳು, ಶಿರಿಯ ತಿರುಮಡಲ್‌ನ ಒಂದು ಸಾಲು, ಪೆರಿಯ ತಿರುಮಡಲ್‌ನ ಎರಡು ಸಾಲುಗಳು ವೇಂಗಡ ವಿಷಯಾತ್ಮಕವಾದುವು. ತಿರುನೆಡುಂದಾಂಡಗಂನಲ್ಲಂತೂ ಮೂರು ಪಾಶುರಗಳಲ್ಲಿ ಮಲೆಯ ಹೆಸರೋ ಪರಮಾತ್ಮನ ಹೆಸರೋ ನಿರ್ದೇಶಗೊಂಡಿಲ್ಲದಿದ್ದರೂ ಸಹ ಆ ಮಲೆಯ ಲಕ್ಷಣ ಗಳನ್ನು ಗುರುತಿಸಿ ಇವು ತಿರುಮಲೆಗೆ ಸಂಬಂಧಿಸಿದುವು ಎಂದು ನಿರ್ಧರಿಸಿ ದ್ದಾರೆ.

'ತಿರುಕ್ಕುರುಂ ದಾಂಡಗಂ'ನಲ್ಲಿ ತಿರುಮಲೆಯೆಂದು ಆಳ್ವಾರ್ ಕರೆದಿದ್ದಾರೆ.

ನಮಗೆ ಇಹಲೋಕದ ಸುಖವನ್ನು ಕೊಡುವವನೂ, ನಿಜವಾದ ಮೋಕ್ಷೋ ಪಾಯವನ್ನು ನೀಡುವವನೂ, ವಿಸ್ತಾರವಾದ ತೋಪುಗಳಿಂದ ಆವೃತವಾದ ಆಶ್ಚರ್ಯಕರವಾಗಿ ಶ್ರೀರಂಗ ಕ್ಷೇತ್ರದಲ್ಲಿ ನಿತ್ಯ ವಾಸ ಮಾಡುತ್ತಾ ಇರುವವನೂ, ಯುಗ ಭೇಧದಿಂದ ಕೆಂಪು ಬಣ್ಣ, ಕಪ್ಪು ಬಣ್ಣಗಳನ್ನು ಹೊಂದಿರತಕ್ಕವನೂ, ತಿರುವೇಂಗಡದ ಮೇಲೆ ನಿಂತು ದೇವತೆಗಳಿಗೂ, ಮಾನವರಿಗೂ ಕೃಪೆ ಮಾಡುವ ಸ್ವಾಮಿಯ ಸೌಲಭ್ಯ, ಸೌಶೀಲ್ಯಗಳನ್ನು ನೆನೆಯಬಲ್ಲವರು ನನ್ನ ತಲೆಯ ಮೇಲೆ ಸ್ಥಿರವಾಗಿ ನೆಲಸುತ್ತಾರೆ.

'ತಿರುನೆಡುಂದಾಂಡಗಂ'ನ ೮, ೯, ೧೦ ಮತ್ತು ೧೭ನೇ ಪಾಶುರಗಳ ಅರ್ಥವನ್ನು ಮನನ ಮಾಡೋಣ. ಇಲ್ಲಿಯೂ ಮೂರು ಪಾಶುರಗಳಲ್ಲಿ, ನೆಡುವರೈಯಿನುಚ್ಚಿಮೇಲಾಯ್, ಪನಿವರೈಯಿನುಚ್ಚಿಯಾಯ್, ವಡನಾನಾಯ್ ಎಂಬ ವಿಶೇಷಣಗಳಿಂದ ತಿರುವೇಂಗಡದ ದೇವನು ಗುರುತಿಸಲ್ಪಟ್ಟಿದ್ದಾನೆ. ಕಡೆಯ ಪಾಶುರದಲ್ಲಿ ಮಾತ್ರ ವಡವೇಂಗಡ ಮೇಯನೆಂಬುದಾಗಿ ಹೊಗಳಿಸಿ ಕೊಂಡಿದ್ದಾನೆ.

'ತಿರುನೀರಗಂ' ದಿವ್ಯ ದೇಶದಲ್ಲಿರುವವನೇ ! ಪರಮ ವಿಲಕ್ಷಣವಾದ ವೇಂಗಡದ ಶಿಖರದ ಮೇಲಿರುವವನೆ ! 'ತಿರುನೀಲಾತ್ತಿಂಗಳ್‌ತುಂಡಂ' ಎನ್ನುವ ಪುಣ್ಯಕ್ಷೇತ್ರದ ಸ್ವಾಮಿಯೇ ! 'ತಿರುಊರಗ'ದಲ್ಲಿರುವವನೆ ! ವೇಃಕಾದ ಸ್ವಾಮಿಯೇ ! ಧ್ಯಾನಿಸುವ ಪರಮ ಯೋಗಿಗಳ ಹೃತ್ಕಮಲದಲ್ಲಿ ನೆಲಸಿರುವವನೇ ನಿಖಿಲಲೋಕಗಳೇ ಸ್ತುತಿಸುವ 'ತಿರುಕ್ಕಾರಕಂ' ಎನ್ನುವ ಕ್ಷೇತ್ರವಾಸಿಯೇ, ತಿರುಕ್ಕಾರ್‌ವಾನಂ ಎನ್ನುವ ತಿರುಪತಿಯ ದೇವನೇ, ನವನೀತ ಚೋರನೇ, ಸ್ಪೃಹಣೀಯವಾದ ಸುಂದರ ಕಾವೇರಿಯ ದಕ್ಷಿಣಕ್ಕೆ ಹಬ್ಬಿರುವ ತಿರುಪ್ಪೇರ್

ನಗರದಲ್ಲಿ ಬೆಳಗುವ ಪರಂಜ್ಯೋತಿಯೇ, ನನ್ನ ಹೃದಯದ ಭದ್ರ ಪೀಠದಲ್ಲಿ ನೆಲೆಯಾಗಿರುವವನೇ, ಸರ್ವಲೋಕನಿಯಾಮಕನೇ, ನಿನ್ನ ದಿವ್ಯ ಪಾದಾರವಿಂದ ಗಳನ್ನು ಅನುಭವಿಸಲು ಸದಾ ಸರ್ವದಾ ಆಶಿಸುತ್ತೇನೆ (೮).

ಹಡಗುಗಳಿಂದ ಶ್ರೇಷ್ಠ ರತ್ನಗಳನ್ನು ತಂದು ತಳ್ಳುವ ಸಮುದ್ರವಾದ ತಿರು ಕ್ಕಡಲ್‌ಮಲ್ಲೈನಲ್ಲಿ ಬಾಳುವವನೇ, ಮರಳಿನಿಂದ ಕೂಡಿದ ವೆಃಕಾದಲ್ಲಿ ಸಾನ್ನಿಧ್ಯ ಗೊಂಡವನೇ, ಹೂವಿನ ಮಾಲೆಯಿಂದ ಅಲಂಕೃತವಾದ ವಕ್ಷ ಪ್ರದೇಶವುಳ್ಳವನೇ, ಪರ್ವತ ರಾಜ ಪುತ್ರಿಯನ್ನು ತನ್ನ ದೇಹದ ಎಡಭಾಗದಲ್ಲಿ ಹೊಂದಿರುವವನನ್ನು ಬಲಪಾರ್ಶ್ವದಲ್ಲಿ ಹೊಂದಿರುವ ದೇವನೇ, ಕ್ಷೀರಸಾಗರ ಶಾಯಿಯಾದವನೇ, ಭೂಮಿಯ ಮೇಲೆ ರಾಮಕೃಷ್ಣಾದಿ ಅವತಾರಗಳಿಂದ ನಲಿದವನೇ, ತಂಪಾದ ಬೆಟ್ಟದ ನೆತ್ತಿಯನ್ನುಳ್ಳ ತಿರುವೇಂಗಡವಾಸನೇ, ನಿನ್ನ ಸ್ಥಳಗಳು ಒಂದೇ, ಎರಡೇ. ಆದರೂ ನೀನು ಎಲ್ಲಿರುವೆ ಎಂದು ಚಪಲಚಿತ್ತನಾಗಿ ನಿನ್ನನ್ನು ಅರಸುತ್ತಲೇ ಇದ್ದೇನೆ. ಅಲೆಯುತ್ತಲೇ ಇದ್ದೇನೆ. ಹವಳದ ಬಣ್ಣದವನೇ, ಇಷ್ಟು ಜಾಗಗಳಿ ದ್ದರೂ ಕೂಡ ಅರಸಿ ಮುಗಿಯಲೇ ಇಲ್ಲವಲ್ಲ. ನನ್ನ ಸ್ಥಿತಿಯನ್ನು ನೀನೇ ಅರಿಯ ಬೇಕು. ಇದು ನನ್ನ ಪಾಪದ ಫಲವೋ ತಿಳಿಯಲಿಲ್ಲ (೯).

ಲೋಕವೆಲ್ಲಾ ಸ್ತುತಿಸುವ ದಕ್ಷಿಣದ ತಿರುಮಾಲಿರುಂಶೋಲೈಯಲ್ಲಿ ನಿಂತ ಆನೆಯಂತಹ ದೇವರೆ ! ಉತ್ತರದ ತಿರುವೇಂಗಡದಲ್ಲಿರುವ ಆನೆಯಂತಹವನೇ ! ಪಶ್ಚಿಮದ ಶ್ರೀರಂಗದಲ್ಲಿ ಬೆಳಗುವ ಆನೆಯಂತಹವನೇ ! ಪೂರ್ವದ ತಿರುಕ್ಕಣಪುರದ ಆನೆಯೆ ! ಎಲ್ಲ ಕಾಲದಲ್ಲೂ ನಿತ್ಯಸೂರಿಗಳಿಗೆ ಸುಲಭ ಸಾಧ್ಯವಾಗಿರುವವನೇ ! ಅವತಾರದ ಅನಂತರ ಶರಣ್ಯರಿಗೆ ಆಶ್ರಯಿಸಲು ಅನುಕೂಲವಾಗುವಂತೆ ಜ್ಯೋತಿ ಯಾಗಿ ತಿರುಮೂಳಿಕ್ಕಳಂ ಮೊದಲಾದ ದಿವ್ಯಕ್ಷೇತ್ರಗಳಲ್ಲಿ ಅರ್ಚಾರೂಪದಿಂದ ಬೆಳಗುವ ಆದಿದೇವನೇ, ಸ್ವರ್ಣ ಸದೃಶನೇ ! ಸಪ್ತಲೋಕವನ್ನು ಕಾಯುವುದರಿಂದ ಹೊಂದಿದ ಕೀರ್ತಿಯುಳ್ಳವನೇ, ನಿಹೀನನೂ, ಜ್ಞಾನರಹಿತನೂ ಆದ ನಾನು "ನನಗೆ ಮುದ್ದಾದವನು, ಆಪ್ತನು" ಎಂದು ಅಷ್ಟು ಮಾತ್ರ ಹೇಳದೆ ಬೇರೇನನ್ನೂ ಹೇಳಲು ತಾನೇ ಬಲ್ಲೆನು ?

ನನ್ನ ಮಗಳು ಕರು ಮೇಯಿಸಿ ರಕ್ಷಿಸಿ ಬಹಳ ಸಂತೋಷಗೊಂಡ ಯುವಕನೇ ಎನ್ನುತ್ತಾಳೆ ! ಸುವಾಸನೆಯಿಂದ ತುಂಬಿದ ಸುತ್ತುವರಿಯಲ್ಪಟ್ಟ ತಿರುಕ್ಕಣಪುರದಲ್ಲಿನ ಪಕ್ವವಾದ ನನ್ನ ಹಣ್ಣೇ ಎನ್ನುತ್ತಾಳೆ; ಬೀದಿಯ ತುಂಬಾ ಕುಂಭ ನೃತ್ಯವನ್ನು ಮನಸೋಚ್ಛೆಯಾಗಿ ಮಾಡಿ ಸಂತೋಷಿಸಿದವನೇ ಎನ್ನುತ್ತಾಳೆ; ಉತ್ತರ ವೇಂಗಡದ ಮೇಲೆ ವಾಸಿಸುವ ನಿತ್ಯ ಯೌವ್ವನನೇ ಎನ್ನುತ್ತಾಳೆ; ಅಸುರ ಸಮೂಹ ವನ್ನೂ ಜಯಿಸಿ ಮೂಲೋತ್ಪಾಟನ ಮಾಡಿದ ರಾಜನೇ ಎನ್ನುತ್ತಾಳೆ ! ವಿಸ್ತಾರ ವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ ತಿರುನರೈಯೂರ್‌ನಲ್ಲಿ ನಿಂತವನೇ

ಎನ್ನುತ್ತಾಳೆ; ಸಾಂದ್ರವಾದ ತಲೆಗೂದಲನ್ನು, ಕೃಷ್ಣ ವರ್ಣದ ದೇಹವನ್ನು ಉಳ್ಳ ಆತ ನನಗೆ ಜೊತೆಗಾರನೇ ಎನ್ನುತ್ತಾಳೆ. ಹೀಗೆ ಅವನನ್ನೇ ನೆನೆಸಿಕೊಳ್ಳುವುದರಿಂದ ಪರಸ್ಪರ ಸಾದೃಶ್ಯಗೊಂಡ ಸ್ತನಗಳ ಮೇಲೆ ಕಣ್ಣೀರು ಧಾರೆಯಾಗಿ ಹರಿಯುವಂತೆ ಆಗಿ ಬಾಡಿ ಕಂದಿ ಕುಂದಿಹೋಗಿದ್ದಾಳೆ. (೧೬)

'ಶಿರಿಯ ತಿರುಮಡಲ್', 'ಪೆರಿಯ ತಿರುಮಡಲ್' ಎಂಬ ಸ್ತುತಿಗಳು ಭಗವಂತನ ನಿಂದಾ ಸ್ತುತಿಗಳು. ಈ ಆಳ್ವಾರ್ ಒಬ್ಬರೇ ಇಡೀ ಪ್ರಬಂಧವನ್ನೇ ಮಡಲಾಗಿ ರಚಿಸಿರುವುದು. ಈ ಮಡಲ್ ಲಕ್ಷಣ ಇಂತಿದೆ.

ನಾಯಕಿಯು ನಾಯಕನು ತನ್ನೊಂದಿಗೆ ಸಂಶ್ಲೇಷೆ ಹೊಂದಲು ಬಹು ಕಾಲವಾದರೂ ಬಾರದೇ ಹೋದಾಗ ತನ್ನ ಕಡೆಗೆ ಅವನನ್ನು ಹೇಗೆ ಆಕರ್ಷಿಸಿಕೊಳ್ಳುವುದೆಂಬ ಹಲವು ಉಪಾಯಗಳು ನಿಷ್ಪ್ರಯೋಜನಗೊಳ್ಳಲು ಕಡೆಯ ಅಸ್ತ್ರವಾದ ಈ ಮಡಲ್ ಅನ್ನು ಉಪಯೋಗಿಸುತ್ತಾಳೆ.

'ಮಡಲ್' ಅಥವಾ 'ಮಡಲೂರು' ಎನ್ನುವುದನ್ನು ಟಿ. ಟಿ. ಡಿ. ಅವರು ತಮ್ಮ ಆಳ್ವಾರುಲ ಪಾಶುರಮುಲುಡಲ್ಲಿ ಈ ರೀತಿ ವಿವರಿಸಿದ್ದಾರೆ. ಅಗ್ನಿ ಸಾಕ್ಷಿಯಾದ ಭರ್ತನು ತನ್ನನ್ನು ನಿರಾದರಣೆ ಮಾಡಿ ದೂರ ಹೋಗಲು ತನ್ನ ಗಂಡನು ಅವಶ್ಯಕವಾಗಿ ತನ್ನನ್ನು ಸ್ವೀಕರಿಸುವಂತೆ ಮಾಡಲು ಧರ್ಮಪತ್ನಿಯಾದವಳು ಎಲ್ಲಾ ಉಪಾಯಗಳನ್ನು ಪ್ರಯೋಗಿಸಿ ವಿಫಲಳಾಗಿ ಕಡೆಯ ಬ್ರಹ್ಮಾಸ್ತ್ರವಾದ ಮಡಲನ್ನು ಉಪಯೋಗಿಸುತ್ತಾಳೆ. ತಲೆಯನ್ನು ಚಚ್ಚಿಕೊಂಡು ಹರಿದ ಸೀರೆ ಅಥವಾ ಮಾಸಿದ ಸೀರೆಯನ್ನುಟ್ಟು ತೆಂಗಿನ ಗರಿಯನ್ನು ದಾರಿಯಲ್ಲಿ ಎಳೆಯುತ್ತಾ ಅದರ ಶಬ್ದದಿಂದ ಜನರು ತನ್ನ ಕಡೆ ನೋಡಲೆಂಬ ಭಾವವುಳ್ಳವಳಾಗಿ, ಆಭರಣಗಳನ್ನು ವಿಸರ್ಜಿಸಿದವಳಾಗಿ, ನಾಚಿಕೆಯನ್ನು ಅತ್ತ ನೂಕಿ ಜನಪಟ್ಟಣೆಯ ಎತ್ತರದ ಸ್ಥಳವೊಂದನ್ನು ಸಾರಿ, ಜನ ಸುತ್ತ ನೆರೆಯಲು ಬಹಿರಂಗವಾಗಿ "ನನ್ನ ಗಂಡ ಒಳ್ಳೆಯವನೇ, ಬುದ್ಧಿವಂತನೇ ಎಂಬ ನಿಮ್ಮ ತಿಳುವಳಿಕೆ ಸುಳ್ಳು. ನೋಡಿ ಈಗ ನನ್ನನ್ನು ತ್ಯಜಿಸಿ ಓಡಿಹೋಗಿದ್ದಾನೆ. ಅವನು ಮೋಸಗಾರ, ದುಷ್ಟ. ಉದಾಹರಣೆಗೆ ಅವನೀಗ ನನ್ನನ್ನು ತ್ಯಜಿಸಿರುವುದೇ" ಎಂದು ಜನಗಳಿಗೆ ಹೇಳಿಕೆ ನೀಡುವುದು.

ಆಳ್ವಾರ್ ನಾಯಕಿಯ ಭಾವದಿಂದ ಪರಮಾತ್ಮನ ಮೇಲೆ ಮಡಲ್ ಹೇಳಿದರೆ ಪರಮಾತ್ಮನು ಬಂದು ತಮ್ಮನ್ನು ಕಟಾಕ್ಷಿಸುತ್ತಾನೆಂಬ ಪ್ರವೃತ್ತಿಯಿಂದ ಈ ಮಡಲ್ ರಚನೆ ಮಾಡಿದ್ದಾರೆಂದು ತೋರುತ್ತದೆ. ಸರ್ವೇಶ್ವರನ ವಿಶ್ಲೇಷೆಯನ್ನು ತಾಳಿಕೊಳ್ಳಲಾರದೆ ಕುಲಕನ್ಯೆಯು ಆಚರಿಸುವ ರೀತಿ ಮಡಲಿನಲ್ಲಿ ಬಿನ್ನವಿಸಿಕೊಂಡಿರುವರೇ ವಿನಹ ದೇವರ ಮೇಲೆ, ಕೋಪ, ರೋಷ, ಕೀಳಾದ ಅಭಿಪ್ರಾಯದಿಂದಲ್ಲ. ಆದ್ದರಿಂದ ಇದನ್ನು ತಿರಸ್ಕಾರ ರೂಪದಿಂದ ನಾವು

ಕಾಣಬೇಕಾದ ವಿಚಾರವಿಲ್ಲ. ಮೇಲಾಗಿ ಭಗವಂತನು ಹಲವು ಸಂದರ್ಭದಲ್ಲಿ ನಿಂದಾಸ್ತುತಿಯಿಂದ ಭೂಷಿಸಲ್ಪಟ್ಟಿದ್ದಾನೆ. ಭಕ್ತರ ನಿಂದನೆಯೂ ಭಗವಂತನಿಗೆ ಒಂದು ರೀತಿಯ ಆನಂದವೇ! ಭಕ್ತನು ಯಾವ ರೀತಿ ಕೋಪಗೊಳ್ಳುತ್ತಾನೆ, ಕೋಪಗೊಂಡಾಗ ಯಾವ ರೀತಿ ವರ್ತಿಸುತ್ತಾನೆ, ಎಂಬುದಾಗಿ ವಿನೋದವನ್ನು ನೋಡಿ ಆನಂದಿಸುತ್ತಾನೆ. ತದನಂತರ ಅವರ ಅಭೀಷ್ಟವನ್ನು ನೆರವೇರಿಸುತ್ತಾನೆಂಬ ವಿಚಾರವನ್ನು ಈಗಾಗಲೇ ಹಲವಾರು ಉದಾಹರಣೆಗಳಿಂದ ನಾವು ಅರಿತಿದ್ದೇವೆ. ಈ ದೃಷ್ಟಿಯಿಂದ 'ಮಡಲ್' ಎನ್ನುವ ಸಾಹಿತ್ಯ ಪ್ರಕಾರ ಭಕ್ತಿಯ ಒಂದು ಅವಸ್ಥಾ ವಿಶೇಷವನ್ನು ತೋರಿಸುತ್ತದೆ. ಇದೊಂದು ನವೀನ ರೀತಿಯ ಕಾವ್ಯ ವಿನ್ಯಾಸ. ಈ ಮಡಲ್‌ನಲ್ಲಿ ಇಡೀ ಪ್ರಬಂಧವೇ ಸರಳ ರಗಳೆಯಂತೆ ಇಂಗ್ಲಿಷ್‌ನಲ್ಲಿನ **Blank verse** ಎನ್ನುವ ಕವನ ಪ್ರಕಾರದಂತೆ ಹಲವು ಸಾಲುಗಳಲ್ಲಿ ಸಾಗುತ್ತಿದೆ. ದ್ವಿಪದಿಯ ಲಕ್ಷಣವನ್ನೂ ಬಹುಮಟ್ಟಿಗೆ ಹೋಲುತ್ತದೆ. ನಮ್ಮ ಹೆಂಗಸರು ಉದಯ ರಾಗದಲ್ಲಿ ಹೇಳುವ ಕಾವ್ಯಗಳ ಧಾಟಿಯನ್ನು ಬಹುಮಟ್ಟಿಗೆ ತನ್ನ ರಾಗ ರಚನೆಯಲ್ಲಿ ಹೋಲುತ್ತದೆ. ಉದಾಹರಣೆಗೆ ಶಿರಿಯ ತಿರುಮಡಲ್‌ನ ಸಾಲಿನಲ್ಲಿ ಬರುವ ಕಾವ್ಯ ಲಕ್ಷಣ ಇಂತಿದೆ.

ನಾನವನ್ನೈಕ್ಕಾರಾರ್ ತಿರುಮೇನಿ ಕಾಣಮುಳವುಮ್ ಪ್ಪೋಯ್
ಶೀರಾರ್ ತಿರುವೇಂಗಡಮೇ ತಿರುಕ್ಕೋವಲೂರೇ
ಮದಿಳ್ ಕಚ್ಚಿನಗರಮೇ ಪೇರನಮೇ..... ಇತ್ಯಾದಿ

ಶಿರಿಯತಿರುಮಡಲಿನ ಒಂದು ಸಾಲಾದ ಮೇಲಿನ ಪದ್ಯದ ಮಧ್ಯದ ಸಾಲಿನ ಅರ್ಥ ಇಂತಿದೆ.

ಸೌಭಾಗ್ಯ ಸಂಪನ್ನವಾದ ತಿರುವೇಂಗಡ ಮುಂತಾದ ದಿವ್ಯದೇಶಗಳಲ್ಲಿ ನೆಲೆಗೊಂಡಿರುವ ತುಳಸೀಹಾರ ಭೂಷಿತನಾದ ಪುಂಡರೀಕಾಕ್ಷನ ಸಹಸ್ರನಾಮಾದಿಗಳಿಂದ ಪ್ರಲಾಪಿಸುವ ಗ್ರಾಮಾಸ್ಥರನ್ನು ನಿಂದಿಸಿ ನಾನು ಎತ್ತರವಾದ ಸ್ಥಳದಲ್ಲಿ ನಿಂತುಕೊಂಡು ಮಡಲನ್ನು ಹೇಳಿಬಿಡುತ್ತೇನೆ.

ಪೆರಿಯ ತಿರುಮಡಲ್‌ನ ೬ನೇ ಸಾಲಿನಲ್ಲಿ ವೇಂಗಡದ ವಿಷಯವು ಬರುತ್ತದೆ.

ತೆನ್ನುಯಿರ್ ಪ್ಪೊರುಪ್ಪುಂ ತೆಯ್ವುಮಡ ಮಲೆಯುಂ.....

ದಕ್ಷಿಣ ದೇಶದಲ್ಲಿರುವ ಪಾಂಡ್ಯ ರಾಜ್ಯದಲ್ಲಿ ಪೂಜಿಸಲ್ಪಡುವ ತಿರುಮಾಲಿರುಂಶೋಲೈ ಮಲೆಯೆಂಬ ಮಹೋನ್ನತ ಪರ್ವತವೂ ಸರ್ವೇಶ್ವರನು ವಾಸ ಮಾಡುವ ಪರಮ ಭೋಗ್ಯಸ್ಥಾನವೆನಿಸುವ ಉತ್ತರದ ವೇಂಗಡವೆನ್ನುವ ಮಲೆ ಪ್ರಾಂತ್ಯವೂ ಈ ಎರಡೂ ಭೂದೇವಿಯ ಸ್ತನದ್ವಯಗಳೋ.......

ಆಳ್ವಾರ್ ಈ ಎರಡು ದಿವ್ಯ ಕ್ಷೇತ್ರಗಳೆನಿಸುವ ಭೂದೇವಿಯಿ ಸ್ತನದ್ವಯು ಗಳ ಮೇಲೆ ಸಂವಾಹ್ಯನಾಗಿ ದಿವ್ಯ ಪಾದಾರವಿಂದಗಳಿಂದ ಕೂಡಿದ ನಾಗಪರ್ಯಂತ ದಲ್ಲಿ ಯೋಗ ನಿದ್ರೆಯನ್ನು ಅನುಭವಿಸುತ್ತಿರುವನಲ್ಲ ಅವನೇ ನನ್ನ ಭರ್ತೃ. ನನ್ನನ್ನು ಉಪೇಕ್ಷಿಸಿ, ತಾನು ಮಾಡಿದ ಪ್ರತಿಜ್ಞೆಯನ್ನೂ, ನನ್ನನ್ನೂ ಮರೆತಿದ್ದಾನೆ. ವಂಚಿಸಿದ್ದಾನೆ. ಜನರೇ ತಿಳಿದುಕೊಳ್ಳಿ ಎನ್ನುವುದು ಈ ಮಡಲಿನ ಭಾವ.

೧೨೪ನೆಯ ಸಾಲಿನಲ್ಲಿ ವೇಂಗಡದ ವಿಷಯ ಮತ್ತೆ ಬರುತ್ತದೆ.

ಮಿನ್ ವಟ್ಟೈ ತವೞುಂ ವೇಂಗಡತ್ತು ಎಮ್ ಎತ್ತಹನ್ನೈ.....

ಮೇಘಗಳು ಮಿರು ಮಿರನೆ ಹೊಳೆಯುವ ಮಿಂಚಿನಿಂದ ಕೂಡಿದ ಶಿಖರಗಳ ಮೇಲೆ ಸಂಚರಿಸುವ ವೇಂಗಡದ ಮೇಲೆ ಅತ್ಯಾಶ್ಚರ್ಯಕರವಾದ ಗುಣಚೇಷ್ಟಿತನಾಗಿ ಮೆರೆಯುವ ಜಗತ್ಕಾರಣಭೂತನಾದ ಸರ್ವೇಶ್ವರನು.....

ಭೂಲೋಕದ ಭಕ್ತಕೋಟಿಯ ಉದ್ಧಾರಕ್ಕಾಗಿ ಊರ್ಧ್ವಲೋಕದಿಂದ ಇಳಿದು ಬಂದು ಅನುಕೂಲಿಸುವಂತೆ ಮಹೋನ್ನತವಾದ ಮೇಘಗಳು ತಳ ತಳಿಸುವ ಮಿಂಚಿನಿಂದ ಮೆರೆಯುವ, ಸ್ಪರ್ಶವಾಡಿಕೊಂಡ ಶಿಖರಗಳ ಮೇಲೆ ವಿರಾಜಿಸುವ ವೇಂಗಡದೊಡೆಯನು ಅತ್ಯಂತ ಗುಣಚೇಷ್ಟಿತನು. ಅವನೇ ನನ್ನ ಸ್ವಾಮಿ ಎಂದು ಆತನನ್ನು ವರ್ಣಿಸುತ್ತಾ ಆಳ್ವಾರ್ ಮಡಲು ಹೇಳುತ್ತಿದ್ದಾರೆನ್ನುವ ಭಾವ ಈ ಸಾಲಿನದು.

ಇನ್ನು ನಾವು ತಿರುಮಂಗೈ ಆಳ್ವಾರರ ಪೆರಿಯ ತಿರುಮೊಳಿಗೆ ಸಾಗೋಣ. ಇದು ೧೦೮೪ ಪಾಶುರಗಳ ಪ್ರಬಂಧ ನಮ್ಮಾಳ್ವಾರ್ ತಿರುಮೊಳಿಯ ಪಾಶುರಗಳ ಸಂಖ್ಯೆ ೧೧೦೨ ಇದರಲ್ಲಿನ ಬಿಡಿ ಪಾಶುರಗಳನ್ನು ಮೊದಲು ಅಭ್ಯಾಸ ಮಾಡೋಣ. ಇವು ಹದಿನಾಲ್ಕು ಇವೆ.

ಅಂದು ಕೋಪಿಸಿ ಎದುರಿಸಿದ ಬಾಣನ ಸಾವಿರ ತೋಳುಗಳನ್ನು ಕೆಳಗೆ ಬೀಳುವಂತೆ ಉದುರಿಸಿದ ಸುದರ್ಶನ ಚಕ್ರಧಾರಿಯೆ, ತಿರುವೇಂಗಡದ ಬೆಟ್ಟದ ಮೇಲೆ ವಾಸಿಸುವ ವೇದಗಳ ಬೆಳಕಿನಿಂದ ದರ್ಶಿಸುವ ದೀಪವೇ. ದಕ್ಷಿಣ ದಿಕ್ಕಿನಲ್ಲಿ ತಿಲಕದಂತೆ, ಮಹಾಪುರುಷರಿಂದ ನಿಬಿಡಗೊಂಡ ನಾಂಗೈ ಶೆಂಬೊನ್ ಶೆಂಕೋಯಿಲ್ ಎನ್ನುವ ದಿವ್ಯಕ್ಷೇತ್ರದಲ್ಲಿ ನಿಂತವನೇ. ಇಂತಹವನ್ನು ನಾನು ನಮಸ್ಕರಿಸಿ ಉಜ್ಜೀವಿಸುವೆನಲ್ಲವೆ (ನಾಂಗೈ ಎಂದರೆ ತಿರುನಾಂಗೂರು) (೪–೩–೮) ಬೇಡರು ವಾಸಿಸುವ ವೇಂಗಡದಲ್ಲಿ ನಿತ್ಯವಾಸವಾಡುವ ದೀಪವೇ, ದೇಶದಾದ್ಯಂತ ವ್ಯಾಪಿಸಿರುವ ವೈದಿಕರು ಇಷ್ಟ ಪಡುವ ತಿರುನಾಂಗೂರು ಅಧಿದೈವವೆ, ಕುಸುಮ ಭರಿತವಾದ ಲತಾಗುಲ್ಮಗಳ ಉದ್ಯಾನದ ತಿರುವೆಳ್ಳುಕುಳದ ಒಡೆಯನೆ, ನಿನ್ನನ್ನು

ಕೀರ್ತಿಸಲು ಬರುತ್ತೇನೆ. ನನ್ನ ಪಾಪಗಳಷ್ಟನ್ನೂ ನಾಶಪಡಿಸುವೆಯ ? (೪–೭–೫) ಮಾವಿನ ತೋಪಿನ, ಚಿಗುರನ್ನು ಕಡಿದು ತಿನ್ನುವ ಮನೋಹರವಾದ ಕೋಗಿಲೆಗಳು ತಮ್ಮ ಬಾಯಿಯ ಒಗರು ರುಚಿಯ ಪರಿಹಾರಕ್ಕೆಂದು ಸ್ವಾದದ ಹಲಸಿನ ಹಣ್ಣಿನಿಂದ ಒಸರುವ ಜೇನುತುಪ್ಪವನ್ನು ಪಾನ ಮಾಡುತ್ತಿರುವ ತಿರುವೆಳ್ಳರೈ ಕ್ಷೇತ್ರದಲ್ಲಿರುವವನೆ, ಭಾರತ ಯುದ್ಧದಲ್ಲಿ ಮೇಲಿಂದ ಮೇಲೆ ಕವಿದ ಅಶ್ವಗಳನ್ನೆಲ್ಲಾ ನಾಶ ಹೊಂದುವಂತೆ ಮಾಡಿ ಸ್ವಾಶ್ರಿತರಾದವರೆಗೆ ಶತ್ರುಗಳಾದ ರಾಜರೆಲ್ಲರ ಪ್ರಾಣಗಳನ್ನೂ ಅಪಹಾರವಾಗುವಂತೆ ಮಾಡಿ ಐವರು ಪಾಂಡವರಿಗೆ ರಾಜ್ಯವನ್ನು ಅನುಗ್ರಹಿಸಿದ, ಬಿದಿರು ಮೆಳೆಗಳಿಂದ ಕೂಡಿದ ತಿರುವೇಂಗಡ ದಲ್ಲಿ ನಿಂತ ಸ್ವಾಮಿಯೇ ನಿನ್ನಲ್ಲಿ ಪ್ರೀತಿಯನ್ನು ದಾಸನಾದ ನನಗೆ ಅನುಗ್ರಹಿಸು (೫–೩–೪) ನನ್ನ ಕುಮಾರಿ ಭಯಪಡದೆ ಪ್ರಲಾಪಿಸುತ್ತಾ 'ವೇಂಗಡವೇ ವೇಂಗಡವೇ, ಎಂದು ಬಡಬಡಿಸುತ್ತಿದ್ದಾಳೆ. ನನ್ನ ಹತ್ತಿರ ನಿಲುವುದಿಲ್ಲ, ಈಟಿಯಿಂದ ಇರಿಯುವಂತಿದೆ ಅವಳ ದೃಷ್ಟಿ. ನಿದ್ರೆ ಮರೆತಳು. ದುಂಬಿಯಂತೆಯೂ, ಕಾರ್ಮುಗಿಲಿನಂತೆಯೂ ಇರುವ ಮೇಘ ಶ್ಯಾಮ ಕೋಮಲಾಂಗನೂ, ನಿತ್ಯಸೂರಿ ಗಳಿಗೆ ಪ್ರಾಣಸಮಾನನೂ, ದೊಡ್ಡ ಅಲೆಗಳಿಂದ ಉಗ್ಗಡಿಸುವ ಕ್ಷೀರಸಾಗರದಲ್ಲಿ ಆವಿರ್ಭವಿಸಿದ ಮಹಾಲಕ್ಷ್ಮಿಯನ್ನು ಸ್ವೀಕರಿಸಿ ತನ್ನ ಭಾರ್ಯೆಯನ್ನಾಗಿ ಮಾಡಿಕೊಂಡ ಆ ಸರ್ವೇಶ್ವರನು ನನ್ನ ಮಗಳಿಗೆ ಹೀಗೆ ವೇದನೆ ಉಂಟು ಮಾಡಿರುವಾಗ ಅವನನ್ನು ಹೇಗೆ ಸ್ಮರಿಸಲಿ ನೀನೇ ಹೇಳು. ಇದು ಶಕ್ಯವೇ (೫–೫–೧) ನನ್ನ ಚಿಂತೆಗೆ ಕಾರಣನಾದವನನ್ನೂ, ಉಪಾಯ ಮಾರ್ಗನಾದವನನ್ನೂ, ಶ್ರೀಯಃಪತಿಯನ್ನೂ, ರಮ್ಯವಾದ ವೇಂಗಡದ ಸ್ವಾಮಿಯನ್ನೂ ಅವೆಲ್ಲವನ್ನೂ ತ್ಯಜಿಸಿ ನನ್ನ ಮನಸ್ಸಿನಲ್ಲಿ ತೊರೆಯದಂತೆ ನೆಲಸಿರುವವನನ್ನೂ, ಸುಂದರ ತಮ ದುಂಬಿಗಳು ಝೇಂಕರಿಸುವ ಹೂ ಗೊಂಚಲುಗಳಿಂದ ರಮ್ಯವಾದ ದಿವ್ಯೋದ್ಯಾನದ ತಿರುಕ್ಕೋವಲೂರ್‌ನಲ್ಲಿ, ತ್ರಿವಿಕ್ರಮ ರೂಪ ಧರಿಸಿ ಎಲ್ಲರಿಗೂ ದರ್ಶನ ನೀಡುವ ಪರಮಾತ್ಮನನ್ನು ಸೇವಿಸಿದೆನು, ಕಾವೇರಿಯಿಂದ ಪವಿತ್ರವೆನಿಸುವ ಶ್ರೀರಂಗ ದಲ್ಲಿಯೇ (೫–೬–೭) ಜಿಂಕೆಯ ಚರ್ಮದಿಂದ ಆಮೃತವಾದ ಎದೆಯ ಪುಟ್ಟ ಬಾಲಕನಾಗಿ ಅಂದು ಮಹಾಬಲಿಯಿಂದ ಭೂಮಿಯನ್ನು ಯಾಚಿಸಿ, ಪಾದಗಳಿಂದ ಅಳೆದ ದೇವನನ್ನೂ, ಜೇನು ಹರಿಯುವ ಸೋನೆಯುಳ್ಳ ತಿರುವೇಂಗಡದಲ್ಲಿನ ಸ್ವಾಮಿಯನ್ನು ನಾನು ಹುಡುಕಿಕೊಂಡು ಹೋಗಿ ತಿರುನರೈಯೂರಿನಲ್ಲಿ ಕಂಡೆ ನಲ್ಲವೇ? ವರ್ಣಿಸಲೂ ಅಶಕ್ಯವಾದ ನರಕದಲ್ಲಿ ತೊಳಲುತ್ತಿದ್ದವನನ್ನು ಅಲ್ಲಿಗೇ ಬಂದು ಕೈಹಿಡಿದು ಮೇಲೆತ್ತಿ ಸಂರಕ್ಷಿಸಿದ ತಾವರೆಯಂತಹ ಕೋಮಲ ಪಾದಗಳನ್ನುಳ್ಳ ನನ್ನ ಸ್ವಾಮಿಯನ್ನು, ದೇವತೆಗಳಿಗೆ ಅಲಂಕಾರಪ್ರಾಯನಾಗಿ ನಿಂತಿರುವವನನ್ನು, ವೇಂಗಡದ ಮೇಲೆ ಸಿಂಹಸದೃಶನಾಗಿ ಮೆರೆಯುವ ಹರಿಯನ್ನು, ಕುದುರೆಯ ರೂಪ

ಧಾರಣ ಮಾಡಿಕೊಂಡುಬಂದ ರಾಕ್ಷಸನ ಬಾಯಿಯನ್ನು ಸೀಳಿ ಸಂಹರಿಸಿದವನನ್ನು ಬೆಣ್ಣೆಯನ್ನು ತಿಂದು ಒರಳಿಗೆ ಕಟ್ಟಲ್ಪಟ್ಟವನನ್ನು, ಸಿಹಿ ಕಬ್ಬಿನಂತಹ ಮಧುರನಾದವ ನನ್ನು, ಜೇನಿನಂತಹವನನ್ನು, ಮಧುರ ಹಾಲಿನಂತಹವನನ್ನು ಬಿಟ್ಟು ಬೇರೆಯವನನ್ನು ನನ್ನ ಮನಸ್ಸು ಎಂದಿಗಾದರೂ ಚಿಂತಿಸುತ್ತದೆಯೇ ? (೭–೩–೫) ನಮಗೆ ಅನುಗ್ರಹಮಾಡುವ ಪರಮಾತ್ಮನನ್ನು, ಸುಗಂಧಭರಿತ ಕುಂತಳ ರಂಜಿತಳಾದ ಗಿರಿಕುಮಾರಿಯನ್ನು ತನ್ನ ಅರ್ಧಾಂಗಿಯನ್ನಾಗಿ ಮಾಡಿಕೊಂಡ ಈಶ್ವರನನ್ನು ತನ್ನ ಪಕ್ಕದಲ್ಲಿ ಕೂರಿಸಿಕೊಂಡು ಸಂತೋಷಿಸುವವನನ್ನು ಸೌಶೀಲ್ಯ ಗುಣಯುಕ್ತನಾದವನನ್ನು, ಶೀತ ಕಿರಣನು ಸಂಚರಿಸುವ ಆಕಾಶ ಸ್ವರೂಪವನ್ನು, ಸೂರ್ಯ ಮಂಡಲದಲ್ಲಿ ಅಂತರ್ಗತನಾದವನನ್ನು, ಬಡಗು ದಿಕ್ಕಿನ ಪರ್ವತ (ವೇಂಗಡದಲ್ಲಿ)ದಲ್ಲಿ ಅಲಂಕಾರಪ್ರಾಯನಾದವನನ್ನು, ನಂಬಿ ನಾವು ಆಶ್ರಯಿಸುವ ನನ್ನು, ರಾತ್ರಿ, ಬೆಳಕುಗಳ ಚಾಲಕನನ್ನು, ಆ ಸರ್ವೇಶ್ವರನನ್ನು ಹುಡುಕಿ ಹುಡುಕಿ ಕಡೆಗೂ ತಿರುಕಣಮಂಗೈ ಕ್ಷೇತ್ರದಲ್ಲಿ ದರ್ಶಿಸಿ ಕೃತಾರ್ಥನಾದೆನು. (೭–೧೦–೩) ಪರಕಾಲನಾಯಕಿಯು ವರ್ಷ ಪೂರ್ತಿಯೂ ನೀರು ಪ್ರವಹಿಸುವ ತೊರೆಗಳನ್ನುಳ್ಳ ವೇಂಗಡವನ್ನು,ತಿರುನೀರ್ಮಲೆಯನ್ನು ಕುರಿತು ಬಡಬಡಿಸುತ್ತಾಳೆ. 'ತಿರುಮೆಯ್ಯಂ' ಎನ್ನುವ ದಿವ್ಯಕ್ಷೇತ್ರವನ್ನು ಕುರಿತು ಪ್ರಶ್ನಿಸುತ್ತಾಳೆ. ಆದರೆ ಸಮಾಧಾನಕರವಾದ ಉತ್ತರ ಹೇಳುವವರು ಸಿಕ್ಕಲಿಲ್ಲವಾಗಿ ನಿರಾಶೆಯಿಂದ ಸುಮ್ಮನಾಗಿದ್ದಾಳೆ. ಸಂಪತ್ಸಮೃದ್ಧವಾದ ಕಣಪುರಂ ಎಂದೂ ಹೇಳುತ್ತಿದ್ದಳು. ಸೊರಗಿದಳು. ಶಿಥಿಲ ಮನಸ್ಕಳಾದಳು. ಇದೇಕೆ ಇಂತಹ ದುರವಸ್ಥೆ ಪ್ರಾಪ್ತವಾಗಿದೆ. ರಕ್ಷಿಸುವವರೇ ಇಲ್ಲವಲ್ಲಾ. ಏನು ಮಾಡಲಿ (೮–೨–೨) ಓ ಮನಸ್ಸೆ ! ಜೇನಿನಂತೆ ಮಧುರ ಭಾಷಿತರೂ ಆದ ರಮಣೀ ಮಣೀಯರ ಒತ್ತಾದ ಸ್ತನ ಮಂಡಲಗಳ ಗಾಢಾಲಿಂಗನ ಕೊಂಡಿರುವವರೆನ್ನುವ ನಮಗೆ ಅಂತಹ ವ್ಯಸನಗಳನ್ನು ಹತ್ತಿಕ್ಕಿ "ನೀವು ಬಾಳಬೇಕು, ಉಜ್ಜೀವಿಸಬೇಕು. ಅದರ ವಿಧಿಗಳನ್ನು ಹೇಳುತ್ತೇನೆ. ನಿತ್ಯಸೂರಿ ಗಳಿಗೆ ಪರಮ ಪದವನ್ನು ನೀಡುವವನು ನಾನು ವೇಂಗಡದಲ್ಲಿ ನಿಂತಿರುವೆನು ಆಶ್ರಯಿಸಿರಿ" ಎನ್ನುವಂತಹ ಸುಂದರ ಸಮುದ್ರ ಸದೃಶ ಗಾತ್ರದವನು. ಅವನ ನೆಲೆ ತಿರುವಲ್ಲವಾಳ್ ಅನ್ನು ಬಾಯಾರೆ ಕೀರ್ತಿಸಿದರೆ ಸಮರ್ಥರಾಗಿ ಉಜ್ಜೀವಿಸ ಬಹುದು ಅಲ್ಲವೇ ? (೯–೭–೪) ಬಲಮುರಿ ಶಂಖವನ್ನು ಚಕ್ರವನ್ನೂ ಧರಿಸುವವನು, ಪರ್ವತದಂತೆ ಮನೋಹರವಾದ ತೋಳುಗಳನ್ನುಳ್ಳವನು. ಮನೋಜ್ಞವಾದ ಯಜ್ಞೋಪವೀತದಿಂದ ರಾರಾಜಿಸುವವನು, ರಮ್ಯ ಉದ್ಯಾನ ಗಳಿಂದ ರಂಜಿತನೂ ಆದ ವೇಂಗಡ ಸ್ವಾಮಿಯು ವೇದ ವೇದ್ಯನಾಗಿದ್ದಾನೆ. ನೂಪುರ ಗಂಗೆಯಿಂದ ಶೋಭಿಸುವ ಮಾಲಿರುಂಶೋಲೈಮಲೆ. ಅಲ್ಲಿ ನಿಂತ ದಿವ್ಯ ಗುಣ ಪರಿಪೂರ್ಣನಾದ ನಾರಾಯಣನನ್ನು ನನ್ನ ಸುಂದರವಾದ ನೊಸಲುಳ್ಳ

ಕುಮಾರಿಯು ಹೊಂದಬಲ್ಲಳೆ ? ಆ ಪುಣ್ಯವು ಅವಳಿಗುಂಟೆ ? (೯-೯-೯) ಹೊನ್ನಿಡಿದ ನೀಲಮಣಿಯನ್ನು ಧರಿಸಿದ ಅಪೂರ್ವಕಾಂತಿಯಿಂದ ಭರಿತನಾದವನನ್ನು ವೇಂಗಡದ ಗಿರಿಯಗ್ರದಲ್ಲಿ ದರ್ಶನಮಾಡಿ ನನ್ನನ್ನು ಚಿರಮಾವಧಿ ದಾಸನನ್ನಾಗಿ ಮಾಡಿಕೊಂಡವನನ್ನು ನಾನು ತಂಪಾದ ತಿರುತ್ತಣ್‌ಕಾವಲ್ ಎನ್ನುವ ದಿವ್ಯ ಕ್ಷೇತ್ರ ದಲ್ಲಿಯೂ ಕಾಣಬಲ್ಲೆನಲ್ಲವೆ ? (೧೦-೧-೨) ಮುದ್ದಾದ ಹಸಿರುಗಿಳಿಯೇ ! ಪ್ರಜ್ವಲಿಸುವ ಸುದರ್ಶನ ಚಕ್ರವನ್ನು ಬಲಗೈಯಲ್ಲಿ ಧರಿಸಿರುವವನೂ, ಬಲದರ್ಪಿತ ಭುಜಗಳನ್ನುಳ್ಳವನೂ ಆದ ಬಡಗು ವೇಂಗಡದಲ್ಲಿರುವವನೂ ಬರಬೇಕೆಂಬುದಾಗಿ ನಾನು ಕಾಯುತ್ತಿದ್ದೇನೆ. ಬಹಳ ಕಾಲವಾದರೂ ಆತನು ಬಂದಿಲ್ಲ. ಅವನನ್ನು ದಯವಿಟ್ಟು ಬರಹೇಳಿ ನನಗೆ ಸಂತೋಷವನ್ನುಂಟು ಮಾಡುವೆಯಾ ? (೧೦-೧೦-೫) ಕೃಷ್ಣನು ನನ್ನ ಮನಸ್ಸಿನಲ್ಲಿ ನೆಲಸಿರುವುದರಿಂದ ನನ್ನ ಕೈ ಬಳೆಗಳು ಎಂದೋ ಕಳಚಿಬಿದ್ದವು. ಇದೇನು ಮಾಯವೋ ? ಆಶ್ಚರ್ಯವೋ ? ಆಂದವಾದ ಸ್ತ್ರೀತ್ವದಿಂದ ಕೂಡಿದ್ದೇವೆ ? ಸ್ತ್ರೀ ಜನ್ಮದಲ್ಲಿ ಹುಟ್ಟಿದ್ದೇವೆ ? ಇದು ಹಾಗಿರಲಿ ಆ ಸರ್ವೇಶ್ವರನು ಅತಿ ಒಲವಿನಿಂದ ವಾಸಸ್ಥಾನವನ್ನಾಗಿ ಏರ್ಪಡಿಸಿಕೊಂಡ ಉತ್ಕೃಷ್ಟವಾದ ಮಲೆ ತಿರುವೇಂಗಡವನ್ನೂ. ದಿವ್ಯಕ್ಷೇತ್ರವಾದ ಶ್ರೀರಂಗವನ್ನೂ ನಾವು ಹಾಡಕೂಡದೆಂದು ವಿಧಿಸಿರುವಿರಲ್ಲ. ಈ ಪ್ರತಿಬಂಧಕವೇತಕ್ಕೆ ಉಂಟುಮಾಡುವಿರಿ. ಅಷ್ಟೂ ಸ್ವಾತಂತ್ರ್ಯವಿಲ್ಲವೇ ? ಅಯ್ಯೋ ! (೧೧-೩-೭) ಎಲೈ ಸಖಿಯೇ ! ಕಪಟ ವೇಷದಿಂದ ಮಹಾಬಲಿಯನ್ನು ಮರುಳು ಮಾಡಿ ಮೂರಡಿ ಭೂಮಿಯನ್ನು ದಾನವಾಗಿ ಪಡೆದು ಆಳಿದನು. ಅವನೇ ಪ್ರಮಾಪದ ಕ್ಷೀರಾಬ್ಧಿಯಲ್ಲಿ ನೆಲಸಿರುವುದು. ವೇಂಗಡದಲ್ಲಿಯೂ ನಿಂತಿರು ವುದು ಎಂದು ಎಲ್ಲರೂ ಹೇಳುವರಲ್ಲ. ನಿನಗೆ ಇದು ಗೊತ್ತಿಲ್ಲವೆ ? ಈತನೇ ತಿರುಮಂಗೈ ಆಳ್ವಾರ್ ಅವರ ಹೃದಯದಲ್ಲೂ ನಿತ್ಯವಾಸ ಮಾಡುತ್ತಲೇ ಇದ್ದಾನಲ್ಲಿ ಈ ವಿಚಾರ ನಿನಗೆ ತಿಳಿದೇ ಇಲ್ಲವೇನು ? ತಿಳಿದುಕೊಳ್ಳಲೂ ಇಲ್ಲವೇ ನೀನು ? (೧೧-೫-೧೦)

ಈಗ ತಿರುಮಂಗೈ ಆಳ್ವಾರ್ ಸತತವಾಗಿ ನಾಲ್ಕು ದಶಕಗಳಲ್ಲಿ ಹಾಡಿರುವ ಪಾಶುರಗಳಲ್ಲಿ ತಿರುವೇಂಗಡದ ವೈಭವವನ್ನು ದರ್ಶಿಸೋಣ. ಪೆರಿಯ ತಿರುಮೊಳಿಯ ಪ್ರಥಮಶತಕದ ೮, ೯, ೧೦ ಮತ್ತು ೨ನೆಯ ದಶಕದ ಒಂದನೆಯ ದಶಕವೂ ಈ ಪಾಶುರಗಳನ್ನು ಒಳಗೊಂಡಿವೆ.

ಪರಿಮಳವನ್ನು ಬೀರುತ್ತಿದ್ದ ಹೂಗಳಿಂದ ನಿಬಿಡವಾಗಿದ್ದ ಕುರಂದ ಮರ ಗಳನ್ನು ಮುರಿದ ಗೋಪಾಲಬಾಲನು, ನಮ್ಮ ಸ್ವಾಮಿಯಾಗಿ, ಶಂಖಗಳು ತಂಗಿರುವ ವಿಶಾಲ ಸಾಗರದಲ್ಲಿ ಶಯನಿಸಿದವನೂ, ಪುಂಡರೀಕಾಕ್ಷನೂ, ಗರ್ವದಿಂದ ಮೇಲೆರಗಿ ಬಂದ ಬಕಾಸುರನನ್ನು ಸಾಯಿಸಿದ ಪುರಾಣ ಪುರುಷನೂ ಆಗಿ ದಯಮಾಡಿಸಿರುವ

ಕ್ಷೇತ್ರಗಳೆಂದರೆ ಹೊಮ್ಮುವ ನೀರಿನ ಪ್ರವಾಹದಿಂದಲೂ, ಕೆಂಪಾದ ಮೀನುಗಳು ಸಂತೋಷದಿಂದ ವಿಹರಿಸುತ್ತಿರುವ ತೊರೆಗಳಿಂದ ಸಮೃದ್ಧವೆನಿಸಿದ ತಿರುವೇಂಗಡವು ತಾನೇ. ಎಲೈ ಮನಸ್ಸೇ ! ಅದನ್ನು ನೀನು ಸೇರಿಕೋ ! ಕಲ್ಲು ಮನಸ್ಸನ್ನು ಹೊಂದಿದ್ದ ಪೂತನೀ ರಾಕ್ಷಸಿಯು ಕಂಗೆಟ್ಟು ರೋಧಿಸುವಂತೆ ಮಾಡಿದ್ದು ಮಾತ್ರವಲ್ಲದೆ ಅವಳ ಸ್ತನ್ಯಪಾನದ ಮೂಲಕ ಅವಳ ಪ್ರಾಣವನ್ನೂ ಹೀರಿದ ಶಿಶುರೂಪಿ ಕೃಷ್ಣನು ಶಯನ ಮಾಡಿರುವುದು ಕ್ಷೀರಾಬ್ಧಿ ಮತ್ತು ಶ್ರೀರಂಗ ಇವೇ ಅಲ್ಲವೆ ? ಅವನು ವರ್ಧಿಸುವ ಜಾಗಗಳು ಕೃತಯುಗದಲ್ಲಿ ಶ್ವೇತವರ್ಣನೂ, ಕಲಿಯುಗದಲ್ಲಿ ಕೃಷ್ಣವರ್ಣನೂ, ದ್ವಾಪರದಲ್ಲಿ ನೀಲವರ್ಣನೂ ಎಂದು ಧ್ಯಾನಿಸಲ್ಪಡುವ ಮತ್ತು ನಮಿಸಲ್ಪಡುವ ತಿರುವೇಂಗಡ. ಮನಸ್ಸೇ ! ಅವನನ್ನು ಹೋಗಿ ಆಶ್ರಯಿಸು (ಕರ್ಪೂರ ಲೇಪನ ವಾದಾಗ ಬಿಳಿಯಾಗಿಯೂ, ಅಭಿಷೇಕ ಕಾಲದಲ್ಲಿ ಕಾಳಮೇಘದಂತೆಯೂ, ಪುನುಗು ತೈಲಲೇಪನಗೊಂಡಾಗ ನೀಲವರ್ಣದಿಂದಲೂ ದರ್ಶನನೀಡುವುದಾಗಿ ಕೆಲವರ ಅಭಿಪ್ರಾಯ) ಜೊತೆಜೊತೆಯಾಗಿ ನಿಂತಿದ್ದ ಯಮಳವೃಕ್ಷಗಳೆರಡನ್ನೂ ಮುರಿದು ಬೀಳುವಂತೆ ಅವುಗಳೆರಡರ ನಡುವೆ ನುಸಳಿ ನಡೆದ ನಿರ್ಮಲನೂ, ಸುದರ್ಶನ ಚಕ್ರವನ್ನು ಕೈಯ್ಯಲ್ಲಿ ಧರಿಸಿದವನೂ, ನಿತ್ಯಸೂರಿಗಳಿಂದ ನಮಿಸಲ್ಪಡುವ ದಿವ್ಯಪಾದ ವುಳ್ಳವನೂ, ಕೋಪದಿಂದ ದೇವೇಂದ್ರನು ಮಳೆಗರೆದಾಗ ಪಶು ಸಮೂಹಕ್ಕೆ ಒದಗಿದ ಆಪತ್ತನ್ನು ನೀಗಲು ಗೋವರ್ಧನವನ್ನು ಕೊಡೆಯನ್ನಾಗಿ ಎತ್ತಿ ಸಕಲ ಚರಾಚರಗಳನ್ನೂ ರಕ್ಷಿಸಿದ ನನ್ನ ಸ್ವಾಮಿಯು ಇರುವ ವೇಂಗಡವನ್ನು ಆಶ್ರಯಿಸು ಮನಸ್ಸೇ ! ಅರ್ಜುನನಿಗಾಗಿ ನಿರಾಯುಧನಾಗಿಯೇ ಭಾರತದ ಯುದ್ಧದಲ್ಲಿ ಜಯಗಳಿಸಿದ ಪರಂಜ್ಯೋತಿ ಸ್ವರೂಪನೂ, ಗೋಕುಲದಲ್ಲಿ ರಾಸ ಕ್ರೀಡೆಯನ್ನು ಆಡಿದವನೂ, ಸ್ತುತಿಸುವರ ಮನಸ್ಸಿನಲ್ಲಿ ಮನೆ ಮಾಡಿದವನೂ, ಇಡವೆಂದೈ ಎನ್ನುವ ಕ್ಷೇತ್ರದ ಅಧಿದೈವವೂ ಆದ ನನ್ನ ಸ್ವಾಮಿಯು ಪುಣ್ಯ ತೀರ್ಥಗಳು, ತೋಪುಗಳು ಇವುಗಳಿಂದ ತುಂಬಿದ ವೇಂಗಡದಲ್ಲಿಯೂ ಇದ್ದಾನೆ. ಅವನನ್ನು ಆಶ್ರಯಿಸು ! ದಾನ ಮಾಡುವ ಕೈಯ್ಯುಳ್ಳ ಬಲಿಯ ಯಾಗದ ಸಂದರ್ಭದಲ್ಲಿ ಬ್ರಹ್ಮಚಾರಿಯ ವೇಷಧಾರಣ ಮಾಡಿಕೊಂಡು ತನ್ನ ಸಿರಿಹಸ್ತದಿಂದ ದಾನವನ್ನು ಸ್ವೀಕರಿಸಿದವನೂ, ಸಪ್ತಸಾಲವೃಕ್ಷಗಳನ್ನು ಒಂದೇ ಬಾಣದಿಂದ ಭೇದಿಸಿದವನೂ, ಅಷ್ಟಭುಜಮೂರ್ತಿಯೂ, ತಿರುಮಾಲಿರುಂಶೋಲೈಯನ್ನು ಬೀಡಾಗಿ ಮಾಡಿಕೊಂಡವನೂ, ದೃಢವಾದ ಸೊಂಡಲಿನ ಗಜೇಂದ್ರನ ದುಃಖ ಪರಿಹಾರ ಮಾಡಿದವನೂ ಆದ ನನ್ನ ಸ್ವಾಮಿಯು ನೆಲಸಿರುವ ತಿರುವೇಂಗಡವನ್ನು ಆಶ್ರಯಿಸು, ಎಲೆ ಮನಸ್ಸೇ. ಅಷ್ಟ ದಿಕ್ಕುಗಳು, ಸಪ್ತ ಲೋಕಗಳು ಪ್ರಳಯಕ್ಕೆ ಆಹುತಿಯಾಗದಂತೆ ತನ್ನ ಸುಂದರ ಜಠರದಲ್ಲಿ ಅಡಗಿಸಿಕೊಂಡು ಆಲದ ಎಲೆಯ ಮೇಲೆ ಶಯನಿಸಿದವನೂ, ಬೆಳಗಿರುವ ಚಂದ್ರನನ್ನು ಕ್ಷಯದಿಂದ ಪಾರು ಮಾಡಿದವನೂ, ಪ್ರಕಾಶಿಸುವ ಕೋರೆದಂಷ್ಟ್ರಗಳಿಂದ ಕೂಡಿದ ಬಲಿಷ್ಠ ನರಸಿಂಹನಾಗಿ

ಆವಿರ್ಭವಿಸಿ ಮಹಾಬಲಶಾಲಿ ಹಿರಣ್ಯಕಶಿಪುವನ್ನು ತನ್ನ ನಖದಿಂದ ಎದೆ ಬಗೆದು ನಾಶಪಡಿಸಿದ ನನ್ನ ಸ್ವಾಮಿಯು ವಾಸಿಸುವ ವೇಂಗಡವನ್ನು ಹೋಗಿ ಸೇರು ಮನಸ್ಸೇ ! ಪಂಚಭೂತ ಸ್ವರೂಪನೂ, ಸಹಸ್ರನಾಮೋಜ್ವಲನೂ, ಕರ್ಮಮೂಲ ವಾದ ಜನ್ಮಲೇಪದಿಂದ ಮುಕ್ತನಾದವನೂ ವರ್ಧಿಸುವ ಜಾಗವಾದ ವೇಂಗಡವು ನೀಳ ಆಗಸದಿಂದಲೂ, ಮಳೆನೀರು, ಹನಿಮಂಜು ಇವುಗಳನ್ನು ಧರಿಸಿರುವ ಕಾರ್ಮುಗಿಲುಗಳು ತಂಗಿ ನಿಂತು ಶಿಖರಗಳಿಗೆ ತಮ್ಮ ಹೊದಿಕೆಯಿಂದ ಆಚ್ಛಾದಿಸ ಲ್ಪಡುತ್ತದೆ. ಇಂತಹ ತೋಪುಗಳ ಜಾಗವನ್ನು ಆಶ್ರಯಿಸು ಮನಸ್ಸೇ ! ಪಂಚ ಭೂತಗಳ ನಿರ್ವಾಹಕನೂ, ನಿತ್ಯಸೂರಿಸಂಸೇವಿತನೂ, ಪರಿಮಳಯುತವಾದ ತಾವರೆ ಯಲ್ಲಿ ನೆಲಸಿರುವ ಲಕ್ಷ್ಮಿಯ ನಾಯಕನೂ ಆದ ನನ್ನ ಸ್ವಾಮಿಯು, ಎತ್ತರವಾದ ಅಟ್ಟಣೆಗಳ ಮೇಲೆ ನಿಂತು ಬಳ್ಳಿಗಳಂತೆ ಬಳುಕುವ ಸೂಕ್ಷ್ಮ ಸೊಂಟಗಳ ಸುಂದರ ಕುರವಸ್ತ್ರೀಯರು ಹೊಲದಲ್ಲಿನ ಮಾಗಿದ ತೆನೆಗಳನ್ನು ಕಾಯುತ್ತಿರುವ ಪ್ರದೇಶ ವಾದ ವೇಂಗಡವನ್ನು ಸೇರಿ ಆಶ್ರಯಿಸು ಮನಸ್ಸೇ ! ಸಕಲರಿಂದ ಅನುಸಂಧಾನಿ ಸಲ್ಪಡುವ ಅಷ್ಟಾಕ್ಷರೀ ಮಂತ್ರದಿಂದ ಅಂತಹ ಜನರು ಉಜ್ಜೀವಿಸುವಂತೆಯೂ, ಅಂತಹವರ ಸಂಸಾರ ಬಂಧಗಳು ಕಳಚಿಕೊಳ್ಳುವಂತೆಯೂ ಅನುಗ್ರಹಿಸುವ ಸ್ವಾಮಿಯು ನೆಲೆಸಿರುವ ಸ್ಥಳವು, ಪರಿಮಳಯುತವಾದ ಕುಸುಮಗಳಿಂದ ಆವೃತವೂ ವಿಶಾಲ ತೋಟಗಳಿಂದ ರಮ್ಯವೂ ಆದ ಲೋಕಕ್ಕೇ ತಿಲಕಪ್ರಾಯವಾದ ತಿರುವೇಂಗಡವು. ಅದನ್ನು ಹೋಗಿ ಆಶ್ರಯಿಸು ಮನಸ್ಸೇ ! ಚಿಕ್ಕವೂ, ಸುಂದರವೂ ಆದ ಕೆಂಪು ಮೀನುಗಳು ಸಂತೋಷದಿಂದ ಚಿಮ್ಮಿ ನೆಗೆದಾಡುವ ಜಲಾಶಯಗಳನ್ನು ಉಳ್ಳ ವೇಂಗಡದಲ್ಲಿ ನಿತ್ಯವಾಸ ಮಾಡುವ ತಿರುವೇಂಗಡದೊಡೆಯುನನ್ನು ಕುರಿತು ತಿರುಮಂಗೈ ನಾಡಿಗೆ ಸೇರಿದ 'ಕಲಿಯನ್' ಎಂದು ಹೆಸರನ್ನು ಹೊಂದಿದ ತಿರುಮಂಗೈ ಆಳ್ವಾರ್ ರಚಿಸಿದ ಶ್ರೇಷ್ಠ ನುಡಿಮಾಲೆಗಳನ್ನು "ಇವು ಫಲ ನೀಡುವುವೋ, ಇಲ್ಲವೋ", ಎನ್ನುವ ಸಂದೇಹಕ್ಕೆ ಎಡೆಗೊಡದೆ ವಿಶ್ವಾಸದಿಂದ ಅನುಸಂಧಾನ ಮಾಡುವವರು ಹಡಗುಗಳಿಂದ ತುಂಬಿದ ವಿಶಾಲವಾದ ಸಾಗರದಿಂದ ಆವೃತವಾದ ಭೂಮಂಡಲದಲ್ಲಿರುವವರಿಗೆಲ್ಲಾ ಆಶ್ರಯ ಸ್ಥಾನರಾಗಿ, ರಕ್ಷಕರಾಗಿ, ಲೀಲಾ ವಿಭೂತಿಯನ್ನು ನಿರ್ವಹಿಸುವವರಾಗಿ, ತದನಂತರ ಪರಮಪದವನ್ನೂ ಆಳತಕ್ಕಂತಹವ ರಾಗಿ ಬಾಳುತ್ತಾರೆ.

ಆಳ್ವಾರ್ ಇಲ್ಲಿ ಪರಮಾತ್ಮನ ಶರಣಾಗತ ರಕ್ಷಣಾ ಸ್ವರೂಪವನ್ನೂ, ಅವನನ್ನು ಆಶ್ರಯಿಸಿ ಉಜ್ಜೀವಿಸುವ ಚರಮೋಪಾಯವನ್ನೂ ವಿವರಿಸಿದ್ದಾರೆ. ಇಲ್ಲಿ ಹೋಗಿ ತಿರುವೇಂಗಡನಾಥನನ್ನು ಆಶ್ರಯಿಸು ಎಂದ ಆಳ್ವಾರ್ ಮುಂದಿನ ಹತ್ತು ಪಾಶುರ ದಲ್ಲಿ ಅವನನ್ನು ದರ್ಶಿಸಿ ಶರಣಾಗತನಾಗಿ ಬಂದಿರುವ ತನ್ನನ್ನು ರಕ್ಷಿಸಬೇಕೆಂಬುದಾಗಿ ಬಿನ್ನಹ ಮಾಡುತ್ತಾರೆ.

ಬಿದಿರು ಮೆಳೆಗಳು ಸಾಂದ್ರವಾಗಿರುವ, ಹೂಗಿಡಗಳ ತೋಟಗಳಿಂದ ಸುತ್ತುವರಿದ, ಸುವಾಸನಾಭರಿತವಾದ ತಿರುವೇಂಗಡದಲ್ಲಿನ ಸ್ವಾಮಿಯೇ ! ತಾಯಿ, ತಂದೆ, ಹೆಂಡತಿ, ಮಕ್ಕಳು, ಬಂಧು ಎನ್ನುವ ಶರೀರ ಸಂಬಂಧಗಳನ್ನೆಲ್ಲಾ ಅನವರತ ನೆನೆಸುತ್ತಾ ಅನರ್ಥಕ್ಕೆ ಒಳಗಾದವನೂ, ನಾಯಿಯಂತೆ ನೀಚನೂ ಆದ ನಾನು ಅವರನ್ನೆಲ್ಲಾ ತ್ಯಜಿಸಿ ಪ್ರಾಪ್ಯಬಂಧುವಾದ ನಿನ್ನನ್ನು ಕಾಣಲು ಆಸೆಯಿಂದ ಬಂದಿದ್ದೇನೆ. ಇಂತಹ ಶರಣಾಗತನನ್ನು ದಾಸನನ್ನಾಗಿ ಮಾಡಿಕೊಂಡು ಅನುಗ್ರಹಿಸು ! ಬಂಡುಗಳು ತುಂಬಿರುವ ಹೂದೋಟಗಳ ತಿರುವೇಂಗಡವೆನ್ನುವ ಶ್ರೇಷ್ಠ ಪರ್ವತದಲ್ಲಿ ದಯಮಾಡಿಸಿರುವ ಆನೆಯಂತಹ ಬಲಶಾಲಿಯಾದ ಸ್ವಾಮಿಯೇ ! ಜಿಂಕೆಯಂತೆ ಕಣ್ನೋಟಗಳನ್ನುಳ್ಳ ತರುಣಿಯರಿಂದ ಆಕರ್ಷಿತನಾಗಿ ಅನೇಕಾನೇಕ ನರಕಗಳಲ್ಲಿ ತೊಳಲುವಂತಹ ಪಾಪಗಳನ್ನು ನಾನು ಮಾಡಿದ್ದೇನೆ. ಈಗ ಅದಕ್ಕಾಗಿ ಪಶ್ಚಾತ್ತಾಪ ಪಡುತ್ತಾ ನಿನ್ನ ಪಾದಗಳನ್ನೇ ಗತಿಯೆಂಬುದಾಗಿ ಶರಣಾಗತಿ ಮಾಡಿಬಂದಿರುತ್ತೇನೆ, ನನ್ನಿಂದ ಸೇವೆಗೊಂಡು ಅನುಗ್ರಹಿಸು ! ಬೆಟ್ಟಗಳಂತೆ ಇರುವ ಕಾರ್ಮೇಘ ಸಮೂಹಗಳು ಕವಿದು ತಂಪಾದ ವೇಂಗಡದ ಮೇಲೆ ನಿಂತ ಸ್ವಾಮಿಯೇ; ವಿವೇಕವೆನ್ನುವುದು ಈಷತ್ತೂ ಇಲ್ಲದ ಕಾರಣದಿಂದ ಅನೇಕ ಬಗೆಯ ಪ್ರಾಣಿಗಳನ್ನು ಕೊಂದೆ. ಯಾಚಿಸಿದವರಿಗೆ ಮಧುರವಾದ ನುಡಿಯನ್ನಾದರೂ ಆಡಲಿಲ್ಲ. ಈಗ ನಿನಗೆ ಶರಣಾಗಿ ಬಂದುಬಿಟ್ಟೆ. ದಾಸನನ್ನಾಗಿ ಸ್ವೀಕರಿಸಿ ಅನುಗ್ರಹಿಸು ! ಭೂಮಿಯ ಮೇಲೆ ನಿಂತಿರುವ ಘನ ಮೇಘಗಳಿಂದ ಆವೃತವಾದ ಹಾದಿಗಳನ್ನುಳ್ಳ ತಿರುವೇಂಗಡದ ಮಲೆಯ ಮೇಲಿನ ಸ್ವಾಮಿಯೇ ! ಎಷ್ಟೆಷ್ಟೋ ಕುಲಗಳಲ್ಲಿ ಹುಟ್ಟಿ, ಸತ್ತು, ನೋವನ್ನು ಅನುಭವಿಸಿ ಬಾಧೆ ಪಟ್ಟವನೂ; ಯಾವ ಬಗೆಯ ನಲ್ಮೆಯೂ ಇಲ್ಲದವನೂ, ಒಳ್ಳೆಯ ಕೆಲಸಗಳನ್ನೇ ಮಾಡಿಲ್ಲದವನೂ ಆಗಿ ಅನೇಕ ಕೋಟಲೆಗಳಲ್ಲಿ ಸಿಲುಕಿದವನಾಗಿ ಈಗ ನಾನಾಗಿಯೇ ನಿನ್ನ ಅಡಿದಾವರೆಗಳನ್ನು ಆಶ್ರಯಿಸಿ ಬಂದಿದ್ದೇನೆ. ನನ್ನನ್ನು ದಾಸನನ್ನಾಗಿ ಸ್ವೀಕರಿಸಿ ಕೃಪೆ ತೋರು ! ಭವ್ಯ ಕೋಟೆಯಂತೆ ಬಳಸಲ್ಪಟ್ಟ ಬೆಟ್ಟಗಳಿಂದ ಕೂಡಿ ಮಧ್ಯದ ಮಲೆಯ ನೆತ್ತಿಯಲ್ಲಿ ನೆಲಸಿರುವ ತಿರುವೇಂಗಡದ ಸ್ವಾಮಿಯೆ ! ನನ್ನ ತಂದೆಯೆ ! ಸರ್ವಶಕ್ತನೇ ! ಅನೇಕ ವಿಧ ಪಾಪಗಳನ್ನು ಎಸಗಿ ದುಃಖ ಸಂಕುಲಗಳಲ್ಲಿ ತೊಳಲಿ ಈಗ ನಿನ್ನ ಶ್ರೀಪಾದಗಳನ್ನು ಆಶ್ರಯಿಸಿ ಸ್ತೋತ್ರ ಮಾಡಲೂ ಶಕ್ತಿಯಿಲ್ಲದವನಾಗಿ ಬಂದು ಸೇರಿದ್ದೇನೆ. ನನ್ನನ್ನು ದಾಸನನ್ನಾಗಿ ಮಾಡಿಕೊಂಡು ಅನುಗ್ರಹಿಸು ! ಆಕಾಶವನ್ನು ಭೇದಿಸಿಕೊಂಡು ಹೋಗುವ ಶಿಖರಗಳನ್ನು ಉಳ್ಳ ಪರಿಮಳಭರಿತವಾದ ವೇಂಗಡದಲ್ಲಿ ಬಿಜಮಾಡಿಸಿರುವ ದೇವ ದೇವನೇ ! ಪಂಚಭೂತಗಳಿಂದ ಆದ ಶರೀರವು ವ್ರಣ ಬಾಧೆಗಳಿಗೆ ಸಿಲುಕಿರುವುದಲ್ಲದೆ ದುಃಖಾದಿ ಕ್ಲೇಶಗಳಿಗೆ ಸಿಕ್ಕಿ ಝರ್ಝರಿತಗೊಂಡಿದೆ. ಈಗ ನೀನೇ ಗತಿಯೆಂದು ನಂಬಿ ನಿನ್ನನ್ನು ಸೇರಿದ್ದೇನೆ,

ನನ್ನನ್ನು ನಿನ್ನ ನಿತ್ಯಕಿಂಕರನನ್ನಾಗಿ ಮಾಡಿಕೊಂಡು ಕಾಪಾಡು ! ಆನೆಗಳು ಹೆಚ್ಚಿನ ಸಂಖ್ಯೆಯಲ್ಲಿ ನೆಲಸಿರುವ ಪುಷ್ಪಭರಿತವಾದ ತಿರುವೇಂಗಡದ ಒಡೆಯನೇ ! ಹರಿಯೇ ! ಬಾಲ್ಯದಲ್ಲಿ ಅರಿವಿಲ್ಲದೆ ಅನೇಕ ಪಾಪಗಳನ್ನು ಮಾಡಿದ್ದೆ, ಯೌವ್ವನದಲ್ಲಿ ಅವಿವೇಕದಿಂದ ವಿಷಯವ್ಯಾಪ್ತಗಳಲ್ಲಿ ಸಿಕ್ಕಿ ಕಷ್ಟಪಟ್ಟೆ. ಇಂತಹವನು ಈಗ ನಿನ್ನನ್ನೇ ನಂಬಿ ಬಂದಿರುವೆನು. ನಿನ್ನ ತಿರುವಡಿಗಳನ್ನು ಅನುಗ್ರಹಿಸಿ ನನ್ನಿಂದ ದಾಸ್ಯವನ್ನು ಸ್ವೀಕರಿಸು ! ಜೇನು ಹರಿದು ಪ್ರವಹಿಸುವ ತಂಪು ತೋಪುಗಳಿಂದ ನಿಬಿಡಗೊಂಡ ತಿರುವೇಂಗಡದ ಸ್ವಾಮಿಯೇ ! ನನ್ನ ಒಡೆಯನೆ, ಜನ್ಮ ಜನ್ಮಾಂತರಗಳು ಉಂಟಾಗುವಂತೆ ತಪ್ಪುಮಾಡಿಬಿಟ್ಟೆ. ನಿನ್ನನ್ನು ಕಂಡು ಸೇವಿಸಬೇಕೆಂಬ ಅಪೇಕ್ಷೆಯಿಂದ ಈ ಜನ್ಮದಲ್ಲಿ ಭಕ್ತನಾಗಿ ಏರ್ಪಟ್ಟೆ. ಮುಂದೆ ಬರಬಹುದಾದ ಜನ್ಮಗಳನ್ನು ನೆನೆದೇ ದುಃಖವಾಗುತ್ತಿದೆ. ಕಷ್ಟಗಳನ್ನು ತಾಳಲಾರದೇ ನಿನಗೆ ಶರಣಾಗತನಾಗಿ ಬಂದಿದ್ದೇನೆ, ರಕ್ಷಿಸು ! ಆಶ್ಚರ್ಯಗುಣಚೇಷ್ಟಿತನೇ ! ಪುರುಷಕಾರ ಮಾಡುವ ಸಿರಿದೇವಿಯ ವಲ್ಲಭನೇ ! ಬೆಟ್ಟದ ಗುಹೆಗಳಿಂದಲೂ, ಜೇನು ಒಸರುವ ತಾವರೆಗಳ ಸಮೂಹದಿಂದಲೂ ಕೂಡಿರುವ ತಿರುಮಲೆಯಲ್ಲಿ ನಿಂತ ಸ್ವಾಮಿಯೇ ! ಯಾವ ವಿಧವಾದ ಆಧಾರವೂ ಇಲ್ಲದೆ ತೊಳಲುತ್ತಿದ್ದೇನೆ. ಪಾಪಗಳನ್ನು ಅಧಿಕವಾಗಿ ಮಾಡಿ ಕ್ಷಮೆಗೇ ಅನರ್ಹನಾಗಿದ್ದೇನೆ. ಯಾವ ಉಪಾಯವನ್ನೂ ಅರಿಯದೆ ಈಗ ನೀನೇ ಅನನ್ಯಾರ್ಹ ಶೇಷಭೂತನೆಂದು ಅರಿವು ಉಂಟಾಗಿರುವುದರಿಂದ ನಿನ್ನಲ್ಲೇ ಬಂದು ಸೇರಿದ್ದೇನೆ. ನನ್ನನ್ನು ನಿನ್ನ ನಿತ್ಯದಾಸ್ಯಕ್ಕೆ ಒಪ್ಪಿಸಿಕೋ, ಕರುಣಿಸು ! ಸಕಲಲೋಕಗಳಿಗೂ ಚಕ್ಷುಸ್ಸಿನಂತಿರುವವನೂ, ಉಸುರಿನಂತಿರುವವನೂ, ನೀಲಮೇಘಶ್ಯಾಮನೂ, ನಿತ್ಯಸೂರಿ ಸಂಸೇವಿತನೂ ಆರಾಮಗಳಿಂದ ಆವೃತ್ತವಾದ ವೇಂಗಡದಲ್ಲಿ ನೆಲಸಿರುವವನೂ, ವೇದಪ್ರತಿಪಾದ್ಯನೂ ಆದ ಸ್ವಾಮಿಯನ್ನು ಕುರಿತು, ಘನವಾದ ಮಾಳಿಗೆಗಳಿಂದಲೂ ಭವನಗಳಿಂದಲೂ ಆವೃತವಾದ ತಿರುಮಂಗೈ ನಾಡಿನ ನಾಯಕಮಣಿಯಾದ ಕಲಿಯನ್ ಎಂದು ಪ್ರಖ್ಯಾತನಾದ ತಿರುಮಂಗೈ ಆಳ್ವಾರ್ ಹಾಡಿದ ಗಾಯನದಲ್ಲಿನ ಈ ಹತ್ತು ಪಾಶುರಗಳನ್ನು ಓದಿದವರಿಗೆ ಪ್ರತಿಬಂಧಕವಾಗಿ ನಿಲ್ಲುವ ಪಾಪಗಳೆಲ್ಲವೂ ಲೇಶಮಾತ್ರವೂ ಉಳಿಯದೆ ನಾಶಗೊಳ್ಳುವುವು.

ಮುಂದಿನ ಹತ್ತು ಪಾಶುರಗಳಲ್ಲಿ, ಇಷ್ಟಪ್ರಾಪ್ತಿ ಈಗಾಗಿದೆ, ಮುಂದೆ ಅನಿಷ್ಟ ನಿವಾರಣೆಯನ್ನು ಮಾಡಿ ಅನುಗ್ರಹಿಸು ಎಂದು ಆಳ್ವಾರ್ ಬೇಡುತ್ತಾರೆ.

ವಿಶಾಲವಾದ ಸಮುದ್ರದಿಂದ ಆವರಿಸಿದ್ದ ಲಂಕೆಗೆ ನಾಯಕನಾದ ರಾವಣನ ಘನ ಶರೀರವು ಸೀಳುವಂತೆ ಬಾಣ ಪ್ರಯೋಗ ಮಾಡಿದವನೇ ! ಬ್ರಹ್ಮನೇ ಮೊದಲಾದಸುರ ಸಮೂಹವು ಸೇವಿಸುವಂತಹ ತಿರುವೇಂಗಡದಲ್ಲಿ ಬಿಜಮಾಡಿಸಿರುವ ಸ್ವಾಮಿಯೇ, ನನ್ನ ಕ್ಲೇಶಗಳನ್ನು (ವಿರೋಧಿಗಳನ್ನೂ) ಹೋಗಲಾಡಿಸಿ

ಅನುಗ್ರಹಿಸು ! (ನನ್ನ ಒಳಗೇ ಪರಮಾತ್ಮನ ಆಶ್ರಯ ಹೊಂದಲು ಅವಕಾಶ ನೀಡದಂತಹ ಶತ್ರುಗಳು ಇದ್ದಾರೆ. ಅವೇ ಅರಿಷಡ್ವರ್ಗಗಳು, ಅವುಗಳಿಂದ ಪ್ರೋಷಣಗೊಂಡ ಪ್ರತಿಬಂಧಕ ಚೇತನಗಳು. ಇವೂ ಅಳಿಯುವಂತೆ ಮಾಡಿ ನನ್ನಲ್ಲಿ ಜ್ಞಾನವೇರ್ಪಡುವಂತೆ ಮಾಡು ಎನ್ನುವುದು ವಿಶೇಷಾರ್ಥ) ಒಂದು ಕಾಲಕ್ಕೆ ಲಂಕೆಗೆ ಆಳರಸರಾಗಿದ್ದ ಮಾಲಿ ಮೊದಲಾದವರ ಗುಂಪು ನಾಶವಾಗುವಂತೆ ನಿನ್ನ ಗರುಡ ಧ್ವಜವನ್ನು ಸಂಚಾರ ಮಾಡಿಸಿದವನೆ, ಮೇಲೆ ಸಂಚರಿಸುವ ಸೂರ್ಯ ಚಂದ್ರರು ತಿರುವೇಂಗಡದ ಶಿಖರದ ಅಡ್ಡ ಬರುವಿಕೆಯಿಂದಾಗಿ ಅದರ ಅಕ್ಕ ಪಕ್ಕಗಳಲ್ಲಿ ಸರಿದು ಸಾಗುವಂತೆ ಇರುವ ಅಗ್ರಭಾಗದಲ್ಲಿ ನೆಲಸಿರುವ ತಿರುವೇಂಗಡದ ಒಡೆಯನೇ ! ತುಳಸಿಯ ದಿವ್ಯಾಲಂಕಾರ ಮಂಡಿತನೇ ; ನನ್ನಲ್ಲಿ ಕೃಪೆಮಾಡು ! ನೀರಿಂದ ಆವೃತವಾದ ಸಮುದ್ರ, ಮತ್ತು ಪೃಥ್ವೀ ವಲಯ ಮತ್ತೂ ಇತರ ಸಮಸ್ತವನ್ನೂ ನುಂಗಿ, ಸುಂದರವಾದ ಎಳೆಯ ಆಲದೆಲೆಯ ಮೇಲೆ ಮಲಗಿದ ಸ್ವಾಮಿಯೇ ! ಸೌಂದರ್ಯಮಯವೂ, ಮಹಿಮಾವಿಷ್ಟವೂ ಆಗಿರುವ ತಿರುವೇಂಗಡದಲ್ಲಿ ನಿಂತಿರುವ ಸುಖೋಷ್ಣವಾದ ಕ್ಷೀರ ಸದೃಶವಾದ (ಅಮೃತಮಯ) ಸ್ವಾಮಿಯೇ ! ನನ್ನ ಮೇಲೆ ಅವಿಚ್ಛಿನ್ನವಾದ ಕೃಪೆಯನ್ನು ತೋರಿಸು. ಉರೆಯಲ್ಲಿ ಇಟ್ಟಿದ್ದ ನರುಗಂಪು ಬೀರುತ್ತಿದ್ದ ತುಪ್ಪವನ್ನು ಅಮೃತವೆಂದು ಭಾವಿಸಿ ತಿಂದವನೇ, ವಾಮನನಾಗಿ ಬಂದು ಎರಡು ಅಡಿಗಳಿಂದ ಭೂಮಿಯನ್ನೆಲ್ಲಾ ಅಳೆದವನೇ, ಪರಮಪದವನ್ನು ಮುಟ್ಟುವ ಉನ್ನತ ಶಿಖರದ ತಿರುವೇಂಗಡದಲ್ಲಿ ನಿತ್ಯವಾಸ ಮಾಡುವ ದೇವಾದಿ ದೇವನೇ, ನನ್ನ ಮೇಲೆ ಕೃಪೆಯನ್ನು ಬೀರುವಂತಹವನಾಗು ! ಕಂಬವನ್ನೊಡೆದು, ನರಸಿಂಹನಾಗಿ ಹೊರಬಂದು, ನಿನ್ನನ್ನು ಅಲಕ್ಷಿಸಿದ ಹಿರಣ್ಯಕನನ್ನು ಸೀಳಿದವನೇ, ಮಹಾಪರ್ವತವೆನಿಸುವ ತಿರುವೇಂಗಡದಲ್ಲಿ ನಿಂತವನೇ ! ಪ್ರತಾಪಶಾಲಿಯಾದ ಆದಿಶೇಷವನ್ನೇ ಹಾಸಿಗೆಯನ್ನಾಗಿ ಉಳ್ಳವನೇ, ನೀನೇ ಬಂದು ನನ್ನನ್ನು ಸ್ವೀಕರಿಸು ! ಕಾಪಾಡು ! ಅಸ್ಥಿರವಾದ ಈ ಮನುಷ್ಯ ಜನ್ಮವನ್ನು ನೀಗಿಸಿ ತನಗೆ ಆಳನ್ನಾಗಿ ಮಾಡಿಕೊಂಡು ತನ್ನ ಪರಮ ಕೃಪೆಯನ್ನು ನನ್ನ ಮೇಲೆ ಬೀರಿ ಕಾಪಾಡುವ ಸ್ವಾಮಿಯಾದವನು, ಮಿಂಚಿನಿಂದ ಕೂಡಿದ ಮೇಘಗಳು ದಟ್ಟಯಿಸಿದ ತಿರುವೇಂಗಡದ ಮೇಲಿನ ನನ್ನ ಆನೆ, (ಮುದ್ದಾದವನು) ನನ್ನ ಸ್ವಾಮಿಯು, ನನ್ನ ಮನಸ್ಸಿನಲ್ಲಿ ನೆಲಸಿ ಅನುಗ್ರಹ ಮಾಡಿದ್ದಾನೆ. ಜಿಂಕೆಯ ಕಣ್ಣಿನಂತೆ ಸುಂದರ ನಯನಗಳ ನಪ್ಪಿನ್ನೈಗಾಗಿ ಸೊಕ್ಕಿದ ವೃಷಭಗಳೇಳನ್ನು ಕೊಂದುಹಾಕಿದವನೇ ! ಸುಂದರ ಪರ್ವತ ಸದೃಶವಾದ ಭುಜ ಪ್ರದೇಶಗಳನ್ನು ಹೊಂದಿರುವವನೇ, ಜೇನಿನಂತೆ ಇನಿದಾದ ಸ್ವಾಮಿಯೇ, ತಿರುವೇಂಗಡದ ಮೇಲೆ ನಿತ್ಯವಾಸ ಮಾಡುವವನೇ ನನ್ನ ಮನಸ್ಸನ್ನೂ ವಾಸ ಸ್ಥಾನವನ್ನಾಗಿ ಮಾಡಿಕೊಂಡು ನೆಲಸಿರುವವನಾಗಿದ್ದೀಯೆ ! ಭಕ್ತಿಹೀನರಿಗೆ ಸಿಕ್ಕದವನೂ, ಭಕ್ತಿಯುಳ್ಳವರಿಗೆ

ಸುಲಭನೂ, ದಾಸನಾಗಿ ತೋರುವವನೂ, ನನ್ನ ಮನಸ್ಸಿನಲ್ಲಿ ನೆಲಸಿರುವ ಆಶ್ಚರ್ಯ ಭೂತನೂ, ಬಿದಿರುಗಳು ಬಿರಿದು ಪ್ರಕಾಶವಾದ ಬಿಳಿಯ ಮುತ್ತುಗಳನ್ನೂ ಪ್ರಕಾಶಿಸುವ ರತ್ನಗಳನ್ನೂ ಉದುರಿಸಿ ಚೆಲ್ಲಾಡುವ ತಿರುವೇಂಗಡದ ನಿತ್ಯವಾಸನಾದ ಆ ಗೋಪಾಲಬಾಲನ ತಿರುವಡಿಗಳನ್ನು ಬಿಟ್ಟು ಮತ್ತೊಂದನ್ನು ನಾನು ಅರಿತದ್ದೇ ಇಲ್ಲ! ಬಂದೆ ! ನನ್ನ ಮನಸ್ಸನ್ನು ತುಂಬಿದೆ ! ಅಲ್ಲಿಯೇ ನಿಂತುಬಿಟ್ಟಿದ್ದೀಯೆ, ನೆಲೆಯಾಗಿ ! ಎಂದೂ ಆರದ ದೀಪ್ತಿಮಯ ತೇಜೋಮೂರ್ತಿಯೇ, ನಮ್ಮ ಕ್ಲೇಶಗಳನ್ನು ದೂರ ಮಾಡುವ ಪ್ರಭುವೇ ! ನೆನೆದ ಮಾತ್ರಕ್ಕೆ ಎಲ್ಲವನ್ನೂ ನೀಡಬಲ್ಲ ಪರಮನೆ ! ತಿರುವೇಂಗಡದ ಮೇಲೆ ನಿಂದವನೆ ! ಇನ್ನು ಮೇಲೆ ನಾನು ನಿನ್ನನ್ನು ನಿಮಿಷ ಮಾತ್ರವೂ ಬಿಟ್ಟಿರಲಾರೆ ಕಂಡೆಯಾ ! ಬಿಲ್ಲುಗಾರರಾದ ಬೇಡರು ತುಂಬಿರುವ ತಿರುವೇಂಗಡ ಪರ್ವತ ಶ್ರೇಷ್ಠದ ಮೇಲೆ ನಿಂತ ಅತಿಶಯ ಬಲಶಾಲಿಯೂ, ಸದೃಢ ಭುಜನೂ, ಇಂದ್ರನೀಲಮಣಿದ್ಯುತನೂ ಆದ ನಮ್ಮ ಸ್ವಾಮಿಯನ್ನು ಕುರಿತು ಪುಷ್ಟವಾದ ತೋಳುಗಳನ್ನುಳ್ಳ ತಿರುಮಂಗೈ ಆಳ್ವಾರ್ ಅನುಗ್ರಹಿಸಿದ ಈ ನುಡಿ ಮಾಲೆಯನ್ನು ಬಲ್ಲವರು ತಾವೂ ನಿತ್ಯಸೂರಿಗಳೇ ಆಗಿಬಿಡುವರು.

ಭಗವಂತನು ತನ್ನ ಪ್ರಾರ್ಥನೆಯನ್ನು ಲಾಲಿಸಿ ತನಗೆ ಒಲಿದಿದ್ದನ್ನು ಕಂಡು ಹಿರಿಹಿಗ್ಗಿದ ಆಳ್ವಾರ್, ಮನಸ್ಸು ತೃಪ್ತಿಭಾವದಿಂದ, ತಾವು ಇಟ್ಟುಕೊಂಡಿದ್ದ ಗುರಿಯನ್ನು ಸಾಧಿಸಿದ ಆನಂದದಿಂದ, ಅದನ್ನು ಆಗಮಾಡಿಸಿದ ಪರಮಾತ್ಮನನ್ನು ಕೃತಜ್ಞತೆಯಿಂದ ಹೊಗಳುತ್ತಾರೆ !

ಎಲೆ ಮನಸ್ಸೇ ! ಘೋರವಾದ ತಪಸ್ಸನ್ನು ಮಾಡಿ ಮನುಷ್ಯರು ತಮ್ಮ ಚಿಂತನೆಯನ್ನು ಪರಿಹರಿಸಿ (ಅಭೀಷ್ಟವನ್ನು ಪಡೆದು) ಅವರನ್ನು ಕಾಪಾಡುವ ಸ್ವಾಮಿಯನ್ನು ಕಾಡಿನವರು (ಬೇಡರು) ಸಮರ್ಪಿಸುವ ಅಗಿಲ್ ಎನ್ನುವ ಗುಗ್ಗುಳದ ಧೂಪದ ಸುವಾಸನೆಯಿಂದ ತುಂಬಿರುವ ತಿರುವೇಂಗಡದಲ್ಲಿ ವಾಸ ಮಾಡುವವನೇ, ಕಪಟ ಬ್ರಹ್ಮಚಾರಿಯಾಗಿ ಬಂದವನೆ, ದಿವ್ಯಸೂರಿಗಳು ತಮ್ಮ ಮನಸ್ಸಿನಂತೆ ವಿಶ್ವಾಸವಿರಿಸಿ ಆರಾಧಿಸುವ ಸ್ವಾಮಿಯೇ, ಇಂದು ನನ್ನ ಕೈಂಕರ್ಯವನ್ನು ಸ್ವೀಕರಿಸಿದೆಯಲ್ಲವೆ ! ಎಲೆ ಮನಸ್ಸೇ, ನುಡಿ. ಆಪ್ತ ಬಂಧು ಜನರು ಎಂದು ಯಾರೂ ಸಂಬಂಧವಿಲ್ಲದ ಒಬ್ಬ ಅದ್ವಿತೀಯನಾದ ಸರ್ವೇಶ್ವರನು ತನ್ನನ್ನು ಪ್ರೀತಿಸುವ ಅಂತರಂಗ ಭಕ್ತರನ್ನು ಅಂಧಕಾರಮಯವಾದ ಭೂಮಿಯಲ್ಲಿ ಜನ್ಮಿಸುವಂತೆ ಮಾಡಿ ಮಾಯೆಯಲ್ಲಿ ಸಿಲುಕಿದ್ದಾಗ ರಕ್ಷಿಸಿ ಕಾಪಾಡಿದನು. ಇಂತಹವನನ್ನು ಕುರವ ಸ್ತ್ರೀಯರು ಕೀರ್ತಿಸುತ್ತಿರಲು, ಭೃಂಗಗಳು ತಮ್ಮ ಝೇಂಕೃತಿಯಿಂದ ಸ್ತುತಿಸುತ್ತಿರಲು, ಅಂತಹ ಧರ್ಮಾತ್ಮನೆನಿಸುವ ಸ್ವಾಮಿಗೆ ದಾಸ್ಯವೃತ್ತಿಗೆ ಎಳೆದೆ ಅಲ್ಲವೆ ? ಬರುವ ಭಕ್ತರುಗಳನ್ನೂ ಅವರ ಸಂಬಂಧದಲ್ಲಿರುವವರನ್ನೂ ಕೂಡಿಕೊಂಡು ಪರಮಪದದಲ್ಲಿ ಸೇರಿಸುವೆಯಲ್ಲ ! ಜೇನಿನಿಂದ ಮದವೇರಿದ

ಭ್ರಮರಗಳು ಉತ್ತರವೇಂಗಡದ ಮಲೆಯಲ್ಲಿ ಸಾನ್ನಿಧ್ಯಗೊಂಡಿರುವ ಮತ್ತು ಆ ಪರ್ವತ ಸಹಿತವಾಗಿಯೇ ಪರಮಪದವನ್ನು ಪರಿಪಾಲಿಸುವ ಸರ್ವೇಶ್ವರನಿಗೆ ಶೇಷ ವೃತ್ತಿಯನ್ನು ಮಾಡಲು ತೊಡಗಿಸಿದೆಯಲ್ಲವೆ? ಎಲೆ ಮನಸ್ಸೇ ! ಚಲಿಸದ ದೃಢ ವ್ಯವಸಾಯ ಮಾಡುತ್ತಿರುವೆ. ಪೂರ್ವದಲ್ಲಿ ಭೂಲೋಕದಲ್ಲಿ ಅವತರಿಸಿ ತನಗೆ ಕೈಂಕರ್ಯವೆಸಗಿದ ದಾಸರನ್ನು ನಿತ್ಯಕಿಂಕರರನ್ನಾಗಿ ಮಾಡಿಕೊಂಡು ಪರಮಪದದಲ್ಲಿ ಸ್ಥಾಪಿಸಿದಂತಹ ಸ್ವಾಮಿಯನ್ನು, ಗೋಪಿಯರ ನಾಯಕನನ್ನು, ಮೇಘಗಳು ಕವಿದ ಶಿಖರಗಳಿಂದ ಕೂಡಿದ ವೇಂಗಡವನ್ನು ಪಾಲಿಸುವ, ಜ್ಞಾನಿಗಳು ತಮಗೆ ಪ್ರಾಣ ಸಮಾನನೆಂಬುದಾಗಿ ಅಧ್ಯವಸಾಯ ಮಾಡುವ ಸ್ವಾಮಿಯಾದವನ ಕೈಂಕರ್ಯ ಕಾರ್ಯವನ್ನು ಕೈಗೊಳ್ಳುವಂತೆ ಮಾಡಿದೆಯಲ್ಲವೆ ? ನನ್ನ ಮನಸ್ಸೇ! ರೆಂಬೆ ಕೊಂಬೆ ಗಳಿಂದ ಕೂಡಿ ಅಭಿವೃದ್ಧಿಸುತ್ತಿರುವ ಅಶ್ವತ್ಥವೃಕ್ಷದಿಂದಲೂ, ಅಶೋಕ ವೃಕ್ಷದಿಂದಲೂ, ತಮಗೆ ಅವೇ ಚರಮೋಪಾಯವೆಂಬುದಾಗಿ ಹೇಳುವ ಬೌದ್ಧರೂ, ಜೈನರೂ ತಮ್ಮ ದೇವಾಲಯಗಳಿಂದಲೂ, ತಮ್ಮ ದೇವರುಗಳಿಂದಲೂ ತಾವೇ ತಾವಾಗಿ ಲೋಕವನ್ನೆಲ್ಲಾ ಆಕ್ರಮಿಸಿಕೊಂಡು ವಿಜೃಂಭಿಸುತ್ತಿರುವಾಗ ಇಂತಹ ಆಸುರೀ ಪ್ರವೃತ್ತಿಯಿಂದ ಸುತ್ತುವರಿಯಲ್ಪಟ್ಟಿದ್ದರೂ ಸಹ ಸ್ತುತಿಗೆ ಅರ್ಹವೆನಿಸಿದ ವೇಂಗಡದಲ್ಲಿ ಪರಮ ಕೃಪಾಳುವಾಗಿ ನಿಂತು ಎಲ್ಲರನ್ನೂ ಅನುಗ್ರಹಿಸುತ್ತಿರುವ ಸುಂದರ ನೇತ್ರವುಳ್ಳ ನಾಯಕನಿಗೆ ಈ ವೇಳೆ ಕೈಂಕರ್ಯವನ್ನು ಎಸಗುವ ಭಾಗ್ಯವನ್ನುಂಟುಮಾಡಿದೆಯಲ್ಲವೆ ? ನನ್ನ ಮನಸ್ಸೇ ಕೇಳು ! ಕಟಿ ಭಾಗದಲ್ಲಿ ಕಾಷಾಯಾಂಬರ ಧರಿಸಿದವರೂ, ಮುಂಡನ ಮಾಡಿಸಿಕೊಂಡವರೂ, ಜೈನ ಮತಸ್ಥರೂ, ಒಬ್ಬರ ಮೇಲೊಬ್ಬರು ಇಷ್ಟ ಬಂದಷ್ಟು ತಿಂದು ಉಂಡು ಅದರ ಮೇಲೆ ತಾವೂ ತಮ್ಮ ಸಂಬಂಧದವರನ್ನೂ ಸೇರಿಸಿಕೊಂಡು ಶರೀರವು ದಢಿದಢಿಯಾಗುವಂತೆ ಪೋಷಿಸಿಕೊಂಡು ಇರಲು, ಚಮರೀ ಮೃಗಗಳು ಗುಂಪು ಗುಂಪಾಗಿ ವಿಹರಿಸುವ ತಿರುವೇಂಗಡದಲ್ಲಿ ಕೋಯಿಲ್‌ಕೊಂಡ, ಪರಮಭೋಗ್ಯವೂ ವಿಶಾಲವೂ ಆದ ಪರಮಪದ ನಿವಾಸಿಗಳಿಗೂ, ನಿತ್ಯಸೂರಿಗಳಿಗೂ ನಾಯಕನಾದ ಸರ್ವೇಶ್ವರನಿಗೆ ಇಂದು ಕೈಂಕರ್ಯ ಭಾಗ್ಯವನ್ನು ಬೆಳೆಸುವಂತೆ ಮಾಡಿದೆಯಲ್ಲವೆ ? ಶುಷ್ಕವಾದ ಗಳಿಂದ ಜೈನರನ್ನಾಗಿ ಮಾಡಿಕೊಂಡು, ಮೋಸ ಕಪಟಗಳಿಂದ ವಂಚಿಸಿಕೊಂಡು, ಅನ್ನದ ತುತ್ತನ್ನು ಗಂಟಲು ತುಂಬಾ ಗಿಡಿದು ಜೀವನ ಸಾಗಿಸುತ್ತಿರುವರು. ಇಂತಹ ಹೀನ ಪರಿಸ್ಥಿತಿಯನ್ನು ಕಂಡರೆ ಮರುಕವಾಗುತ್ತದೆ. ಭ್ರಮರಗಳು 'ಮರುಕ್ಕಳ್' ಎನ್ನುವ ದಿವ್ಯಗಾಯನದಿಂದ ಹಾಡುವ ವೇಂಗಡದಲ್ಲಿ ದೇಗುಲ ಮಾಡಿಕೊಂಡು ನೆಲಸಿ, ಆಗಸದಲ್ಲಿ ತಿರುಗುತ್ತಿರುವ ಸೂರ್ಯಮಂಡಲದ ಮಧ್ಯ ವರ್ತಿಯಾದ ಸ್ವಾಮಿಗೆ ಕೈಂಕರ್ಯವೆಸಗುವಂತೆ ಮಾಡಿದೆಯಲ್ಲವೆ ? ಅವನು ಅತಿ ದುರ್ಲಭನು ಎನ್ನುವ ದುರ್ವಾದ ಮಾಡುವುದೂ, ನಿಕೃಷ್ಟ ಮನುಷ್ಯ ಜನ್ಮದಲ್ಲಿ

ಜನ್ಮವೆತ್ತಿದೆನು ಎಂಬುದಾಗಿ ವಾದ ಮಾಡುವುದೂ, ಕೈಗೆ ಸಿಕ್ಕದವನನ್ನು ಹೇಗೆ ಆರಾಧಿಸಬಹುದು ಎಂಬುದಾಗಿ ವಾದ ಮಾಡುವರಲ್ಲಾ ! ನನ್ನ ಹೃದಯವೇ, ಅವರಿಗೆ ಏನು ಹೇಳುವುದು ? ನವಗೇನೂ ಹೇಳದೆ ಬಿದಿರುಗಳು ದಟ್ಟವಾಗಿ ಬೆಳೆದು ಬಿಳಿ ಮುತ್ತಿನ ಗೊಂಡೆಯನ್ನು ಎತ್ತಿ ಹಿಡಿದ ವೇಂಗಡದಲ್ಲಿ ದೇಗುಲ ಹೊಂದಿದ ಗೊಲ್ಲರ ಅರಸನಿಗೆ ಈದಿನ ದಾಸನಾಗಿ ಇರುವಂತೆ ಮಾಡಿದೆಯಲ್ಲ, ಅದೇ ಸಾಕು. ಬೇರೇನೂ ಬೇಕಾಗಿಲ್ಲ. ಮನುಷ್ಯರ ಜೊತೆಗೂಡಿ ಅವರು ಯಾವ ವಿಷಯಾಂತರ ಗಳಲ್ಲಿ ತೊಳಲಿದರೋ ಅದರಲ್ಲಿಯೇ ನೀನೂ ತೊಳಲಿ, ಅವರೆಂದಂತೆಯೇ ನೀನೂ ಹೇಳುತ್ತ ಬಂದೆಯಲ್ಲವೆ ? ನನ್ನ ಮನಸ್ಸೇ, ಹೇಳು ಈಗ ನಾನು ಹೇಳುವುದನ್ನು ಕೇಳಿಕೋ. ಎಷ್ಟೋ ಜನರು ಕೀರ್ತಿಸಿ, ನರ್ತಿಸಿ, ನಮಸ್ಕರಿಸಿ, ಸ್ತುತಿಸಿ ಸಾಕ್ಷಾತ್ಕರಿಸಿಕೊಂಡ ಜಯಶೀಲನೂ, ತಾಮರೆಯಲ್ಲಿ ಜನಿಸಿದ ಚತುರ್ಮುಖನೂ, ಈಶ್ವರನೂ, ದೇವೇಂದ್ರನೂ ಎದುರಿಗೆ ನಿಂತು ಹಾಡುವ ವೇಂಗಡದಲ್ಲಿ, ನೃತ್ಯ ಪಟುವೂ ಬಾಲಕೃಷ್ಣ ರೂಪಿಯೂ ಆದ ವೇಂಗಡದೊಡೆಯನಿಗೆ ಈಗ ಕೈಂಕರ್ಯ ವೆಸಗುವ ದಾಸ್ಯ ವೃತ್ತಿಯನ್ನು ನೀಡಿದೆಯಲ್ಲವೆ ? ಹೊಳೆಯುವ ಮಿಂಚುಳ್ಳ ದೊಡ್ಡ ಕಾರ್ಮುಗಿಲುಗಳು ದಟ್ಟಯಿಸುವ ತಿರುವೇಂಗಡದ ಮೇಲೆ ದೇಗುಲ ಗೊಂಡ, ಹಂಸವಾಗಿ ಅವತರಿಸಿದ, ನಿತ್ಯಸೂರಿಗಳಿಗೆ ದೊರೆಯೆನಿಸಿದವನನ್ನು ಕುರಿತು, ಹಿರಿದಾದ ಸುದೃಢ ಪ್ರಾಕಾರದ ತಿರುಮಂಗೈ ನಾಡಿನಲ್ಲಿನ ಆಳ್ವಾರರು ಹೇಳಿದ ಸುಂದರ ತಮಿಳಿನ, ವೇದಕ್ಕಿಂತ ಇನಿದಾದ ಈ ಹಾಡುಗಳನ್ನು ಬಲ್ಲವರಿಗೆ ಪರಮ ಪದವೇ ವಾಸಸ್ಥಳವಾಗುವುದು, ಇದು ನಿಶ್ಚಯ !

ತಿರುಮಂಗೈ ಆಳ್ವಾರ್ ಶೈಲಿ ಒಂದು ತೆರ. ಇದು ವರ್ಣನೆಯಿಂದಲೂ, ಭಕ್ತಿಯಿಂದಲೂ ಸಂಮಿಶ್ರಿತಗೊಂಡ ವೈಖರಿ. ಪರಮಾತ್ಮನಲ್ಲಿ ಭಕ್ತಿಭಾವದೊಳು ತಾವೂ ಮೈಮರೆಯುತ್ತಾರೆ, ನಮ್ಮನ್ನೂ ಆ ಭಾವುಕ ಪ್ರಪಂಚಕ್ಕೆ ಕೊಂಡೊಯ್ಯುತ್ತಾರೆ. ನಮ್ಮಾಳ್ವಾರ್‌ರ ಭಕ್ತಿಮಾರ್ಗ ಒಂದು ತೆರನದು, ಇವರದ್ದು ಮತ್ತೊಂದು ತೆರನಾದದ್ದು. ನಮ್ಮಾಳ್ವಾರ್ ಗಂಭೀರರಾಗಿ ಚಿಂತನಾ ಮನಸ್ಕರಾಗಿ ನಮ್ಮನ್ನು ಪರಮಾತ್ಮನಿರುವ ಬೆಟ್ಟದ ಮೇಲಕ್ಕೆ ಕೊಂಡೊಯ್ದರೆ, ತಿರುಮಂಗೈ ಆಳ್ವಾರ್ ಪರಮಾತ್ಮನ ಲೀಲೆಗಳನ್ನು ಸ್ವಾರಸ್ಯವಾಗಿ ವರ್ಣಿಸುತ್ತಾ, ದಾರಿಯಲ್ಲಿನ ಪ್ರಕೃತಿ ಚಿತ್ರವನ್ನು ತೋರಿಸುತ್ತಾ, ಅವುಗಳ ಸೊಬಗನ್ನೂ ಉಣಬಡಿಸಿ, ಮೇಲಿನ ಪರಮಾತ್ಮನ ಆಲಯಕ್ಕೆ ಕೊಂಡೊಯ್ಯುತ್ತಾರೆ. ತಿರುಮಂಗೈ ಆಳ್ವಾರ್ ಪಾಶುರಗಳಲ್ಲಿ ಪ್ರಕೃತಿ ವರ್ಣನೆ ಅಲ್ಲಲ್ಲಿ ಕಂಡುಬರುತ್ತದೆ. ಮೊದಲಾಳ್ವಾರ್ ಮತ್ತು ತಿರುಮಳಿಶೈ ಆಳ್ವಾರ್ ಪಾಶುರಗಳಿಗೆ ಮುಗಿದಿದ್ದ ಆ ವರ್ಣನೆಗಳು ಮತ್ತೆ ತಿರುಮಂಗೈ ಆಳ್ವಾರ್ ಪಾಶುರಗಳಲ್ಲಿ ಕಾಣಿಸುತ್ತವೆ.

ಬೇಡರು ತಿರುವೇಂಗಡದಲ್ಲಿ ವಾಸವಾಗಿರುವುದು, ಬಿದಿರು ಮೆಳೆಗಳು ಬೆಳೆದಿರುವುದು, ಸುಂದರವಾದ ಉದ್ಯಾನ, ಕಾಲುವೆ ಜಲಪಾತಗಳ ದೃಶ್ಯ, ಸುಂದರವಾದ ಕುರವ ಸ್ತ್ರೀಯರು ತೆನೆಯಿಂದ ಕಂಗೊಳಿಸುವ ಹೊಲಗಳಲ್ಲಿ ಅಟ್ಟಣಿಗೆಯಲ್ಲಿ ನಿಂತು ಹಕ್ಕಿಯನ್ನು ಓಡಿಸುವ ದೃಶ್ಯ, ಬಿದಿರು ತೆನೆಗಳಿಂದ ಮುತ್ತು ರತ್ನಗಳು ಬಿರಿದು ಚೆಲ್ಲಾಡುವ ದೃಶ್ಯ, ಮೇಘದಿಂದ ಆವೃತವಾದ ಬೆಟ್ಟದ ದಾರಿಗಳು, ಆನೆಗಳು ಓಡಾಡುವ ದೃಶ್ಯ, ಶಿಖರದ ಅಡ್ಡ ಬರುವಿಕೆಯಿಂದಾಗಿ ಸೂರ್ಯ ಚಂದ್ರರು ಅದರ ಆಚೀಚೆಗೆ ಸರಿದು ಮುಂದುವರಿಯುವುದು, ಬಿಲ್ಲುಗಾರ ಬೇಡರು ಮತ್ತು ಕುರವ ಸ್ತ್ರೀಯರು ದೇವರನ್ನು ಪೂಜಿಸಿ 'ಅಗಿಲ್' ಎಂಬ ಗುಗ್ಗುಳದ ಧೂಪವನ್ನು ಉರಿಸುವುದು — ಈ ಎಲ್ಲವೂ ಹಿಂದೆ ನಾವು ಕಂಡ ದೃಶ್ಯಗಳೇ ಬೇರೆ ರೀತಿಯಲ್ಲಿ ಇಲ್ಲಿ ವಿವರಣೆಗೊಂಡಿದೆ. ಅಂತೂ ಒಂದು ವಿಚಾರವನ್ನು ನಾವು ನಿರ್ಧರಿಸಬಹುದು. ಈ ಕುರವರು, ಬೇಡರು ತಿರುಮಂಗೈ ಆಳ್ವಾರ್ ಅವರ ಕಾಲದಲ್ಲೂ ಇದ್ದರು. ತಿರುಮಂಗೈ ಆಳ್ವಾರ್ ಕಡೆಯ ಆಳ್ವಾರ್‌ರು. ಇವರ ಕಾಲ ಕ್ರಿ.ಶ. ೮ ರಿಂದ ೯ನೇ ಶತಮಾನ. ಕ್ರಿ.ಶ. ೩–೪–೫ನೇ ಶತಮಾನಗಳಲ್ಲಿ ಮೊದಲಾಳ್ವಾರ್ ಕಂಡ ಬೇಡರೇ, ಬೇಡ ಸ್ತ್ರೀಯರೇ ಈಗಲೂ ನೆಲಸಿದ್ದಾರೆ. ಅವರು ಹೊಲ ಕಾಯುತ್ತಿದ್ದರು, ಈಗಲೂ ಕಾಯುತ್ತಿದ್ದಾರೆ. ಅವರ ಹೆಂಗಸರು ಆಗಲೂ ಪೂಜೆ ನಡೆಸುತ್ತಿದ್ದರು, ಈಗಲೂ ನಡೆಸುತ್ತಿದ್ದಾರೆ. ಎಂದರೆ ತಿರುಪತಿಯ ದೇವರು ಎಲ್ಲರಿಂದಲೂ ಪೂಜೆಗೊಳುತ್ತಿದ್ದಂತೆ ಕುರವ ಬೇಡರಿಂದ ಪೂಜೆಗೊಳ್ಳುತ್ತಿದ್ದಾನೆ. ಅವನು, ರಾಮಚಂದ್ರರಾಯರು ' ಹೇಳಿದಂತೆ ಕುರವರಿಗೂ ಬೇಡರಿಗೂ ಮಾತ್ರ ಸ್ವಂತವಾದ ದೇವರಲ್ಲ. ಈಗಲೂ ಬಿದಿರು ಮೆಳೆ ತುಂಬಿದ್ದುವು, ಆಗಿನ ಕಾಲಕ್ಕೂ ಬಿದಿರು ಗಿಡಗಳು ಇದ್ದುವು. ನಮ್ಮಾಳ್ವಾರ್ ಅವರೂ ಬಿದಿರು ಮೆಳೆಗಳನ್ನು ವರ್ಣಿಸಿದ್ದಾರೆ ಎಂದಾಗ ಬೆಟ್ಟ ಪೂರ್ತಿ ಬಿದಿರು ಮೆಳೆಗಳಿಂದಲೇ ತುಂಬಿ ಕಾಡಾಗಿರಲಿಲ್ಲ. ಊರಿದ್ದ ಜಾಗದಲ್ಲಿ ಇವು ಇರಲಿಲ್ಲ, ಊರಿನ ಹೊರಗೆ ಕಾಡಿನಲ್ಲಿ ಇವು ಹೇರಳವಾಗಿದ್ದಿತು ಎಂದು ಅರ್ಥ ಮಾಡಬಾರದೇಕೆ ? ಊರು, ಊರ ಹೊರಗೆ ಹೊಲ, ಹೊಲದಿಂದಾಚೆಗೆ ಹೊಳೆ, ನದಿ, ಝರಿ, ನಂತರ ಕಾಡು ಈ ಚಿತ್ರ ಇರಕೂಡದೇಕೆ ? ಬೆಟ್ಟದ ಕೆಳಗೆ ಇದ್ದ ಊರಿನಿಂದ ಜನ ಬಂದು ಪೂಜೆ ಮಾಡುತ್ತಿದ್ದರು, ಹಿಂತಿರುಗುತ್ತಿದ್ದರು. ಏತಕ್ಕೆಂದರೆ ಬೆಟ್ಟದ ಮೇಲೆ ತಂಗಲು ವ್ಯವಸ್ಥೆ ಇರಲಿಲ್ಲ ಎಂದೇಕೆ ರಾಯರು ಹೇಳುವಂತೆ ತೀರ್ಮಾನಿಸಬೇಕು ? ಕೇವಲ ಬಿದಿರುಮೆಳೆ, ಕುರವರು, ಬೇಡರು, ಇವರಿಂದಲೇ ತಿರುವೇಂಗಡವು ಒಂದು ಹಿಂದುಳಿದ ಜಾಗವಾಗಿತ್ತು ಎಂದು ತೀರ್ಮಾನಿಸುವುದು ತಪ್ಪಾದ ಕಲ್ಪನೆ ಆದೀತು ಅಷ್ಟೇ !

ಈ ಆಳ್ವಾರ್ ಮತ್ತೆ ಒಂದೆರಡು ಹೊಸ ವಿಚಾರವನ್ನು ತಿಳಿಸುತ್ತಾರೆ. ಬೆಟ್ಟದ ಮೇಲೆ ಬೌದ್ಧ ಜೈನರು ತಮ್ಮ ತಮ್ಮ ದೇವಾಲಯಗಳೊಂದಿಗೆ

